# ಆಸ್ತಿಗಳ ವಿಚಾರದಲ್ಲಿ ಸಮಗ್ರ

# ಹಿಂದು ಕಾನೂನು

ಭಾರತದ ಸುಪ್ರೀಮ್ ಕೋರ್ಟ್

ಮತ್ತು

ಹೈಕೋರ್ಟ್ ತೀರ್ಪುಗಳಿಂದ

ಸಂಶೋಧಕ ಮತ್ತು ಸಂಗ್ರಹಕಾರ ಗ್ರಂಥದ ಹಕ್ಕುದಾರರು

## ಶ್ರೀಧರ ಬಾಬು. ಎನ್

ವಕೀಲರು, ತುಮಕೂರು

## ಸಂಶೋಧನೆಗೆ ಮೂಲ

**http://indiankanoon.org**
**&**
**http://www.manupatrafast.in**

(ಕಾನೂನು ಸಂಶೋಧನೆಗಾಗಿ ಅತ್ಯುತ್ತಮ ತಾಣಗಳು)



# ನಿರಾಕರಣೆ

ನನ್ನ ಆನ್‌ಲೈನ್ ದಾಖಲೆಗಳು / ಟಿಪ್ಪಣಿಗಳು / ಪುಸ್ತಕಗಳ ಸರಣಿಯಲ್ಲಿ ಕಾನೂನು ವಿಷಯಗಳ ಬಗ್ಗೆ ಒದಗಿಸಲಾದ ಮಾಹಿತಿಯು ಸಾಮಾನ್ಯ ಕಾನೂನು ಅರಿವಿಗಾಗಿ ಮಾತ್ರ, ಅದರ ಬಳಕೆ ಅಥವಾ ದುರುಪಯೋಗದ ಮೂಲಕ ಯಾವುದೇ ಪರಿಣಾಮಗಳಿಗೆ ನಾನು ಜವಾಬ್ದಾರನಾಗಿರುವುದಿಲ್ಲ. ಎಲ್ಲಾ ದಾಖಲೆಗಳನ್ನು/ ಸಂಶೋಧಿತ ಉಲ್ಲೇಕಗಳನ್ನು ನಿರ್ದಿಷ್ಟ ಅಗತ್ಯಗಳಿಗಾಗಿ ಉಲ್ಲೇಖಿಸಲಾಗಿದೆ, ಅಂತಹ ಯಾವುದೇ ಕಾರಣಗಳಿಗಾಗಿ ಅದನ್ನು ನಕಲಿಸಿದರೆ ಯಾವುದೇ ಗ್ಯಾರಂಟಿ ಅಥವಾ ಖಾತರಿ ಈ ಲೇಖಕನಿಂದ ಇರುವುದಿಲ್ಲ. ದೋಷಗಳು ಮತ್ತು ಲೋಪಗಳನ್ನು ನಿರೀಕ್ಷಿಸಲಾಗಿದೆ. ನನ್ನ ಎಲ್ಲಾ ಬ್ಲಾಗ್ ವೆಬ್ ಸೈಟ್‌ಗಳು / ಲಭ್ಯವಿರುವ ದಾಖಲೆಗಳು / ಪಿಡಿಎಫ್ ದಾಖಲೆಗಳನ್ನು/ ಪ್ರಕಟಿತ ಪುಸ್ತಕಗಳನ್ನು ಸಾಮಾನ್ಯ ಮಾಹಿತಿಗಾಗಿ ಮಾತ್ರ ವಿನ್ಯಾಸಗೊಳಿಸಲಾಗಿದೆ. ಈ ಸೈಟ್‌ಗಳು / ದಾಖಲೆಗಳಲ್ಲಿ /ಪುಸ್ತಕಗಳಲ್ಲಿ ಪ್ರಸ್ತುತಪಡಿಸಲಾದ ಮಾಹಿತಿಯನ್ನು ಔಪಚಾರಿಕ ಕಾನೂನು ಸಲಹೆ ಅಥವಾ ವಕೀಲ / ಕ್ಲೈಂಟ್ ಸಂಬಂಧದ ರಚನೆ ಎಂದು ನಿರ್ಣಯಿಸಬಾರದು. ನನ್ನ ಸೈಟ್‌ಗಳು / ದಾಖಲೆಗಳನ್ನು / ಪುಸ್ತಕಗಳನ್ನು ಪ್ರವೇಶಿಸುವ ವ್ಯಕ್ತಿಗಳು ತಮ್ಮ ವೈಯಕ್ತಿಕ ಕಾನೂನು ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸ್ವತಂತ್ರ ಸ್ಥಳೀಯ ವಕೀಲರನ್ನು / ಸಲಹೆಗಾರರನ್ನು ಸಂಪರ್ಕಿಸಿ ಹೆಚುವರಿ ಮಾಹಿತಿ ಪಡೆಯುವಂತೆ ಪ್ರೋತ್ಸಾಹಿಸಲಾಗುತ್ತದೆ. ಯಾವುದೇ ಅಧಿಕೃತ ಮೂಲ ಪ್ರಕಟಣೆಗಳು, ಸೈಟೇಷನ್ ಗಳು, ಕೋರ್ಟಿನ ಅಧಿಕೃತ ವೆಬ್ ತಾಣಗಳಲ್ಲಿ ಮತ್ತು ದಾಖಲೆಗಳೊಂದಿಗೆ ಪುನಃ ಒಮ್ಮೆ ವಿಷಯಗಳನ್ನು ಮರು ಪರಿಶೀಲಿಸಲು ಪ್ರಾಮಾಣಿಕವಾಗಿ ಸಲಹೆ ನೀಡಲಾಗುತ್ತದೆ. ಉಲ್ಲೇಖಗಳನ್ನು ಕೇವಲ ಮುಂದುವರಿದ ಅಧ್ಯಯನಕ್ಕಾಗಿ ಉಲ್ಲೇಖಿಸಲಾಗಿದೆ, ದಯವಿಟ್ಟು ಅಂತಹ ವರದಿಗಳ ಪ್ರತಿಗಳನ್ನು ಪಡೆಯಲು ಅಂತಹ ಉಲ್ಲೇಖದ ಪೂರೈಕೆದಾರರನ್ನು ಭೇಟಿ ಮಾಡಿ, ಅವರ ಸೇವೆಯನ್ನು ಪಡೆಯುವುದು. ನನ್ನ ಬ್ಲಾಗ್ ಓದುವಿಕೆ ಉಚಿತ ಸೇವೆಯಾಗಿದೆ, ನನ್ನ ಬ್ಲಾಗ್‌ಗಳ ಸರಣಿಯಲ್ಲಿ ಒದಗಿಸಲಾದ ಮಾಹಿತಿ, ಆನ್‌ಲೈನ್ ಡಾಕ್ಯುಮೆಂಟ್‌ಗಳು ಓದಬಲ್ಲ ಮತ್ತು ಡೌನ್‌ಲೋಡ್ ಮಾಡಬಹುದಾದ ದಾಖಲೆಗಳ ಮೇಲೆ ನಾವು

ಅವಲಂಬನೆಯನ್ನು ಆಹ್ವಾನಿಸುವುದಿಲ್ಲ, ಅಥವಾ ಜವಾಬ್ದಾರಿಯನ್ನು ಸ್ವೀಕರಿಸುವುದಿಲ್ಲ. ನಿಖರವಾದ ಮಾಹಿತಿಯನ್ನು ಒದಗಿಸಲು ನಾವು ಎಲ್ಲ ಹೆಚ್ಚಿನ ಪ್ರಯತ್ನಗಳನ್ನು ಮಾಡುತ್ತೇವೆ, ಆದರೆ ಹೊರಸೂಸುವಿಕೆ ಮತ್ತು ಲೋಪಗಳನ್ನು ನಿರೀಕ್ಷಿಸಲಾಗಿದೆ. ಹೇಗಾದರೂ, ನಾವು, ಅಥವಾ ನಮಗೆ ಡೇಟಾವನ್ನು ಒದಗಿಸುವವರು ಅಥವಾ ಸಂಬಂಧಿತ ನ್ಯಾಯಾಲಯದ ವೆಬ್‌ಸೈಟ್‌ಗಳು, ಉಚಿತ ಆನ್‌ಲೈನ್ ವೆಬ್‌ಸೈಟ್‌ಗಳಿಂದ ಪಡೆದ ಮಾಹಿತಿಗಳು, ಒದಗಿಸಿದ ಮಾಹಿತಿಯ ನಿಖರತೆ, ಸಂಪೂರ್ಣತೆ ಅಥವಾ ನವೀಕೃತ ಸ್ವರೂಪಕ್ಕೆ ಸಂಬಂಧಿಸಿದ ಯಾವುದೇ ಭರವಸೆಗಳು, ಜವಾಬ್ದಾರಿಗಳು ಅಥವಾ ಖಾತರಿ ಕರಾರುಗಳನ್ನು ನೀಡುವುದಿಲ್ಲ. ನನ್ನ ಪ್ರಕಟಿತ ಪುಸ್ತಕಗಳಲ್ಲಿ ಮೂಲ ತೀರ್ಪುಗಳ ಉಲ್ಲೇಕಗಳಿದ್ದು, ಹೆಚ್ಚಿನ ತಮ್ಮ ತಮ್ಮ ವಾಸ್ತವಿಕತೆಯೊಂದಿಗೆ ಸಂಶೋಧಿಸಲು ಕೋರಲಾಗಿದೆ. ಬಳಕೆದಾರರು ಅದನ್ನು ಅವಲಂಭಿಸಲು ಸಾಕಷ್ಟು ಪ್ರಾಮುಖ್ಯತೆಯನ್ನು ಹೊಂದಿದ್ದರೆ ಮತ್ತೊಂದು ಅಧಿಕೃತ ಮೂಲದಿಂದ ಮಾಹಿತಿಯನ್ನು ಪರಿಶೀಲಿಸಬೇಕು ಅಥವಾ ದೃಡೀಕರಿಸಿ ಕೊಳ್ಳಬೇಕು.

ಶ್ರೀಧರ ಬಾಬು.ಎನ್

"ಹಿಂದಿರುಗಿ ನೋಡುವ ಅವಶ್ಯಕತೆ ಇಲ್ಲ. ಮುಂದೆ ನೋಡಿ! ನಮಗೆ ಅನಂತ ಶಕ್ತಿ, ಅನಂತ ಉತ್ಸಾಹ, ಅನಂತ ಧೈರ್ಯ, ಅನಂತ ತಾಳ್ಮೆ ಬೇಕು. ಆಗ ಮಾತ್ರ ಮಹತ್ಕಾರ್ಯಗಳನ್ನು ನಾವು ಸಾಧಿಸಬಹುದು."

ಇತ್ತೀಚೆಗೆ ಸುಪ್ರೀಂ ಕೋರ್ಟ್ ಹಿಂದೂ ಕಾನೂನು ವ್ಯಾಖ್ಯಾನಿಸಿ ಮಹಿಳಾ ಕೋಪಾರ್ಸನರ್ ಆಸ್ತಿಯ ಹಕ್ಕು ಬಗ್ಗೆ ನೀಡಿರುವ ತೀರ್ಪುಮುಖ್ಯಾಂಶಗಳು ಸೇರಿಸಿದೆ.

## ನನ್ನ ಸ್ವರ್ಗೀಯ ಮಾತಾ ಪಿತೃಗಳ ನೆನಪಿನಲ್ಲಿ

ಶ್ರೀಮತಿ ಗೌರಮ್ಮ ಮತ್ತು ಶ್ರೀ ಹೆಚ್.ಆರ್. ನಾಗರಾಜಚಾರ್



ಮತ್ತು

ಶಿವೈಕ್ಯ ಗುರುಗಳಾದ

ಎಸ್.ಎಂ. ಸೋಮಶೇಖರಪ್ಪ ರವರ ನೆನಪಿನಲ್ಲಿ



ಇದರಲ್ಲಿನ ಪರಿಶ್ರಮ ಹಿಂದುಸ್ತಾನದ ನ್ಯಾಯಾಲಯಗಳ

ಪ್ರತಿಯೊಬ್ಬ ನ್ಯಾಯಾಧೀಶರದ್ದಾಗಿದೆ




ಇದನ್ನು ಓದಿ, ಉಪಯೋಗಿಸಿ, ಪಸರಿಸಿ, ಕಾನೂನು

ಕ್ಷೇತ್ರದಲ್ಲಿ ಮಹತ್ತರ ಬದಲಾವಣೆ ತನ್ನಿ.

ನಮ್ಮ ಕಕ್ಷಿದಾರರು ಕಾನೂನನ್ನು ತಿಳಿದಿರಲಿ, ತಿಳುವಳಿಕೆ

ನಮ್ಮ ಜೇಬಿಗೆ ಕತ್ತರಿ ಆಗದು, ಅದು ಉತ್ತಮ ನಾಗರೀಕತೆ,

ಸಮಾಜ ಮತ್ತು ರಾಷ್ಟ್ರದ ಏಳಿಗೆಗೆ ಪಾತ್ರವಾಗುತ್ತದೆ.

SRIDHARA BABU.N

9880339764

# ಪರಿವಿಡಿ

## ಅಧ್ಯಾಯ–1

## (ಮೂಲ)

# ಅಧ್ಯಾಯ–2

# (ಚರಿತ್ರೆ)



# ಅಧ್ಯಾಯ–3

# (ಕಸ್ಟಮ್ಸ್ /ಯೂಸೇಜಸ್/ ಪರ್ಸನಲ್ ಲಾ)



# ಅಧ್ಯಾಯ–4

# (ವಾಸ್ತವ ಕಾನೂನು)



# ಅಧ್ಯಾಯ–5

# (ವಿವಿದ ಪಾತ್ರಗಳು)

ಹಿಂದುಗಳಲ್ಲಿ ಆಸ್ತಿ ಹಕ್ಕು ಮತ್ತು ವಿವಿದ ಬಾಂದವ್ಯಗಳು

ಹಿಂದು ದತ್ತು ಪಡೆದಾಗ ಆಸ್ತಿಗಳಲ್ಲಿ ಅನ್ವಯಿಸುವ ಕಾನೂನು

ಹಿಂದು ಕಾನೂನಿನಲ್ಲಿ "ಕರ್ತ"

ದತ್ತು ಮಗ, ಸಾಕು ಮಗ, ಆಸ್ತಿ ಹಕ್ಕುಗಳು

ವಿಭಾಗದಲ್ಲಿ – ಕರ್ತ – ಸಮಾನತೆ – ಮೈನರ್

ಸಹ ಮಾಲೀಕ ಅಥವ ಸಹ ಪಾಲುದಾರರ ಬಗ್ಗೆ ಕಾನೂನಿನಲ್ಲಿ

ಭೂಸುದಾರಣೆ ಕಾಯ್ದೆ ಮತ್ತು ಹಿಂದು ಕಾನೂನು

ಪರಿಶಿಷ್ಟ ಪಂಗಡ ಮತ್ತು ಹಿಂದು ಕಾನೂನು.

ಸ್ವಯಾರ್ಜಿತ ಆಸ್ತಿ ಮತ್ತು ಒಟ್ಟು ಕುಟುಂಬಕ್ಕೆ ಸೇರ್ಪಡೆ

## ಅಧ್ಯಾಯ–6

## (ಕೋಪಾರ್ಸನರಿ)

ಕೋಪಾರ್ಸನರಿ ಮತ್ತು ಅವಿಭಕ್ತ ಕುಟುಂಬ

ವಿವಿದ ಕಾಯ್ದೆಯಲ್ಲಿ ಕುಟುಂಬ

ಕೋಪಾರ್ಸನರಿಯ ಕಾನೂನು ವ್ಯಾಪ್ತಿ ಮತ್ತು ಇತಿಮಿತಿಗಳು

ಕೋಪಾರ್ಸನರ್ ಹುಚ್ಚ ಎಂದಾದರೆ ಹೇಗೆ

ಡಿಸ್ಪೋಸಿಷನ್, ಡಿಸ್ಪೋಸ್ ಮತ್ತು ಅಲಿನೇಷನ್ (ಎಂದರೆ ಯಾವ ಅರ್ಥ ಸೂಚಿಸುತ್ತೆ)

ಹಿಂದು ಆಸ್ತಿಯನ್ನು ಪರಭಾರೆ ಮಾಡುವ ಹಕ್ಕು

## ಅಧ್ಯಾಯ–7

## (ಮಹಿಳಾ ಹಕ್ಕು)

ಮೌಸೂರು ಮಹಿಳಾ ಆಸ್ತಿ ಹಕ್ಕು ಕಾಯ್ದೆ 1933

ಮಹಿಳೆಯರಿಗೆ ಸಂಪೂರ್ಣ ಆಸ್ತಿ ಮಾಲೀಕತ್ವ ಕೊಟ್ಟ ಕಾಯ್ದೆ

ಆಸ್ತಿ ಯಾರ ಹೆಸರಿನಲ್ಲಿ ಖರೀದಿಸಲಾಗಿರುತ್ತದೋ ಅದು ಅವರ ಸ್ವಂತ ಆಸ್ತಿ ಎಂದು ಕಾನೂನು ಪರಿಭಾವಿಸುತ್ತದೆ

ಕಲಂ 8 ರ ಕೆಳಗೆ ಆರ್ಜಿಸಿದ್ದು ಸ್ವಂತ ಆಗುತ್ತೆ.

ಎರಡನೇ ಹೆಂಡತಿ ಇರುವಾಗ ಆಸ್ತಿ ವಿಲೆ ಹೇಗೆ

ಮಹಿಳಾ ಆಸ್ತಿ ಹಕ್ಕು ಮತ್ತು ಕರ್ನಾಟಕ ಕಾನೂನು

ಕೇಂದ್ರ ಸರ್ಕಾರದ 2005 ರ ತಿದ್ದುಪಡಿ

2020 ರ ಸುಪ್ರೀಂ ತೀರ್ಪು

# ಅಧ್ಯಾಯ–8

## (ಪಾರ್ಟಿಷನ್/ವಿಭಾಗ)

ಹಿಂದುಗಳಲ್ಲಿ ವಿಭಾಗ ಅಥವ ವಿಭಜನೆ ಅಂದರೆ ಹೇಗೆ

ಪರ್ ಕ್ಯಾಪಿಟಾ ಮತ್ತು ಪರ್ ಸ್ಟೈಪ್ಸ್

ಯಾರು ವಿಭಾಗ ಕೋರಲು ಬರುವುದಿಲ್ಲ

ವಿಭಾಗಕ್ಕೆ ಕೋರಿದ ನಂತರದ ಬೆಳವಣಿಗೆ ಕಾನೂನು ದೃಷ್ಟಿಯಲ್ಲಿ

ವಿಭಾಗ ವರ್ಗಾವಣೆ ಪ್ರಕ್ರಿಯೆ ಅಲ್ಲ

ವಿಭಾಗ ಮತ್ತು ಸ್ವಾಧೀನತೆ

ವಿಭಾಗದ ಅಂತ್ಯ ಯಾವಾಗ

ವಿಭಾಗ ಕಾಯ್ದೆ 1893

ವಿಭಜನೆ ಮತ್ತು ಕೌಟುಂಬಿಕ ವ್ಯವಸ್ಥೆ

ಕೌಟುಂಬಿಕ ವ್ಯವಸ್ಥೆ

ನಾಮಾಂಕಿತ ವಿಭಾಗ (ನೋಷನಲ್ ಪಾರ್ಟೀಷನ್)

ವಿಭಾಗದ ಡಿಕ್ರಿ ನೊಂದಾಯಿಸಬೇಕೆ

ಹಿಂದಿನ ಪಂಚಾಯ್ತಿ ಪಾರೀಖಾತು ಕಾನೂನು ಬದ್ದವೇ (ನೋಂದಾಯಿತವಲ್ಲದ ವಿಭಾಗ ಪತ್ರಗಳು)

ರಾಜೀ ಒಪ್ಪಂದಗಳು ಮತ್ತು ಕೌಟುಂಬಿಕ ವ್ಯವಸ್ಥೆ

ವಿಭಾಗ ಆದ ನಂತರ ಮತ್ತೆ ತೆರೆಯಲು ಬರುವುದೇ

ತಂದೆಯ ವಿಭಾಗಿಸುವ ವ್ಯವಸ್ಥಾಪನೆ ಮಾಡುವ ಹಕ್ಕು

## ಅಧ್ಯಾಯ–9

## (ಅಗತ್ಯ ಬದಲಾವಣೆ)

ವಿಭಾಗ ದಾವೆಗಳಲ್ಲಿ ಬದಲಾವಣೆ ಬಯಸಿರುವ ಕೋರ್ಟ್

ಪೂರ್ವಾಪೇಕ್ಷಿತಗಳ ಸಂಶೋಧನೆ ದಾಖಲಿಸುವ ಅಗತ್ಯವಿದೆ

ವಿಭಾಗ ದಾವೆ ಹಾಕುವವರ ಕರ್ತವ್ಯ

## ಅಧ್ಯಾಯ–10

## (ಪೂರ್ವ ಖರೀದಿ ಹಕ್ಕು)

ಆಸ್ತಿಯನ್ನು ಮುಂಚಿತವಾಗಿ ಪಡೆದುಕೊಳ್ಳುವ ಆದ್ಯತೆಯ ಹಕ್ಕು

ಮುಂಚಿತವಾಗಿ ಆಸ್ತಿ ಪಡೆದುಕೊಳ್ಳುವ ಹಕ್ಕಿನ ಕಾಲಮಿತಿ

ಕೊಂಡುಕೊಳ್ಳುವ ಪೂರ್ವಾಧಿಕಾರದ ಸಿದ್ಧಾಂತಗಳು

## ಅಧ್ಯಾಯ–11

## (ತೀರ್ಪು – ಮಧ್ಯಂತರ ಆಜ್ಞೆ)

ದಾವೆಯಲ್ಲಿ ಮಧ್ಯಂತರ ಆಜ್ಞೆಗೆ ಸಂಬಂದಿಸಿದಂತೆ

ತೀರ್ಪಿನಲ್ಲಿ ಪ್ರಾಥಮಿಕ ಮತ್ತು ಅಂತಿಮ ತೀರ್ಪು ಈ ಬಗ್ಗೆ

## ಅಧ್ಯಾಯ–12

## (ದಾಖಲಾತಿಗಳ ಮಹತ್ವ)

ದಾಖಲಾತಿಗಳು, ಪುರಾವೆಗಳು ಮತ್ತು ಅದರ ಕಾನೂನು ಮಹತ್ವ

ಕಂದಾಯ ದಾಖಲಾತಿಗಳು ಅದರ ಮಹತ್ವ,

ಸೋಗಿನ ವ್ಯವಹಾರ ಎಂದು ದಾಖಲೆ ಅಲ್ಲಗಳೆದಾಗ

# ಅಧ್ಯಾಯ–13

## (ಕಾಲಮಿತಿ)

ಕಾಲ ಪರಿಮಿತಿ ಮತ್ತು ನಿಯಮಗಳು

ಅರ್ಜಿಯ ವಿಳಂಬಕ್ಕೆ ಸಮರ್ಥ ಕಾರಣಗಳು – ಕಾಲಮಿತಿ

ವಿಭಾಗ ಮತ್ತು ಕಾಲಮಿತಿ

# ಅಧ್ಯಾಯ–14

## (ವಿಲ್)

ವಿಲ್ ಮುಖೇನ ಆಸ್ತಿ ಆರ್ಜನೆಗಳು

ವಿಲ್ ಮತ್ತು ಪ್ರೊಬೇಟ್ ಅವಶ್ಯಕತೆ, ಕಾಲಮಿತಿ

ವಿಲ್ ಅನುವಾದಿಸುವಲ್ಲಿ ಕೋರ್ಟಗಳ ಮಾರ್ಗದರ್ಶಿ ಸೂತ್ರಗಳು

# ಅಧ್ಯಾಯ–15

## (ಕ್ರಯಕರಾರು–ವರ್ಗಾವಣೆ)

ಕ್ರಯಕರಾರು ಜಾರಿಗೊಳಿಸುವ ದಾವೆ ಮತ್ತು ಹಿಂದು ಕಾನೂನು

2018 ರಲ್ಲಿ ಬದಲಾದ ನಿರ್ದಿಷ್ಟ ಪರಿಹಾರ ಕಾಯ್ದೆ ಕಾನೂನು

ಮೂರನೇ ವ್ಯಕ್ತಿಯಿಂದ ಬದಲೀ ನೆರವೇರಿಕೆ

ನೊಂದಾಯಿತ ಕ್ರಯ ಪತ್ರ ರದ್ದು ಮಾಡಬಹುದೆ

ಹಿಂದಿನ ಕ್ರಯಕರಾರು ಇದ್ದಾಗ ಉಂಟಾಗುವ ಕ್ರಯಪತ್ರಗಳ ಪರಿಣಾಮ

ದಾವೆ ಇದ್ದಾಗ ಸ್ವತ್ತು ವರ್ಗಾವಣೆ

# ಲೇಖಕರ ನುಡಿ

ಸಿವಿಲ್ ವ್ಯಾಜ್ಯಗಳ ವಿಚಾರದಲ್ಲಿ ನಾಕಂಡಂತೆ ಅನೇಕ ರೀತಿಯಲ್ಲಿ ಅಜ್ಞಾನದ ವಾದಪತ್ರಗಳು ಹೆಚ್ಚುತ್ತಿರುವುದಕ್ಕೆ ಕಾರಣ ಕಾನೂನಿನ ಸಮಗ್ರ ಅಧ್ಯಯನದ ಕೊರತೆ ಮತ್ತು ಮಾತೃ ಭಾಷೆಯಲ್ಲಿ ಅರ್ಥೈಸಿಕೊಳ್ಳುವ ಹಿನ್ನೆಡೆಯಿಂದಾಗಿದೆ ಎಂದರೆ ತಪ್ಪಾಗಲಾರದು. ಈ ನಿಟ್ಟಿನಲ್ಲಿ ನನ್ನ 18+ ವರ್ಷದ ವಕೀಲ ವೃತ್ತಿಯಲ್ಲಿ ಕೇಸ್ ಲಾ ಸಂಗ್ರಹ ಅದನ್ನ ಹಂಚುವಿಕೆಯನ್ನು ಅನ್ಲೈನ್ ಬ್ಲಾಗ್ ಮತ್ತು ಫೇಸ್ಬುಕ್ ಗ್ರೂಪ್ ನಿಂದ ನಿರಂತರವಾಗಿ 2006–07 ರಿಂದ ಮಾಡುತ್ತಾ ಬಂದಿದ್ದೇನೆ. ನಾನು ಬರೆದ ಹಲವು ಲೇಖನಗಳ ಬಗ್ಗೆ ಈಗಲೂ ಪ್ರತಿಕ್ರಿಯಿಸಿ ಮೆಸೇಜ್ ಮಾಡುವ ಸಾಮಾನ್ಯ ನಾಗರೀಕರು ನನ್ನಲ್ಲಿ ಪುಸ್ತಕ ಲಭ್ಯವೆ ಎಂದು ಕೇಳುತ್ತಲೇ ಬಂದಿದ್ದಾರೆ. ನಾನು ಈಗಾಗಲೇ ಆಂಗ್ಲದಲ್ಲಿ ಸಾಕಸ್ಟು ಮಾಹಿತಿಯನ್ನು ಹೊರಹಾಕಿದ್ದೇನೆ. ಕನ್ನಡದಲ್ಲಿ ಹಿಂದು ಕಾನೂನಿನ ಬಗ್ಗೆ ಒಂದು ಸಂಶೋಧನಾತ್ಮಕ ವಿಚಾರಗಳನ್ನ ಸಮಗ್ರವಾಗಿ ಕಲೆ ಹಾಕಿದರೆ ಹೇಗೆ ಎಂಬ ಚಿಂತನೆಯಲ್ಲಿ ನಾನು ಆಯ್ದು ಕೊಂಡದ್ದು "ಹಿಂದು ಕಾನೂನು" ಅದರಲ್ಲಿನ "ಆಸ್ತಿಹಕ್ಕುಗಳು", ಬರೆದದ್ದು ಸ್ವಲ್ಪವಾದರೂ ತಿಳಿಯಬೇಕಾದ್ದು ಸಾಗರದಂತಿದೆ. ಅನ್ಲೈನ್ ನಲ್ಲಿ ಲಭ್ಯವಿರುವ ಕಾನೂನು ಡಾಟ್ ಅರ್ಜ್, ಮನುಪಾತ್ರ ಚಂದಾದಾರನಾಗಿ, ಮತ್ತು ಹಲವಾರು ಲಾ ಬುಕ್ ಪ್ರಕಟಣೆಗಳ ಪುಸ್ತಕಗಳ ಸಂಗ್ರಹಿತ ಸಂಶೋಧನಾ ಬಾಗವೇ ಈ ಗ್ರಂಥದ ತಿರುಳು. ಇನ್ನು ಹಿಂದು ಗ್ರಂಥಗಳ ವಿಚಾರದಲ್ಲಿ ಅನ್ಲೈನ್ ನಲ್ಲಿ ಲಭ್ಯವಿರುವ ಸೇಕ್ರೆಡ್ ಟೆಕ್ಸ್ಟ್ ಡಾಟ್ ಕಾಂ ಮತ್ತು ಪದ್ಮಶ್ರೀ ಶ್ರೀಮಾನ್ ಗೋವಿಂದಾಚಾರ್ಯರ ವ್ಯಾಖ್ಯಾನಿತ ಭಗವದ್ಗೀತೆ ಭೋದನೆಗಳು,

ಇಲ್ಲಿ ಇತರೆ ಲಭ್ಯವಿರುವ ಮಾಹಿತಿಯನ್ನು ಸಂಗ್ರಹಿಸಿ ಅನುವಾದಿಸಿ ಸೇರಿಸಿದ್ದೇನೆ. ಇದನ್ನು ಬರೆಯುತ್ತಾ ಬರೆಯುತ್ತಾ ಹೊಸ ವಿಚಾರಗಳ ಕಲಿಕೆಯ ಜಗತ್ತು ನನಗೆ ಆತ್ಮ ತೃಪ್ತಿಯನ್ನು ತಂದಿದೆ. ಸುಮಾರು 500 ಕ್ಕೂ ಹೆಚ್ಚು ಕೇಸುಗಳ ಅಧಿಕೃತ ಉಲ್ಲೇಕವನ್ನು ಮಾಡುವುದಕ್ಕೆ ಮಾನ್ಯ ಘನ ಭಾರತದ ಅನೇಕ ನ್ಯಾಯಾಲಯಗಳ ನ್ಯಾಯಾಧೀಶರ ನ್ಯಾಯವಾದಿಗಳ ಶ್ರಮವದೆ, ಇದರಲ್ಲಿ ನನ್ನ ಪಾತ್ರ ಅಧ್ಯಯನ ಸರಳೀಕರಣ ಮಾತ್ರ ಭಾಷೆಯಲ್ಲಿ ಅನುವಾದ ಮತ್ತು ಬರವಣಿಗೆ. ಇದುವೆ ನಿರಂತರ ಪ್ರಕ್ರಿಯೆ ನಮ್ಮಲ್ಲಿ ವಕೀಲರಾಗಿ ಮೂಲಭೂತ ಕಲೆಗಳನ್ನು ರೂಪಿಸುತ್ತದೆ ಎಂಬುದು ನನ್ನ ಅನುಭವದ ಅಭಿಪ್ರಾಯ. ಇದನ್ನು ಇಂದಿನ ಯುವ ವಕೀಲರಿಗಾಗಿ, ಕಾನೂನು ತಿಳಿದುಕೊಳ್ಳುವ ಸಾಮಾನ್ಯರಿಗಾಗಿ, ವಾಜ್ಯ ನಡೆಸುವವರ ಮಾಹಿತಿಗಾಗಿ, ಕಾನೂನು ಸಾಕ್ಷರತೆಯ ಉದ್ದೇಶಕ್ಕಾಗಿ, ಬರೆದಿದ್ದೇನೆ. ಈ ವೃತ್ತಿಯಲ್ಲಿ ಸಾಯುವವರೆಗೂ ನಾವು ವಿಧ್ಯಾರ್ಥಿಗಳೇ, ತಪ್ಪಿರಬಹುದು, ಅರ್ಥೈಸುವಿಕೆಯಲ್ಲಿ ವಿಭಿನ್ನತೆ ಇರಬಹುದು, ನಮ್ಮ ಗಮನಕ್ಕೆ ಬಾರದ ಅನೇಕ ವಿಚಾರಗಳಿರಬಹುದು, ಮಾನವ ಸಹಜ ವ್ಯಾಪ್ತಿಯಲ್ಲಿ ಬರೆದಿದ್ದೇನೆ, ನನಗೆ ತೃಪ್ತಿ ತಂದಿದೆ ಓದುಗರಿಗೂ ಇನ್ನು ಹೆಚ್ಚಿನ ಅಧ್ಯಯನ ವೈಶಾಲ್ಯತೆ ಕರುಣಿಸಲಿ ಎಂದು ಬಗವಂತನಲ್ಲಿ ಪ್ರಾರ್ಥಿಸುತ್ತ, ಈ ಪುಸ್ತಕವನ್ನು ಬರೆಯಲು ಪ್ರೇರಕರಾದ ನನ್ನ ಗುರುಗಳು ಶ್ರೀಮಾನ್ ಎಸ್.ಎಂ. ಸೋಮಶೇಖರಪ್ಪ ವಕೀಲರು, ತುಮಕೂರು, ರವರು ನನ್ನ ತಂದೆ ದಿ. ಹೆಚ್.ಆರ್. ನಾಗರಾಜಚಾರ್ ರವರು ಮತ್ತು ನನ್ನ ತಾಯಿ ದಿ. ಗೌರಮ್ಮ, ರವರು, ನನಗೆ ಪುನರ್ಜನ್ಮವನ್ನು ನೀಡಿ ನನ್ನ ಎಲ್ಲಾ ಕಾರ್ಯಗಳಿಗೆ

ಅರ್ದನಾರಿಯಾಗಿ, ಶಕ್ತಿಯಾಗಿ ನಿಂತ ನನ್ನ ಹೆಂಡತಿ ಶ್ರೀದೇವಿ, ಮತ್ತು ನನ್ನ ವೃತ್ತಿಯಲ್ಲಿ ಬೆಂಬಲವಾಗಿ ನಿಂತು ಸಂಶೋಧನೆಯಲ್ಲಿ ಹೆಚ್ಚಿನ ಸಮಯ ಮತ್ತು ಚರ್ಚೆಯಲ್ಲಿ ಭಾಗವಹಿಸಿದ ನನ್ನ ಹಿರಿಯ ಪುತ್ರ ವಕೀಲ ಎಸ್.ಮೋಹನ್, ನನ್ನ ವೃತ್ತಿಯ ಮೇಲಿನ ಪ್ರೀತಿ ಗೌರವವನ್ನು ಕಂಡು ನನ್ನೊಡನೆ ಕಾನೂನು ವಿಧ್ಯಾರ್ಥಿ ದೆಸೆಯಲ್ಲೇ ಚರ್ಚೆಯಲ್ಲಿ ಇರುವ ನನ್ನ ಎರಡನೇ ಪುತ್ರ ಎಸ್. ಹಿಮಕಿರಣ್ ಇವರೆಲ್ಲರ ಪ್ರೇರಣೆಯಿಂದ ನನ್ನ ಈ ಕೃತಿಯನ್ನು ನನ್ನ ಕುಲ ಗುರು ಪೋತಲೂರು ವೀರಭ್ರಹ್ಮೇಂದ್ರ ಸ್ವಾಮಿಗಳ ಪಾದಾರವಿಂದಕ್ಕೆ ಸಮರ್ಪಿಸುತ್ತಿದ್ದೇನೆ.

ಈ ಪುಸ್ತಕವನ್ನು ಮುದ್ರಿಸಿ ಕಡಿಮೆ ಬೆಲೆಗೆ ಹಂಚಲು ಮುದ್ರಕರೊಬ್ಬರಿಗೆ ನೀಡಿದ್ದೆ, ಆ ವ್ಯಕ್ತಿ ಇದನ್ನು ಹೊರಹಾಕಲು ಇಷ್ಟವಿಲ್ಲದೆ ಯಾರೋ ಕುತಂತ್ರಿಗಳ ಮಾತಿಗೆ ಬೆಲೆಕೊಟ್ಟು ನನಗೆ ಮೋಸ ಮಾಡಿದ್ದಾನೆ. ಅಂತವರಿಗೆ ನನ್ನ ದಿಕ್ಕಾರವಿರಲಿ.

ಈ ಬಗ್ಗೆ ಹೆಚ್ಚಿನ ಅಧ್ಯಯನ ನಡೆದಾಗ ಪುಸ್ತಕವನ್ನು ಮಾರ್ಪಡಿಸಿ ಎಲ್ಲಿ ನೀವು ಡೌನ್ ಲೋಡ್ ಮಾಡಿದ್ದೀರೋ ಅಲ್ಲಿಯೇ ಸಿಗುವ ಹಾಗೆ ಮಾಡುತ್ತೇನೆ. ಈ ಪುಸ್ತಕವು ಮಾರಾಟಕ್ಕೆ ಇಲ್ಲ, ಇದನ್ನು ಉಚಿತವಾಗಿ ಎಲ್ಲರಿಗೂ ಹಂಚಿ ಎಂದು ನಿಮ್ಮಲ್ಲಿ ಕೋರುತ್ತೇನೆ. ಇದರ ಕಾಪಿ ರೈಟ್ ನಾನು ಉಳಿಸಿಕೊಂಡಿರುತ್ತೇನೆ.

ಶ್ರೀಧರ ಬಾಬು. ಎನ್

ವಕೀಲರು, ತುಮಕೂರು

https://sridharababu.blogspot.com/
sridharababu1234@gmail.com

# ಅಧ್ಯಾಯ–1 (ಮೂಲ)

# ಹಿಂದು ಮತ್ತು ಧರ್ಮ ಚರಿತ್ರೆ

ನಾವು ಹಿಂದೂ ಧರ್ಮದ ಬಗ್ಗೆ ಯೋಚಿಸುವಾಗ, ಹಿಂದೂ ಧರ್ಮವನ್ನು ವ್ಯಾಖ್ಯಾನಿಸುವುದು ಅಥವಾ ಸಮರ್ಪಕವಾಗಿ ವಿವರಿಸುವುದು ಕಷ್ಟವಾಗಬಹುದು, ಅಸಾಧ್ಯವಾಗಬಹುದು. ಇತರೆ ಮತಗಳನ್ನು ಧರ್ಮವೆಂದು ಒಪ್ಪಲು ಸಾದ್ಯವಿಲ್ಲ. ವಿಶ್ವದ ಇತರ ಮತಗಳಿಗಿಂತ ಭಿನ್ನವಾಗಿ, ಹಿಂದೂ ಧರ್ಮವು ಯಾವುದೇ ಒಬ್ಬ ಪ್ರವಾದಿಯನ್ನು ಹೇಳಿಕೊಳ್ಳುವುದಿಲ್ಲ; ಅದು ಯಾವುದೇ ಒಬ್ಬ ಮಾತ್ರ ದೇವರನ್ನು ಆರಾಧಿಸುವುದಿಲ್ಲ; ಇಲ್ಲಿ ಯಾವುದೇ ಒಂದು ಸಿದ್ಧಾಂತಕ್ಕೆ ಚಂದಾದಾರರಾಗುವುದಿಲ್ಲ; ಇದು ಯಾವುದೇ ಒಂದು ತಾತ್ವಿಕ ಪರಿಕಲ್ಪನೆಯನ್ನು ನಂಬುವುದಿಲ್ಲ; ಇದು ಯಾವುದೇ ಒಂದು ಧಾರ್ಮಿಕ ವಿಧಿಗಳನ್ನು ಅಥವಾ ಪ್ರದರ್ಶನಗಳನ್ನು ಅನುಸರಿಸುವುದಿಲ್ಲ; ವಾಸ್ತವವಾಗಿ, ಇದು ಯಾವುದೇ ಮತ ಅಥವಾ ಧರ್ಮದ ಸಂಕುಚಿತ ಸಾಂಪ್ರದಾಯಿಕ ಲಕ್ಷಣವನ್ನು ಪೂರೈಸುವಂತೆ ಕಂಡುಬರುವುದಿಲ್ಲ. ಇದನ್ನು ವಿಶಾಲವಾಗಿ ಜೀವನ ವಿಧಾನವೆಂದು ವಿವರಿಸಬಹುದು ಮತ್ತು ಇನ್ನೇನೂ ಇಲ್ಲ. ಡಾ. ರಾಧಕೃಷ್ಣನ್ ಹೇಳಿರುವಂತೆ, ಮೂಲ ಬುಡಕಟ್ಟು ನಿವಾಸಿಗಳು, ಆರ್ಯರು ದ್ರಾವಿಡರು ಒಂದೇ ತಾಯಿಯ ಹಿಂದು ಮಕ್ಕಳಾಗಿದ್ದಾರೆ. ಹಿಂದೂ ಧರ್ಮದ ಅಭಿವೃದ್ಧಿಯು ಯಾವಾಗಲೂ ಸತ್ಯಕ್ಕಾಗಿ ಅನ್ವೇಶನೆಯಲ್ಲಿ ಮತ್ತು ಜಗತ್ತು ಅನೇಕ ಸತ್ಯಗಳನ್ನು ಹೊಂದಿದೆ ಎಂಬ ಪ್ರಜ್ಞೆಯ ಆಧಾರದ ಮೇಲೆ ಸತ್ಯಕ್ಕಾಗಿ ಮನಸ್ಸಿನ ಅಂತ್ಯವಿಲ್ಲದ ಅನ್ವೇಷಣೆಯಿಂದ ಪ್ರೇರಿತವಾಗಿದೆ. ಸತ್ಯವು ಒಂದೇ, ಆದರೆ ಬುದ್ಧಿವಂತರು ಅದನ್ನು ವಿಭಿನ್ನವಾಗಿ ವಿವರಿಸುತ್ತಾರೆ. ಇಂತಹ ಸತ್ಯಾನ್ವೇಶನೆಯಲ್ಲಿ ಉಂಟಾದದ್ದೇ ಬಹುದೇವಾರಾದನೆ.

ಬಹುದೇವಾರಾದನೆಯನ್ನು ಹಿತಿಹಾಸದಲ್ಲಿ ಅನೇಕ ಹಿಂದು ತತ್ವ ಜ್ಞಾನಿಗಳು, ಮಠಾಧೀಶರು, ವಚನಕಾರರು, ಸಮಾಜ ಸುಧಾರಕರು, ಅನೇಕ ರೀತಿಯಲ್ಲಿ ಜನರ ನಂಬಿಕೆಯಲ್ಲಿ ಮಾನವೀಯ ಮೌಲ್ಯವನ್ನು ಬಿತ್ತಿ ಸುದಾರಣೆ ಮಾಡಲು ಮುಂದಾಗಿರುವುದು ಕಾಣುತ್ತೇವೆ. ಆದರೆ ಬುಹುದೇವಾರಾದಕರನ್ನು ಕಂಡಲ್ಲಿ ಕೊಲ್ಲು ಅಂತ ಯಾರೂ ಇಂದಿಗೂ ರಚಿಸಲಿಲ್ಲ. ಎಲ್ಲಾ ಸಿದ್ಧಾಂತಗಳಲ್ಲೂ, ಹಿಂದುಗಳಲ್ಲಿ ನಡೆದ ವಿವಿದ ಮತ ಪ್ರಚಾರದಲ್ಲೂ ವಿಗ್ರಹಾರಾದನೆ, ಕಾಲ್ಪನಿಕ ದೇವರ ಆರಾದನೆ, ಏಕ ಹಿಂದು ದೇವರ ಆರಾದನೆ, ಮುಂತಾದ ವಿಶೇಷ ಆಚರಣೆಗಳಿಗೆ ಒತ್ತು ಕೊಡಲಾಯಿತು, ಅಂದಿನ ಯುಗದಲ್ಲಿ ಹೆಚ್ಚಳವಾಗಿದ್ದ ಅನೀತಿ ಅನ್ಯಾಯಗಳ ವಿರುದ್ದ ಹೊಸ ನೀತಿಯುಕ್ತ ಆಚರಣೆಗಳನ್ನು ತರಲಾಯಿತೆ ಹೊರತು. ಯಾವುದನ್ನೂ ಕಡ್ಡಾಯ ಗೊಳಿಸಲು ಜನರಲ್ಲಿ ಕೊಲ್ಲುವ ಮಟ್ಟದಲ್ಲಿ ತತ್ವಸಿದ್ಧಾಂತಗಳು ರಚನೆ ಆಗಲಿಲ್ಲ.

ಹಿಂದೂ ಧರ್ಮವು ಅನೇಕ ಪಂಥಗಳ ಒಂದು ಗುಂಪಾಗಿದೆ, ಅವುಗಳಲ್ಲಿ ಪ್ರಮುಖವಾದವುಗಳು ಶೈವ ಪಂಥ, ವೈಷ್ಣವ ಪಂಥ ಮತ್ತು ಶಕ್ತಿಪಂಥ, ಇದರ ಅಧಿಕಾರಗಳು ಅನುಕ್ರಮವಾಗಿ ಶಿವಾಗಮಗಳು, ಪಂಚರಾತ್ರ ಮತ್ತು ಶಕ್ತಾಗಮಗಳು. ಇವುಗಳಲ್ಲಿ ಹೆಚ್ಚಿನ ಸಮಾನವಾದ ಇದ್ದರೂ ಕೂಡ, ಅವರು ತಮ್ಮ ತತ್ತ್ವಶಾಸ್ತ್ರ ಮತ್ತು ಆಚರಣೆಗಳಲ್ಲಿ ವ್ಯಾಪಕವಾಗಿ ಭಿನ್ನರಾಗಿದ್ದಾರೆ. ಈ ಮೂರು ಪಂಥಗಳಲ್ಲಿ ಶೈವ ಪಂಥ ಭಾರತದಲ್ಲಿ ಅತಿ ಹೆಚ್ಚು ಅನುಯಾಯಿಗಳನ್ನು ಹೊಂದಿದೆ.

ಶೈವ ಪಂಥ? ಶೈವ ಪಂಥವು ಹಿಂದೂ ಧರ್ಮದ ನಾಲ್ಕು ಅತಿ ವ್ಯಾಪಕವಾಗಿ ಅನುಸರಿಸಲಾಗುವ ಪಂಥಗಳ ಪೈಕಿ ಒಂದು, ಮತ್ತು ಇದು ಶಿವನನ್ನು ಪರಮಾತ್ಮ ಹಾಗೂ ಪವಿತ್ರನೆಂದು ಭಾವಿಸುತ್ತದೆ. ಶೈವರು ಎಂದು ಕರೆಯಲ್ಪಡುವ ಶೈವ ಪಂಥದ ಅನುಯಾಯಿಗಳು ಶಿವನು ಎಲ್ಲವೂ ಮತ್ತು ಎಲ್ಲದರಲ್ಲೂ ಇದ್ದಾನೆ, ಎಲ್ಲದರ ಸೃಷ್ಟಿಕರ್ತ, ಸಂರಕ್ಷಕ, ವಿನಾಶಕ,

ಬಹಿರಂಗಪಡಿಸುವವನು ಹಾಗೂ ಮರೆಮಾಡುವವನು ಎಂದು ನಂಬುತ್ತಾರೆ. ಶೈವ ಪಂಥವು ಭಾರತ, ನೇಪಾಳ ಹಾಗೂ ಶ್ರೀಲಂಕಾದಾದ್ಯಂತ ವ್ಯಾಪಕವಾಗಿದೆ. ಶಿವ ಅಥವಾ ರುದ್ರನ ಉಪಾಸನೆಯು ತುಂಬಾ ಪ್ರಾಚೀನವಾದುದು. ಸಿಂಧೂ ಸಂಸ್ಕೃತಿಯ ಅವಶೇಷಗಳಲ್ಲಿ (ಕ್ರಿ.ಪೂ. 3000–4000) ಶಿವೋಪಾಸನೆ ಇತ್ತೆಂಬ ಕುರುಹುಗಳಿವೆ..

ಶೈವಾಗಮಗಳು ಕ್ರಿ.ಶ. 8–9 ನೇ ಶತಮಾನದವೆಂದು ಹೇಳುತ್ತಾರೆ. ಇವು ಶೈವ ಸಿದ್ಧಾಂತಕ್ಕೆ ಮೂಲವಾಗಿವೆ. ಅವು 108 ಇವೆ ಎನ್ನುತ್ತಾರೆ. ಅವುಗಳಲ್ಲಿ 28 ಆಗಮಗಳು ಮುಖ್ಯವಾದವು . ಆಗಮದಲ್ಲಿ ನಾಲ್ಕು ಭಾಗಗಳು ; ವಿದ್ಯಾ (ಜ್ಞಾನ) , ಯೋಗ , ಕ್ರಿಯಾ , ಮತ್ತು ಚರ್ಯಾ ಕ್ರಿಯಾ ಮತ್ತು ಚರ್ಯಾ ಕಾಂಡಗಳು ದೇವಾಲಯ ನಿರ್ಮಾಣ, ಮೂರ್ತಿಪ್ರತಿಷ್ಠಾಪನೆ, ಪೂಜಾವಿಧಾನ, ಧಾರ್ಮಿಕ ವಿಧಿಗಳನ್ನು ತಿಳಿಸುತ್ತವೆ. ಜ್ಞಾನ ಯೋಗ ಕಾಂಡಗಳಲ್ಲಿ ಜೀವ – ಶಿವರ ಸಂಬಂಧ ಶಿವ ಸ್ವರೂಪ, ಇತ್ಯಾದಿ ದಾರ್ಶನಿಕ ವಿಚಾರ, ಯೋಗ ಮಾರ್ಗಗಳಿವೆ. ತಮಿಳು ಶೈವ ಸಿದ್ಧಾಂತ, ಕಾಶ್ಮೀರ ಶೈವ ಸಿದ್ದಾಂತ, ವೀರಶೈವ ಸಿದ್ಧಾಂತಗಳು ಪ್ರಮುಖವಾಗಿವೆ.

ವೀರಶೈವವು ಹಿಂದೂ ಧರ್ಮದ ಶೈವ ಶಾಖೆಯ ಒಂದು ಪಂಥ. ಈ ಪಂಥದ ಅನುಯಾಯಿಗಳು ಪ್ರಮುಖವಾಗಿ ಕರ್ನಾಟಕ, ಮಹಾರಾಷ್ಟ್ರ, ತೆಲಂಗಾಣ, ಆಂಧ್ರಪ್ರದೇಶಗಳಲ್ಲಿ ಕಂಡುಬರುತ್ತಾರೆ. ವೀರಶೈವರು ಸಂಸ್ಕೃತದಲ್ಲಿ ರಚಿತವಾದ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ತಮ್ಮ ತಾತ್ವಿಕ ಗ್ರಂಥವೆಂದು ಒಪ್ಪಿಕೊಳ್ಳುತ್ತಾರೆ. ಶಿವನು ವೀರಶೈವ ಪಂಥವನ್ನು ಐವರು ಆಚಾರ್ಯರು (ಪಂಚಾಚಾರ್ಯರು) ಮೂಲಕ ಸ್ಥಾಪಿಸಿದನೆಂದು ಪ್ರತೀತಿ. ಮಂತ್ರಮಾರ್ಗ ಸಂಪ್ರದಾಯವು ಶೈವ ಅಗಮಗಳನ್ನು ಮತ್ತು ಶೈವ ತಂತ್ರ ಪಠ್ಯಗಳನ್ನು ರಚಿಸಿತು. ಈ ಸಾಹಿತ್ಯವು ಹೊಸ ಆಚರಣೆಗಳು, ಯೋಗ ಮತ್ತು ಮಂತ್ರಗಳನ್ನು ಪ್ರಸ್ತುತಪಡಿಸಿತು. ಈ ಸಾಹಿತ್ಯ ಶೈವರಿಗೆ ಮಾತ್ರವಲ್ಲ,

ಹಿಂದೂ ಧರ್ಮದ ಎಲ್ಲಾ ಸಂಪ್ರದಾಯಗಳಿಗೆ ಮತ್ತು ಬೌದ್ಧಧರ್ಮ ಮತ್ತು ಜೈನ ಧರ್ಮಕ್ಕೆ ಹೆಚ್ಚು ಪ್ರಭಾವಿಯಾಗಿತ್ತು.

ಆಜಿವಿಕಾ ಶಾಲೆ ತನ್ನ ನಿಯತ್ತಿ ("ಫೇಟ್") ಸಂಪೂರ್ಣ ನಿರ್ಣಾಯಕತೆಯ ಸಿದ್ಧಾಂತಕ್ಕೆ ಹೆಸರುವಾಸಿಯಾಗಿದೆ, ಯಾವುದೇ ಮುಕ್ತ ಇಚ್ಛೆಯಿಲ್ಲವೆಂಬುದನ್ನು, ಸಂಭವಿಸಿದ ಎಲ್ಲವೂ ನಡೆಯುತ್ತಿದೆ ಮತ್ತು ಸಂಭವಿಸುತ್ತದೆ ಎಂದು ಸಂಪೂರ್ಣವಾಗಿ ಮುಂಚಿತವಾಗಿ ಆದೇಶಿಸಲ್ಪಟ್ಟ, ಜಗತ್ತಿನ ತತ್ವಗಳ ಕಾರ್ಯ ಆಚರಿಸಲಾಗುತ್ತದೆ. ಆಜಿವಿಕರು ಕರ್ಮ ಸಿದ್ಧಾಂತವನ್ನು ಭ್ರಾಂತಿ ಎಂದು ಪರಿಗಣಿಸಿದರು. ಆಜಿವಿಕ ತತ್ವಶಾಸ್ತ್ರವು ಮೌರ್ಯ ಚಕ್ರವರ್ತಿ ಬಿಂದುಸಾರ ಆಳ್ವಿಕೆಯ ಕಾಲದಲ್ಲಿ 4 ನೇ ಶತಮಾನದ ಬಿಸಿಇ ಯ ಸಮಯದಲ್ಲಿ ಅದರ ಜನಪ್ರಿಯತೆಯ ಎತ್ತರವನ್ನು ತಲುಪಿತು. ಈ ಚಿಂತನೆಯ ಶಾಲೆಯು ನಂತರ ನಿರಾಕರಿಸಲ್ಪಟ್ಟಿತು. ಆದರೆ ದಕ್ಷಿಣ ಭಾರತೀಯ ರಾಜ್ಯಗಳ ಕರ್ನಾಟಕ ಮತ್ತು ತಮಿಳುನಾಡಿನಲ್ಲಿ 14 ನೇ ಶತಮಾನದ ಸಿಇ ಮೂಲಕ ಸುಮಾರು 2,000 ವರ್ಷಗಳವರೆಗೆ ಬದುಕುಳಿದರು ಎನ್ನಲಾಗಿದೆ.

ಚಾರ್ವಾಕ? ಇವರು ದೇವರನ್ನು ನಂಬುವುದಿಲ್ಲ ? ರಾಜನೇ ಈಶ್ವರನ ಕೆಲಸ ಮಾಡುತ್ತಾನೆ ಅನ್ನುತ್ತಾರೆ. ಭಾರತದಲ್ಲಿ ಬೆಳೆದು ಬಂದ ಸಿದ್ಧಾಂತಗಳಲ್ಲೊಂದು.ಕ್ರಿ.ಪೂ 600ಕ್ಕಿಂತಲೂ ಹಿಂದಿನಿಂದಲೇ ಈ ಪರಂಪರೆ ಬೆಳೆದು ಬಂದಿದೆ ಎಂದು ನಂಬಲಾಗಿದೆ. 'ಸರ್ವ ದರ್ಶನ ಸಂಗ್ರಹ'ದಲ್ಲಿ ಉದ್ದರಿಸಿದಂತೆ ಚಾರ್ವಾಕ ಮತದ ಮುಖ್ಯ ತತ್ವಗಳು ಇಂತಿವೆ. ಸಂತೋಷವೇ ಬದುಕಿನ ಮುಖ್ಯ ಗುರಿ. ಈ ಪ್ರಪಂಚದ ನಂತರ ಇನ್ನೊಂದು ಪ್ರಪಂಚ (ಸ್ವರ್ಗ ಯಾ ನರಕ) ಎಂದು ಏನೂ ಇಲ್ಲ. ಸ್ವರ್ಗ ಹಾಗೂ 'ಹುಟ್ಟು ಸಾವುಗಳಿಂದ ಬಿಡುಗಡೆ' ಎಂದು ಹೇಳಲ್ಪಟ್ಟವುಗಳೆಲ್ಲವೂ ಕೇವಲ ಭ್ರಮಾಧೀನ ಆದರ್ಶಗಳೆಷ್ಟೆ. ಸಾವು ಎಲ್ಲರಿಗೂ ನಿಶ್ಚಿತ. ಮರುಜನ್ಮ ಎಂಬುದಿಲ್ಲ. ಆದುದರಿಂದ ಎಲ್ಲರೂ ಬದುಕಿರುವಷ್ಟು ದಿನ ಸುಖವಾಗಿರಲು

ಪ್ರಯತ್ನಿಸಬೇಕು. ಬದುಕಿನಲ್ಲಿ ದುಖ ಇದೆ ಎಂದು ಸುಖವನ್ನು ತ್ಯಜಿಸುವುದು ಸರಿಯಲ್ಲ. ಅಕ್ಕಿಯನ್ನು ಪಡೆಯುವಾಗ ಭತ್ತದ ಹೊಟ್ಟು ಮತ್ತು ದೂಳು ದೊರೆಯುತ್ತದೆ ಎಂದು ಅಕ್ಕಿಯನ್ನು ತ್ಯಜಿಸಲು ಸಾದ್ಯವೇ? ಅಂತೆಯೇ ದುಖಕ್ಕಾಗಿ ಸುಖ ತ್ಯಜಿಸುವುದು ಯುಕ್ತವಲ್ಲ. ಭೂಮಿ, ಆಕಾಶ, ನೀರು ಹಾಗೂ ಬೆಂಕಿ ಮೂಲಭೂತ ವಸ್ತುಗಳು. ಪ್ರಜ್ಞೆಯು ಈ ನಾಲ್ಕು ಮೂಲಭೂತ ವಸ್ತುಗಳಿಂದಲೇ ಪ್ರಾಪ್ತಿಯಾಗುತ್ತದೆ. ಹೇಗೆ ಕೆಲವು ಅಮಲೇರಿಸುವ ಗುಣಗಳಿಲ್ಲದ ವಸ್ತುಗಳನ್ನು ಬೆರೆಸಿದಾಗ ಅಮಲೇರಿಸುವ ಗುಣವುಳ್ಳ ವಸ್ತುವಾಗುವುದೋ ಅಂತೆಯೇ ಪ್ರಜ್ಞೆಯು ಈ ನಾಲ್ಕು ವಸ್ತುಗಳಿಂದಾಗುತ್ತದೆ. ದೇಹವಿಲ್ಲದೆ ಆತ್ಮ ಎಂಬುದು ಇಲ್ಲ. 'ನಾನು ತೆಳ್ಳಗಿದ್ದೇನೆ' 'ನಾನು ದಪ್ಪಗಿದ್ದೇನೆ' ಎಂದು ಮುಂತಾಗಿ ನಾವು ಹೇಳುವುದೆಲ್ಲವೂ ಈ ದೇಹಕ್ಕೇನೆ ಹೊರತು ಆತ್ಮಕ್ಕಲ್ಲ. ಬೆಂಕಿಯ ಬಿಸಿ, ಗಾಳಿಯ ತಂಪು ಎಲ್ಲವೂ ಪ್ರಕೃತಿ ದತ್ತವಾದವುಗಳೇ. ಎಲ್ಲಾ ವೈವಿಧ್ಯಮಯ ವಸ್ತುಗಳೂ ಈ ಪ್ರಕೃತಿಯಿಂದಲೇ ಉಂಟಾಗಿದೆ ಮತ್ತು ಪ್ರಕೃತಿ ನಿಯಮದಂತೆಯೇ ನಡೆಯುತ್ತದೆ. ವೇದಗಳು ಹಾಗೂ ಅವುಗಳಲ್ಲಿ ಹೇಳಲಾದ ಯಾಗ, ಯಜ್ಞಾದಿಗಳು ಕೇವಲ ಕೆಲವು ಜನರ ಹೊಟ್ಟೆಪಾಡಿಗಾಗಿವೆಯಲ್ಲದೆ ಅವುಗಳಿಂದ ಪ್ರಯೋಜನವೇನೂ ಇಲ್ಲ. ವೇದಗಳಲ್ಲಿ ವಿವೇಕವಾಗಲೀ ಪ್ರಾಮಾಣಿಕತೆಯಾಗಲೀ ಇಲ್ಲವಾದುದರಿಂದ ಅವುಗಳು ಸ್ವೀಕಾರಾರ್ಹವಲ್ಲ. ಅತೀಂದ್ರಿಯ ಅನುಭವಗಳಿಗೂ, ಭಾವನೆಗಳಿಗೂ, ಪ್ರೀತಿ ಪ್ರೇಮಗಳಿಗೂ, ಪಾಮುಖ್ಯತೆ ಕೊಡದಿರುವುದರಿಂದ ಭಾರತದಲ್ಲಿ ಈ ದರ್ಶನ ತಿರಸ್ಕಾರಕ್ಕೆ ಒಳಗಾಯಿತೆಂದು ಹೇಳಬಹುದು. ಭಕ್ತಿ, ದೈವ ವಾದ, ಅದ್ಯಾತ್ಮ, ಮೋಕ್ಷಗಳ ಅಬ್ಬರದಲ್ಲಿ ಚರ್ವಾಕವಾದ ಅಡಗಿಹೋಯಿತು.

ಯೋಗ ದರ್ಶನದಲ್ಲಿ ಈಶ್ವರನನ್ನು ಒಪ್ಪಲಾಗಿದೆ. ಯೋಗ ಎಂದರೆ ಭಾರತದಲ್ಲಿ ಆರಂಭವಾದ ಸಾಂಪ್ರದಾಯಿಕ ದೈಹಿಕ ಹಾಗೂ

ಮಾನಸಿಕ ಆಚರಣೆಗಳ ಬೋಧನಶಾಖೆ. ಹಿಂದೂ ಧರ್ಮ, ಬೌದ್ಧ ಧರ್ಮ ಮತ್ತು ಜೈನ ಧರ್ಮಗಳಲ್ಲಿ ಈ ಪದವನ್ನು ಧ್ಯಾನದ ಆಚರಣೆಗಳೊಂದಿಗೆ ಬಳಸಲಾಗುತ್ತದೆ. ಹಿಂದೂ ತತ್ವಶಾಸ್ತ್ರದಲ್ಲಿ ಪ್ರಸ್ತಾಪವಾಗುವ ಯೋಗದ ಪ್ರಮುಖ ಶಾಖೆಗಳೆಂದರೆ ರಾಜ ಯೋಗ, ಕರ್ಮ ಯೋಗ, ಜ್ಞಾನ ಯೋಗ, ಭಕ್ತಿ ಯೋಗ, ಮತ್ತು ಹಠ ಯೋಗ. ಸಂಸ್ಕೃತ ಪದ ಯೋಗ ವು ಅನೇಕ ಅರ್ಥಗಳನ್ನು ಹೊಂದಿದೆ, ಮತ್ತು ಆ ಪದವು "ನಿಯಂತ್ರಿಸುವ,", "ಐಕ್ಯವಾಗು" ಅಥವಾ "ಒಗ್ಗಟ್ಟಾಗು" ಎಂಬರ್ಥಗಳ ಸಂಸ್ಕೃತ ಮೂಲ "ಯುಜ್," ನಿಂದ ವ್ಯತ್ಪನ್ನವಾಗಿದೆ. ಇದರ ರೂಪಾಂತರಗಳೆಂದರೆ "ಸೇರಿಸುವಿಕೆ," "ಜೊತೆಗೂಡುವಿಕೆ" "ಒಕ್ಕೂಟ" "ಸಂಯೋಗ," ಮತ್ತು "ನಿಮಿತ್ತ/ಉಪಕರಣ."

ಭಗವದ್ಗೀತೆಯು ('ಭಗವಂತನ ಗೀತೆ'), ಯೋಗ ಎಂಬ ಪದವನ್ನು ಬಹಳ ವ್ಯಾಪಕ ಅರ್ಥಗಳಲ್ಲಿ ಬಳಸುತ್ತದೆ. ಪೂರ್ಣ ಅಧ್ಯಾಯವೊಂದನ್ನೇ (ಅಧ್ಯಾಯ 6) ಧ್ಯಾನದೊಂದಿಗೆ ಸಾಂಪ್ರದಾಯಿಕ ಯೋಗದ ಆಚರಣೆಯ ಬಗ್ಗೆ ಮುಡಿಪಾಗಿಟ್ಟಿರುವುದಲ್ಲದೇ, ಇದು ಯೋಗದ ಮೂರು ಪ್ರಧಾನ ವಿಧಗಳನ್ನು ಪರಿಚಯಿಸುತ್ತದೆ :

ಕರ್ಮ ಯೋಗ: ಕಾರ್ಯಪ್ರವೃತ್ತಿಯ ಯೋಗ,

ಭಕ್ತಿ ಯೋಗ: ದೈವಶ್ರದ್ಧೆಯ ಯೋಗ,

ಜ್ಞಾನ ಯೋಗ: ಜ್ಞಾನದ ಯೋಗ.

ಜೈನ ಧರ್ಮ:- ಜೈನ ಧರ್ಮ ಭಾರತದಲ್ಲಿ ಉಗಮಿಸಿದ ಒಂದು ಧರ್ಮ. ಈ ಧರ್ಮದ ಸಿದ್ಧಾಂತದ ಪ್ರಕಾರ ಇದು ವಿಶ್ವದ ಅನಂತ ಸತ್ಯಗಳ ಮೇಲೆ ಆಧಾರಿತವಾದ ಧರ್ಮ. ಪಾರಂಪರಿಕ ನಂಬಿಕೆಯ ಅನುಸಾರ, ಋಷಭದೇವ ಈ ಸತ್ಯಗಳನ್ನು ಮೊದಲು ಅರಿತವ. ಈ ಅರಿವನ್ನು ಪಡೆದವರು ತೀರ್ಥಂಕರರೆಂದು ಕರೆಯಲ್ಪಡುತ್ತಾರೆ. ಋಷಭದೇವನ ನಂತರ ಬಂದ 23 ತೀರ್ಥಂಕರರಲ್ಲಿ ಕೊನೆಯವ

ವರ್ಧಮಾನ ಮಹಾವೀರ. ಜೈನಧರ್ಮವು ಅತ್ಯಂತ ಪ್ರಾಚೀನವಾದುದು. ಬೌದ್ಧ ಧರ್ಮಕ್ಕಿಂತ ಹಿಂದಿನದು. ಒಂದು ಕಾಲದಲ್ಲಿ ಇದು ರಾಜ ಧರ್ಮವಾಗಿದ್ದು, 8 ನೇ ಶತಮಾನದ ನಂತರ ಅವನತಿ ಹೊಂದಿತು.

ಸತ್ಯದ ಸ್ವರೂಪವು ಅತ್ಯಂತ ಜಟಿಲವಾದುದು. ಸಾಮಾನ್ಯರಿಗೆ (ಮನುಷ್ಯನಿಗೆ) ಸತ್ಯವನ್ನು ಅಥವಾ ಒಂದು ವಸ್ತುವಿನ ಎಲ್ಲಾ ಗುಣಗಳನ್ನೂ ಅರಿಯಲು ಸಾದ್ಯವಿಲ್ಲ.. ಸರ್ವಜ್ಞ ಮಾತ್ರಾ ಅರಿಯಬಲ್ಲ. ಕುರುಡರು ಆನೆಯನ್ನು ತಿಳಿದಂತೆ, ವಸ್ತುವಿನ ಬಗೆಗೆ ವಸ್ತುವಿನ ಸತ್ಯದ ಜ್ಞಾನ ಕುರುಡರ ಆನೆಯ ಜ್ಞಾನದಂತೆ. ಜೈನ ದರ್ಶನವು ವೇದ ಪ್ರಾಮಾಣ್ಯವನ್ನು ಒಪ್ಪದೇ ಇರುವುದರಿಂದ ಅದನ್ನು ನಾಸ್ತಿಕ ಪಂಥಕ್ಕೆ ಸೇರಿಸಲಾಗಿದೆ. ಆದರೆ ಜೈನರು ಆತ್ಮದ ಅಸ್ತಿತ್ವವನ್ನು ಒಪ್ಪುತ್ತಾರೆ ; ಮತ್ತು ತೀರ್ಥಂಕರನನ್ನೇ ಭಗವಂತನ ಸ್ಥಾನಕ್ಕೆ ಏರಿಸುತ್ತಾರೆ. ಕರ್ಮಕ್ಕೆ ತಕ್ಕ ಫಲವನ್ನು ಮಾನವನು ಅನುಭವಿಸುತ್ತಾನೆ ಎಂಬ ಸಿದ್ಧಾಂತ ಕ್ಕೆ ಸಹಮತವಿದೆ. ಆದರೆ ಫಲ ಕೊಡುವ ವಿಧಾತನಿಲ್ಲ ಎನ್ನುತ್ತದೆ ಅವರ ಸಿದ್ಧಾಂತ; ಜಗತ್ತು ಜೀವಗಳು ನಿತ್ಯವೆಂದು ಹೇಳುತ್ತದೆ; ಅತೀಂದ್ರಿಯ ಅನುಭವ ಹಾಗೂ ಇಂದ್ರಿಯಾನುಭವಕ್ಕೂ ಸಮನ್ವಯ ಮತ್ತು ಪ್ರಾಮುಖ್ಯತೆ ಕೊಡುತ್ತಾರೆ.

ಈ ಧರ್ಮದವರು ಅಹಿಂಸೆ ಮತ್ತು ಮನೋನಿಗ್ರಹವು ಮೋಕ್ಷಕ್ಕೆ ಸಾಧನವೆಂದು ನಂಬುತ್ತಾರೆ. ಇದರಲ್ಲಿ ಮುಖ್ಯವಾಗಿ ದಿಗಂಬರರು, ಶ್ವೇತಾಂಬರರು ಎಂದು ಎರಡು ಪಂಥಗಳಿವೆ. ಜೈನಧರ್ಮದ ತತ್ತ್ವಗಳು ಒಂಬತ್ತು–ಜೀವ, ಅಜೀವ, ಪುಣ್ಯ, ಪಾಪ, ಆಸ್ರವ ಸಂವರ, ಬಂಧ, ನಿರ್ಜರ ಮತ್ತು ಮೋಕ್ಷ. ಚೇತನಾತ್ಮಕವಾದ ಜೀವ ಪಾಪಪುಣ್ಯಗಳ ಕರ್ತ ಮತ್ತು ಅವುಗಳ ಫಲದ ಭೋಕ್ತ. ತದ್ವಿರುದ್ಧ ಲಕ್ಷಣವುಳ್ಳದ್ದು ಅಜೀವ. ಜೀವವಾಗಲಿ ಅಜೀವವಾಗಲಿ ಸೃಷ್ಟಿಯಾದುವಲ್ಲ. ಜೀವ ರೂಪರಸಗಂಧ ಸ್ಪರ್ಶನಗಳಿಗೆ ಕಾರಣವಾದ ಪುದ್ಗಲದ ಸಂಪರ್ಕದಿಂದ. ಪುಣ್ಯ ಪಾಪ ಕರ್ಮಗಳಿಂದ ತುಂಬಿಕೊಳ್ಳುತ್ತದೆ. ಸತ್ಕರ್ಮ ಪುದ್ಗಲವೇ ಪುಣ್ಯ ;

ದುಷ್ಕರ್ಮ ಪುದ್ಗಲವೇ ಪಾಪ. ಅಜ್ಞಾನ, ರಾಗ, ರತಿ, ಮೋಹ ಮುಂತಾದುವುಗಳಿಂದ ಹುಟ್ಟಿದ ಪಾಪಕರ್ಮ ಜೀವರುಗಳಲ್ಲಿ ತುಂಬಿಕೊಳ್ಳುವುದಕ್ಕೆ ಆಸ್ರವ ಎಂದು ಹೆಸರು. ಆಸ್ರವ ಆತ್ಮದ ಬಂಧನಕ್ಕೆ ಕಾರಣ. ಪುಣ್ಯ ಪಾಪಗಳು ಜೀವರುಗಳನ್ನು ಜನ್ಮಾಂತರಗಳವರೆಗೆ ಹಿಂಬಾಲಿಸುತ್ತವೆ. ಪಾಪ ಬಂದು ಸೇರದಂತೆ ತಡೆಯಲು ಸಾಧ್ಯ. ಅಹಿಂಸೆ, ಸತ್ಯವಚನ, ಅಪರಿಗ್ರಹ, ಬ್ರಹ್ಮಚರ್ಯ, ಸ್ವಾರ್ಥತ್ಯಾಗ ಮುಂತಾದ ವ್ರತ ಅನುಷ್ಠಾನಗಳಿಂದ ಪಾಪವನ್ನು ತಡೆಯಬಹುದು. ಇದಕ್ಕೆ ಸಂವರ ಎಂದು ಹೆಸರು. ಈಗಾಗಲೇ ಬಂದು ತುಂಬಿಕೊಂಡಿರುವ ಪಾಪಕರ್ಮವನ್ನು ಶರೀರ ಆತ್ಮದಿಂದ ಬೇರೆಯಾದದ್ದು ಎಂಬ ನಿಶ್ಚಿತಜ್ಞಾನದಿಂದ ಸುಟ್ಟುಹಾಕಬಹುದು. ಹಿಂದಿನದನ್ನು ತೊಡೆದುಹಾಕುವುದಕ್ಕೆ ನಿರ್ಜರ ಎಂದು ಹೆಸರು. ಎಲ್ಲ ಬಗೆಯ ಆವರಣಗಳೂ ತೇಲಿ ಹೋಗಿ ಆತ್ಮಜ್ಞಾನ ಫಲಿಸಿದಾಗ ಜೀವರುಗಳಿಗೆ ಮೋಕ್ಷ ದೊರೆಯುತ್ತದೆ. ಮೋಕ್ಷ ದೊರೆತಾಗ ಆತ್ಮ ತನಗೆ ಸಹಜವಾದ ಅನಂತಜ್ಞಾನ, ಅನಂತವೀರ್ಯ, ಅನಂತಸುಖಗಳನ್ನು ಪಡೆಯುತ್ತದೆ. ಸಮ್ಯಕ್ದರ್ಶನ, ಸಮ್ಯಕ್ಚಾರಿತ್ರ, ಸಮ್ಯಕ್ಜ್ಞಾನವೆಂಬ ತ್ರಿರತ್ನಗಳು ಮೋಕ್ಷಸಾಧನಗಳು.

ಜೈನಧರ್ಮವನ್ನು ಸ್ವತಂತ್ರವಾಗಿ ಗ್ರಹಿಸಿ ನಿರ್ವಾಣವನ್ನು ಪಡೆದವರು ತೀರ್ಥಂಕರರು. ಇಂಥ ಇಪ್ಪತ್ತನಾಲ್ಕು ತೀರ್ಥಂಕರರನ್ನು ಜೈನರು ದೇವರುಗಳೆಂದು ಪುಜಿಸುತ್ತಾರೆ. ಇಪ್ಪತ್ತನಾಲ್ಕನೆಯ ತೀರ್ಥಂಕರನೇ ವರ್ಧಮಾನ ಮಹಾವೀರ. ಮಹಾವೀರನ ತರುವಾಯ ಬೋಧೆಯಿಂದ ಮುಕ್ತಿಪಡೆದವರು ಕೇವಲಿಗಳು. ಇವರು ಗೌರವಾರ್ಹರಾದರೂ ಪೂಜಾರ್ಹರಲ್ಲ.

ಬೌದ್ದ ಧರ್ಮ:- ಬೌದ್ಧ ಧರ್ಮ ಪ್ರಪಂಚದ ಧರ್ಮಗಳಲ್ಲಿ 5ನೇ ಅತಿ ಹೆಚ್ಚು ಅನುಯಾಯಿಗಳನ್ನು ಹೊಂದಿರುವ ಧರ್ಮ. ಸುಮಾರು ಕ್ರಿ.ಪೂ. 6ನೇ ಅಥವ 5ನೇ ಶತಮಾನದಲ್ಲಿ ಉತ್ತರ ಭಾರತದಲ್ಲಿ ನೆಲೆಸಿದ್ದ

ಗೌತಮನ ಬೋಧನೆಗಳ ಮೇಲೆ ಆಧಾರಿತವಾಗಿ ಬೆಳೆದು ಬಂದ ಧರ್ಮ. ಬೌದ್ಧಧರ್ಮ ವೈದಿಕ ಯಜ್ಞಯುಗಾದಿಗಳನ್ನೂ ಪಶುಬಲಿಯನ್ನೂ ನಿಷೇಧಿಸಿತು ; ಜಾತಿಭೇದಗಳನ್ನು ಎಣಿಸದೆ ಎಲ್ಲರಿಗೂ ಜೀವನದಿಂದ ಮುಕ್ತಿಯನ್ನು ಪಡೆಯುವ ಮಾರ್ಗವನ್ನು ಬೋಧಿಸಿತು; ತೀವ್ರದೇಹಶೋಷಣೆಯ ಮಾರ್ಗವನ್ನೂ ಬೋಗಲಾಲಸೆಯ ಲೋಕಾಯತ ನೀತಿಯನ್ನೂ ಬಿಟ್ಟು ಮಾಧ್ಯಮಿಕ ಸಂಯಮದಿಂದ ಗುರಿ ಸಾಧಿಸುವ ಮಾರ್ಗವನ್ನು ತೋರಿಸಿತ್ತು.

ಆಸೆಯೇ ದುಃಖಕ್ಕೆ ಮೂಲ. ಅದರ ನಿರ್ಮೂಲನವೇ ಮುಕ್ತಿಸಾಧನೆಗೆ ಮಾರ್ಗ. ಸಮ್ಯಕ್ ಜ್ಞಾನ ಸಮ್ಯಕ್ ಸಂಕಲ್ಪ, ಸಮ್ಯಕ್ ವಾಕ್ ಮತ್ತು ಸತ್ಚಾರಿತ್ರ– ಈ ನಾಲ್ಕು ಎಲ್ಲರೂ ಅನುಸರಿಸಬೇಕಾದವು. ಅಷ್ಟಾಂಗಯೋಗಗಳ ಮಾರ್ಗ ಬೌದ್ಧಸಂನ್ಯಾಸಿಗಳಿಗೆ. ಬುದ್ಧದೇವ ದೇವತಾಪೂಜೆಯನ್ನು ನಿಷೇಧಿಸಿದ್ದರೂ ಕಾಲಾಂತರದಲ್ಲಿ ಬೌದ್ಧರಲ್ಲಿ ಮೂರ್ತಿಪೂಜೆ ಆಚರಣೆಗೆ ಬಂತು. ಹಿಂದೂ ಧರ್ಮ ಪುನರುದ್ಧಾರ ಕಾಲದಲ್ಲಿ ಬುದ್ಧ ವಿಷ್ಣುವಿನ ಒಂದು ಅವತಾರವಾಗಿ ಬೌದ್ಧಧರ್ಮ ಹಿಂದೂ ಧರ್ಮದಲ್ಲಿ ಲೀನವಾಯಿತು. ಗೌಡಪಾದ ಮತ್ತು ಶಂಕರರು ಮಾಧ್ಯಮಿಕರ ತರ್ಕವನ್ನೇ ಉಪಯೋಗಿಸಿಕೊಂಡು ಜಗತ್ತು ಅನಿತ್ಯ ಬ್ರಹ್ಮವೊಂದೇ ನಿತ್ಯಸತ್ಯವೆಂಬ ಉಪನಿಷತ್ತಿನ ಧರ್ಮವನ್ನು ಪುನರುಜ್ಜೀವನಗೊಳಿಸಿದರು.

ಪುನರ್ಜನ್ಮವು ಪ್ರತಿಕ್ಷಣದಲ್ಲೂ ಆಗುತ್ತಿರುತ್ತದೆ; ಒಂದು ದೀಪದಿಂದ ಮತ್ತೊಂದು ದೀಪ ಹತ್ತಿದಂತೆ, ಒಬ್ಬ ವ್ಯಕ್ತಿಗೆ ಸೇರಿದ ಕರ್ಮಗಳು, ಮರಣದ ಸಮಯದಲ್ಲಿ ಮತ್ತೊಬ್ಬನಿಗೆ ವರ್ಗಾವಣೆ ಆಗಬಹುದು. ಆಗ ಸಂಸ್ಕಾರಗಳೂ ವರ್ಗಾವಣೆ ಆಗುವುವು. ಅದೇ ಆತ್ಮ ಮತ್ತೊಂದುಕಡೆ ಹುಟ್ಟುವುದಿಲ್ಲ. ಆತ್ಮವು ವಸ್ತುವಲ್ಲದಿದ್ದರೂ, ನಿರಂತರ ಅದೇ (ಕರ್ಮ) ಸಂಸ್ಕಾರದೊಂದಿಗೆ ಪುನರ್ಜನ್ಮದಲ್ಲಿ ಬೇರೆ ಶರೀರದಲ್ಲಿ ಕಾಣಬಹುದು. ಕರ್ಮಫಲ ಸ್ವಂತಂತ್ರವಾಗಿ ಕೆಲಸ ಮಾಡುತ್ತದೆ.

ಅದ್ವೈತ ಸಿದ್ಧಾಂತವು: ಪರಬ್ರಮ್ಮನೇ ದೇವರು ಅನ್ನುತ್ತಾರೆ– ಈಶ್ವರನನ್ನು ಸುಗುಣ ಬ್ರಹ್ಮನೆಂದು ಒಪ್ಪಲಾಗಿದೆ. ಪ್ರಸಿದ್ಧಿ ಮತ್ತು ಜನಪ್ರಿಯತೆ ಪೆಡೆದ ದರ್ಶನ. ಅದ್ವೈತವೆಂದರೆ ಎರಡಿಲ್ಲದ್ದು –ಒಂದೇ ಎಂದು ಅರ್ಥ. ಸುಮಾರು ಕ್ರಿ.ಪೂ. 800 –300 ವರ್ಷಗಳ ಹಿಂದಿನ ಉಪನಿಷತ್ತುಗಳಲ್ಲಿ ಅದ್ವೈತ ಪರ ವಾಕ್ಯಗಳು ಸಾಕಷ್ಟಿವೆ. ಉದಾಹರಣೆಗೆ: "ಸರ್ವಂ ಖಲ್ವಿದಂ ಬ್ರಹ್ಮ" ; "ಆತ್ಮೈವೇದ ಸರ್ವಂ" ; "ಅಯಮಾತ್ಮಾಬ್ರಹ್ಮ;" ;"ಬ್ರಹ್ಮ"ವೇದ ಬ್ರಹ್ಮೈವ ಭವತಿ" ; ಇತ್ಯಾದಿ ಇವುಗಳ ಆಧಾರದಿಂದ, ಒಂದು ವ್ಯವಸ್ಥಿತವಾದ ದರ್ಶನವನ್ನು ರೂಪಿಸುವ ಕೆಲಸ ಆಗಿರಲಿಲ್ಲ ಸುಮಾರು ಕ್ರಿ. ಶ. 500 ರ ರಲ್ಲಿ ಬದುಕಿರಬಹುದಾದ , ಗೌಡಪಾದ ಮುನಿಗಳು, ಮಾಂಡೂಕ್ಯ ಕಾರಿಕೆಯ ಮೂಲಕ ಮೊಟ್ಟ ಮೊದಲಿಗೆ ಅದ್ವೈತ ಸಿದ್ಧಾಂತವನ್ನು ವ್ಯವಸ್ಥಿತವಾಗಿ ಮತ್ತು ದೃಢವಾಗಿ ಪ್ರತಿಪಾದಿಸಿದರು. ಗೌಡಪಾದರ ಶಿಷ್ಯರು, ಗೋವಿಂದ ಭಗವತ್ಪಾದರು., ಅವರ ಶಿಷ್ಯರು ಶ್ರೀ ಶಂಕರರು. ಗೋವಿಂದ ಭಗವತ್ಪಾದರು "ರಸತಂತ್ರ" ವೆಂಬ ರಸಾಯನ ಶಾಸ್ತ್ರದ ಗ್ರಂಥವನ್ನು ಮಾತ್ರ ರಚಿಸಿದ್ದಾಗಿ ತಿಳಿದು ಬುರುತ್ತದೆ.

ಶಂಕರಾಚಾರ್ಯರು 8ನೇ ಶತಮಾನದಲ್ಲಿ ಈ ಭರತ ಖಂಡ ಕಂಡ ಮಹಾಪುರುಷರು. ಅಲ್ಲಿ ಅವರು ತಮ್ಮ ವ್ಯಾಖ್ಯಾನವನ್ನು ಬ್ರಹ್ಮಸೂತ್ರಗಳಲ್ಲಿ ಬರೆದರು ಮತ್ತು ಅದ್ವೈತ ವೇದಾಂತ ತತ್ತ್ವವನ್ನು ಏಕೀಕರಿಸಿದರು. ಇದರ ಮೂಲಭೂತ ತತ್ತ್ವವೆಂದರೆ ಆತ್ಮ ಮತ್ತು ಬ್ರಹ್ಮರ (ದೇವರ) ಏಕತೆ, ನಿಜವಾದ ಸ್ವಯಂ ಮತ್ತು ಸಾರ್ವತ್ರಿಕ ಪ್ರಜ್ಞೆ. ಹಿಂದೂಧರ್ಮದ ಹೆಚ್ಚಿನ ತತ್ತ್ವಗಳಿಗೆ ವಿರೋಧವಾಗಿ ಅದು ಆ ಸಮಯದಲ್ಲಿ ಪ್ರಬಲವಾಗಿತ್ತು. ಹಾಗಂತ ಅವರ ಸಿದ್ಧಾಂತವನ್ನು ಒಪ್ಪದವರನ್ನು ಕೊಲ್ಲು ಎಂದು ಎಲ್ಲಿಯೂ ಹೇಳಿಲ್ಲ. ಆರಾಧಕರಲ್ಲಿ ಪರಸ್ಪರ ಕಾದಾಟ ಹೋಗಲಾಡಿಸಲು ಇಡೀ ಭಾರತಕ್ಕೆ ಅನ್ವಯವಾಗುವ ಸ್ಮಾರ್ತ ಸಂಪ್ರದಾಯವನ್ನು ಹುಟ್ಟುಹಾಕಿದರು. ವೇದ ಪದ್ದತಿಯಲ್ಲಿ ಶ್ರುತಿ –ವೇದ

ಮತು ಸ್ಮೃತಿಗಳು–ಮನು ಸ್ಮೃತಿ ಮೊದಲಾದವು ಮತ್ತು ಪೌರಾಣಿಕ ಪದ್ದತಿಗಳ ಸಮನ್ವಯ। ಪೂಜಾದಿ ವಿಧಿಗಳನ್ನೂ, ಹೋಮ ಹವನಗಳನ್ನೂ, ಸಂಸ್ಕಾರಗಳನ್ನೂ ಮಾಡುವ ಒಂದು ಕ್ರಮ, ಸ್ಮಾರ್ತ ಸಂಪ್ರದಾಯ. ಸ್ಮಾರ್ತರು ಪಂಚಾಯತನ ಪೂಜೆಯಲ್ಲಿ ಸೂರ್ಯ, ಗಣಪತಿ, ಅಂಬಿಕಾ, ಶಿವ ಮತ್ತು ವಿಷ್ಣು ಈ ಐದು ದೇವತೆಗಳನ್ನು ಒಟ್ಟಿಗೆ, ಪ್ರಮುಖ ದೇವತೆಯನ್ನು ಮಧ್ಯದಲ್ಲಿಟ್ಟು ಪೂಜಿಸುತ್ತಾರೆ. ಯಾವುದಾದರೂ ಒಂದು ದೇವತೆಯ ಬದಲಿಗೆ ಸ್ಕಂದನನ್ನು ಸ್ಕಂದೇವತೆಯ ಉಪಾಸಕರು ಸೇರಿಸಿಕೊಳ್ಳ ಬಹುದು.

ವಿಶಿಷ್ಟಾದ್ವೈತ? ಇಲ್ಲಿ ವಿಷ್ಣುವನ್ನು ದೇವರು ಎಂದು ಆರಾಧಿಸುತ್ತಾರೆ. ಹತ್ತನೇ ಶತಮಾನದ ಶ್ರೀ ರಾಮಾನುಜರು ಸಂತರು, ವಿದ್ವಾಂಸರು ಹಾಗೂ ದಾರ್ಶನಿಕರು ಮತ್ತು ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತಪ್ರತಿಪಾದಕರು ಆಗಿದ್ದರು. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಬ್ರಹ್ಮ, ಚಿತ್, ಅಚಿತ್ ಎಂಬ ಮೂರು ತತ್ವಾಂಶಗಳು ಇವೆ. ಬ್ರಹ್ಮ ಎಂದರೆ ಪರವಸ್ತು, ದೇವರು, ಪರಮಾತ್ಮ. ಚಿತ್ ಎಂದರೆ ಆತ್ಮ. ಅಚಿತ್ ಎಂದರೆ ಜಡವಸ್ತು. ಚಿತ್ ಮತ್ತು ಅಚಿತ್ ಬ್ರಹ್ಮನ ಶರೀರಗಳಾಗುತ್ತದೆ. ಈ ಶರೀರದಿಂದ ಕೂಡಿದ ಬ್ರಹ್ಮನು ಒಬ್ಬನೇ ಆಗಿದ್ದಾನೆ. ಚಿತ್ ಮತ್ತು ಅಚಿತ್ ಬ್ರಹ್ಮನಿಂದ ಬೇರೆಯಾದರೂ ಅವನಿಗೆ ಅಧೀನವಾಗಿವೆ.

ಈ ಸಿದ್ಧಾಂತದಲ್ಲಿ ಹೇಳಲಾಗಿರುವ ಬ್ರಹ್ಮನನ್ನು ಈಶ್ವರನೆಂದೂ ಕರೆಯಲಾಗಿದ್ದು, 1)ಬ್ರಹ್ಮ ಮತ್ತು ಈಶ್ವರ ಒಂದೇ ಆಗಿದ್ದು ಈಶ್ವರನೇ ಬ್ರಹ್ಮ. 2) ಈಶ್ವರನು ಅಂತರ್ಯಾಮಿ. 3) ಈಶ್ವರನು ಸರ್ವಕರ್ಮಗಳಿಗೂ ಅತೀತನು, ಪರಮಪುರುಷನು, ಪೂರ್ಣನು, ಅವನೇ ಜಗತ್ಪತಿ. ವೈಷ್ಣವ ದರ್ಶನಗಳಲ್ಲಿ ಒಂದಾದ ವಿಶಿಷ್ಟಾದ್ವೈತವು ಸಕಲ ಕಲ್ಯಾಣ ಗುಣನಿಧಿಯಾದ ವಿಷ್ಣುವನ್ನು ಪರಬ್ರಹ್ಮವೆಂದೂ ಅವನ ಅನುಗ್ರದಿಂದ ಮುಕ್ತಿದೊರೆಯುವುದೆಂದೂ ನಿರೂಪಿಸುತ್ತದೆ.

ಈ ಪಂಥ ವೇದಗಳಷ್ಟು ಹಳೆಯದಿರಬೇಕು. ವಿಷ್ಣುವನ್ನು ವೇದಪುರುಷ, ಯಜ್ಞನಾರಾಯಣ ನಾರಾಯಣ ,ವಾಸುದೇವ, ವಿಷ್ಣು – ಈ ಕಲ್ಪನೆಗಳು ಇದರಲ್ಲಿ ಒಗ್ಗೂಡುತ್ತವೆ. ಶತಪಥ ಬ್ರಾಹ್ಮಣ, ಮಹಾಭಾರತ, ಭಗವದ್ಗೀತೆ ವಿಷ್ಣು ಪುರಾಣ ಭಾಗವತಗಳು ವೈಷ್ಣವ ಪಂಥದ ಆಧಾರ ಗ್ರಂಥಗಳಾಗಿವೆ. ವೈಷ್ಣವ ಪಂಥದಲ್ಲಿ ನಾಲ್ಕು ಮುಖ್ಯ ಪಂಥಗಳು. 1. ಶ್ರೀ ಸಂಪ್ರದಾಯ (ವಿಶಿಷ್ಟಾದ್ವೈತ); 2. ಬ್ರಹ್ಮ ಸಂಪ್ರದಾಯ (ದ್ವೈತ –ತತ್ವವಾದ); 3. ರುದ್ರ ಸಂಪ್ರದಾಯ (ಶುದ್ಧಾದ್ವೈತ); ಹಾಗೂ 4. ಸನಕ ಸಂಪ್ರದಾಯ (ದ್ವೈತಾದ್ವೈತ); ಇವಕ್ಕೆ ಕ್ರಮವಾಗಿ ರಾಮಾನುಜ, ಮಧ್ವ, ವಲ್ಲಭ, ನಿಂಬಾರ್ಕರು ಆಚಾರ್ಯರು. ಚೈತನ್ಯರ ಅಚಿಂತ್ಯ ಬೇಧಾಬೇಧವು , ಮಾಧ್ವ ಮತದ ಒಂದು ಶಾಖೆ. ಏಳರಿಂದ 10 ನೇ ಶತಮಾನದ ವರೆಗಿದ್ದ, ಆಳ್ವಾರರು (ತಮಿಳು), ತಮಿಳು ಗ್ರಂಥಗಳ ಆಧಾರಗಳಿಂದ, ಆ ಆಚಾರ್ಯರುಗಳು ಈ ಪಂಥಕ್ಕೆ ಪ್ರಚಾರ ಕೊಟ್ಟರು. ಇದು ಭಕ್ತಿ ಪ್ರಧಾನವಾದುದು. ಈ ಪರಂಪರೆಯಲ್ಲಿ, ರಾಮಾನುಜಾಚಾರ್ಯರು (ಕ್ರಿ. ಶ. 1017–1137) ವಿಶಿಷ್ಠಾದ್ವೈತವನ್ನು ವ್ಯವಸ್ಥಿತವಾಗಿ ರೂಪಿಸಿ, ಪ್ರಚಾರ ಪಡಿಸಿದರು. ಇವರು ಮಹಾನ್ ಮೇಧಾವಿ, ಪಂಡಿತರು, ಮತ್ತು ಭಕ್ತರು. ಬ್ರಹ್ಮ ಸೂತ್ರಕ್ಕೆ ಇವರು ಬರೆದ ಶ್ರೀ ಭಾಷ್ಯ ಇವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ.

ಜೀವವು ಚೈತನ್ಯ ಸ್ವರೂಪಿ. ದೇಹೇಂದ್ರಿಯಗಳಿಗಿಂತ ಬೇರೆ. ಜೀವ ಬ್ರಹ್ಮರ ಐಕ್ಯವನ್ನು ವಿಶಿಷ್ಟಾದ್ವೈತ ಒಪ್ಪುವುದಿಲ್ಲ. ಜೀವ ಬೇರೆ , ಬ್ರಹ್ಮ ಬೇರೆ. ಜೀವ (ಆತ್ಮ ) ಬ್ರಹ್ಮದಿಂದ ಬೇರೆ –ದೀಪದಿಂದ ಬೆಳಕಿದ್ದಂತೆ. ಬೆಳಕು ಆತ್ಮ ; ದೀಪದ (ಬ್ರಹ್ಮ) ಭಾಗವಲ್ಲ . ಜೀವನೊಳಗೆ ಅಂತರ? ಯಾಮಿಯಾಗಿ ಪರಮಾತ್ಮನಿದ್ದಾನೆ. ಜೀವನು ಉಪಾದಿಗಳಿಂದ ಆವೃತನಾಗಿ ದುಃಖಿಯಾಗಿದ್ದಾನೆ. ಸ್ವಭಾವತಃ ಆನಂದ ರೂಪಿ . ಕಾರಣ ಅನಾದಿಯಾದ ಕರ್ಮ. ಅದು ಜೀವನಿಗೆ ಮಾತ್ರ ಪರಮಾತ್ಮನಿಗಲ್ಲ. ಜೀವನಿಗೆ ಇಚ್ಛಾ

ಸ್ವಾತಂತ್ರ್ಯ ಉಂಟು. ಆತ್ಮಕ್ಕೆ ಅನ್ನ ಪ್ರಮಾಣದ ಆಕೃತಿ ; ಹುಟ್ಟು ಸಾವುಗಳಿಲ್ಲ. ಒಂದು ಆತ್ಮಕ್ಕೂ ಇನ್ನೊಂದು ಆತ್ಮಕ್ಕೂ ಸಾದೃಶ್ಯವಿದೆ.

ಅವರ ಪ್ರಕಾರ ಶುದ್ಧ ಜ್ಞಾನವೆಂಬುದಿಲ್ಲ. ಜ್ಞಾನವು ಯಾವುದಾದರೂ, ವಸ್ತುವಿಗೆ ಸಂಬಂಧಪಟ್ಟಿರಬೇಕು. ಜ್ಞಾನವು ದ್ರವ್ಯವಾದರೂ ಅದು, ಜೀವ, ಈಶ್ವರನನ್ನು ಆಶ್ರಯಿಸಿರಬೇಕಾಗುತ್ತದೆ. ದೀಪ – ಬೆಳಕು ; ಬೆಳಕು ದೀಪದ ಧರ್ಮ, ಅದರ ಸ್ವರೂಪವಲ್ಲ, ಜ್ಞಾನವು ಜಡವೂ ಅಲ್ಲ, ಚೇತನವೂ ಅಲ್ಲ. ಸ್ವಯಂ ಪ್ರಕಾಶಕ, ತನ್ನನ್ನೂ ಬೆಳಗಿ – ಬೇರೆಯದನ್ನೂ ತೋರಿಸುತ್ತದೆ. ಆದರೆ ಹಾಗೆ ಮಾಡುತ್ತೇನೆ ಎಂಬ ಜ್ಞಾನ ಅದಕ್ಕಿಲ್ಲ. ಅಂದರೆ ಜ್ಞಾನಕ್ಕೆ ಜ್ಞಾನವಿಲ್ಲ. ಹಾಗಾಗಿ ಅದು ಜಡ, ಸುಖ, ದುಃಖ ಇತ್ಯಾದಿ ಎಲ್ಲಾ ಜ್ಞಾನವೇ ; ಆತ್ಮನ ಅನಂತ ಗುಣಗಳೆಲ್ಲಾ ಧರ್ಮಭೂತ ಜ್ಞಾನದ ಅವಸ್ಥಾ ಬೇಧಗಳಾಗಿವೆ. ಭಕ್ತಿ– ಪ್ರತಿಪತ್ತಿಗಳೂ ಅದರ ಬೇಧವೇ .

ಭಕ್ತಿಗಿಂತ ಸುಲಭವಾದ ದಾರಿ ಪ್ರಪತ್ತಿ ಅಥವಾ ಶರಣಾಗತಿ. ತಾನು ಭಗವಂತನ ಶೇಷ ಎಂದು ತಿಳಿದು ಶೇಷತ್ವಾನುಸಂಧಾನ ಮಾಡುವುದೇ ಪ್ರಪತ್ತಿ. ಸರ್ವಸ್ವ ಅರ್ಪಣ ಭಾವ. ಸದಾ ಅರ್ಚನೆ , ಕೀರ್ತನೆ, ನಾಮಸ್ಮರಣೆ ಮಾಡುವುದು. ಇದಕ್ಕೂ ಗುರು ಉಪದೇಶ ಅಗತ್ಯ. ಜಾತಿ, ಕುಲ, ಬೇಧವಿಲ್ಲದೆ, ಲಕ್ಷ್ಮಣನ ಆದರ್ಶವನ್ನು ಅನುಸರಿಸುವುದು. ಭಕ್ತಿಯಿಂದ ಸಾಕ್ಷಾತ್ಕಾರವಾದಾಗ ಆತ್ಮನು ದಿವ್ಯ ಶರೀರಿಯಾಗಿ ವೈಕುಂಠದಲ್ಲಿರುವನು.

ಸಂಸಾರ ದುಃಖದಲ್ಲಿರುವ ಜೀವನಿಗೆ ಭಗವಂತನ ಕರುಣೆಯಿಂದ ಬಿಡುಗಡೆಯ ಬಯಕೆಯಾಗುವುದು. ಜ್ಞಾನ ಕರ್ಮಸೇರಿ ಭಕ್ತಿಗೆ ಕಾರಣ. ವೈದಿಕ ಕರ್ಮ, ದೇವತಾ ಅರ್ಚನೆ, ತಪಸ್ಸು, ಯಜ್ಞ, ತೀರ್ಥಯಾತ್ರೆ, ದಾನ, ಇತ್ಯಾದಿ, ಕರ್ಮಗಳು. ಜ್ಞಾನವೆಂದರೆ ತಾನು ಭಗವಂತನ, ಶೇಷನೆಂಬ ತಿಳಿವಳಿಕೆಯುಳ್ಳ ಧ್ಯಾನ. ಅದರಿಂದಾಗಿ ಚಿತ್ತ ಶುದ್ಧಿ ; ಈಶ್ವರ ಪ್ರೀತಿ, ಮತ್ತು ಈಶ್ವರ ಸಾಕ್ಷಾತ್ಕಾರ.

ದ್ವೈತ ದರ್ಶನ– ಇಲ್ಲಿ ದೇವರನ್ನು ವಿಷ್ಣುವೆಂದು ಕರೆಯಲಾಗಿದೆ– ದ್ವೈತ ಸಿದ್ಧಾಂತ ವೆಂದು ಪ್ರಸಿದ್ಧವಾಗಿರುವ ಮದ್ವಾಚಾರ್ಯರಿಂದ ಪ್ರತಿಪಾದಿಸಲ್ಪಟ್ಟ ಮಾಧ್ವ ಸಿದ್ಧಾಂತದ ಹೆಸರು, ಬ್ರಹ್ಮ ಮೀಮಾಂಸಾಶಾಸ್ತ್ರ, ಅಥವಾ ತತ್ವವಾದ. ತಮ್ಮ ಸಿದ್ದಾಂತದ ಸಮರ್ಥನೆಗಾಗಿ ಉಪನಿಷತ್ತಿನ ಭಾಷ್ಯಗಳು, ಮಹಾಭಾರತ ತಾತ್ಪರ್ಯನಿರ್ಣಯ ಮದಲಾದ 37 ಗ್ರಂಥಗಳನ್ನು ರಚಿಸಿದ್ದಾರೆ. ಅವರ ಅನುಯಾಯಿಗಳು ಅವರನ್ನು ವಾಯುದೇವರ ಅವತಾರವೆಂದು ನಂಬಿದ್ದಾರೆ; ಹಾಗೆಂದು ಅವರೂ ಹೇಳಿಕೊಂಡಿದ್ದಾರೆ. ಮದ್ವರು ಅದ್ವೈತವನ್ನು ಉಗ್ರವಾಗಿ ಖಂಡಿಸಿದ್ದಾರೆ. ಈವರಗೂ ದ್ವೈತ ಮಂಡನೆಗಿಂತ ಹೆಚ್ಚಾಗಿ ಖಂಡನೆಯೇ ನೆಡೆದಿದೆ. ಆದರೆ ಎಲ್ಲಿಯೂ ಅದ್ವೈತರನ್ನು ಕೊಲ್ಲಿ ಎಂದು ದ್ವೈತರು ಹೇಳಿಲ್ಲ. ಜೀವನು ಈಶನ ಅಧೀನ. ಅವರಿಬ್ಬರೂ ಒಂದೇ ಎಂಬುದು ಅಸಂಬದ್ಧ –ಎಂದು ದ್ವೈತಿಗಳ ಮತ. ಮೋಕ್ಷದಲ್ಲೂ ಜೀವ ಈಶ್ವರರಿಗೆ ಬೇಧ ಉಂಟು. ಜೀವಿಗಳು ಅನಂತ –ಒಂದೊಂದೂ ಭಿನ್ನ –ಶಾಶ್ವತ. ಬಂಧ –ಮೋಕ್ಷ ; ಸುಖ–ದುಃಖ ನಿಜವಾದದ್ದು. ಈಶನ ಅನುಗ್ರಹದಿಂದಲೇ ಜೀವನ ಬದುಕು. ಮೋಕ್ಷದಲ್ಲಿ ಜೀವನ ಅಸ್ತಿತ್ವ ನಾಶವಾರೆ ಮೋಕ್ಷಕ್ಕೆ ಅರ್ಥವಿಲ್ಲ. ಜೀವನಿಗೆ ಕರ್ತೃತ್ವ ಭೋಕ್ತೃತ್ವ ಎರಡೂ ಇವೆ. ಆದರೆ ಜೀವನು ಪರಮಾತ್ಮನ ಅಧೀನ. ಅಸ್ವತಂತ್ರನಾದರೂ ಅವನ ಅನುಗ್ರಹದಿಂದ ಕರ್ತೃತ್ವ ಭೋಕ್ತೃತ್ವ ಎರಡೂ ಇವೆ. ಹಸುವಿನ ಕೆಚ್ಚಲಲ್ಲಿ ಹಾಲಿದ್ದರೂ, ಪ್ರೇರಣೆಯಿಂದ ಮಾತ್ರಾ ಬರುವಂತೆ, ತಂದೆಯು ಮಗನ ಹಿತಕ್ಕಾಗಿ ತನಗೆ ನಮಸ್ಕಾರ ಮಾಡಿಸಿಕೊಂಡಂತೆ, ದೇವರ ಪ್ರೇರಣೆ ಕೆಲಸ ಮಾಡುತ್ತದೆ. ಅನಂತ ಕೋಟಿ ಜೀವಾತ್ಮರಲ್ಲಿ ಒಂದಕ್ಕೊಂದು ಸಮವಲ್ಲ. ಜೀವಿಗಳಲ್ಲಿ ಉಚ್ಚ–ನೀಚ ತಾರತಮ್ಯವಿದೆ. ಈ ರೀತಿ ಹೇಳಿದವರು ಮಧ್ವರೊಬ್ಬರೇ! ಜೀವರು ಮೂರು ವಿಧ – ಮುಕ್ತಿಯೋಗ್ಯ, ತಮೋಯೋಗ್ಯ, ನಿತ್ಯ ಸಂಸಾರಿ. ದೇವ, ಮನುಷ್ಯ, ಪಿತೃ, ಚಕ್ರವರ್ತಿ, ಮನಷ್ಯೋತ್ತಮರು ಮುಕ್ತಿಯೋಗ್ಯರು. ದೈತ್ಯ, ರಾಕ್ಷಸ,

ಪಿಶಾಚ, ಮನುಷ್ಯಾಧಮರು ತಮೋ ಯೋಗ್ಯರು, ಇವರಿಗೆ ಸಂಸಾರಿಕ ಸುಖವೇ ಸುಖ. ಇವರ ಸ್ವರೂಪವೇ ದುಃಖ; ನಿಜ ಸುಖವಿಲ್ಲ. ಕೊನೆಗೆ ನರಕವಾಸ ವೆಂಬ ಸ್ಥಿತಿ. ನಿತ್ಯ ಸಂಸಾರಿ. ಅವರವರ ಕರ್ಮಾನುಸಾರ ಸ್ವರ್ಗನರಕ ಭೂಲೋಕಗಳಲ್ಲಿ ಸ್ವರ್ಗನರಕ ಭೂಲೋಕಗಳಲ್ಲಿ ಸಂಚರಿಸುವರು.; ಹೀಗೆ ಬೇಧ ಭಾವದಿಂದ ಇರುವುದೇ ಸರಿ. ಇಲ್ಲದಿದ್ದರೆ ದುರಾಚಾರಕ್ಕೆ ಆಸ್ಪದವಾಗುವುದು. ಮೇಲು ಕೀಳು ಎಂಬ ಭಾವ ಇರಬೇಕು. ಸ್ವಾಮಿ–ಭೃತ್ಯ ಬಾವದಿಂದ ಇರುವುದೇ ಸರಿ. ದೇವರ ಮಹಿಮೆಯ ಜ್ಞಾನವುಳ್ಳ ಅಚಲ ಸ್ನೇಹವೇ ಭಕ್ತಿ. ಅದೇ ಮುಕ್ತಿಸಾಧನ. ಬೇರೆ ಅಲ್ಲ. ಜ್ಞಾನವೆಂದರೆ ಶಾಸ್ತ್ರ ಜ್ಞಾನ. ಮುಕ್ತಿ ಎಂದರೆ ಅವಿದ್ಯೆಯೆಂಬ ಬಂಧದಿಂದ ಬಿಡುಗಡೆ. ದ್ವೈತ ದರ್ಶನವು ಜಗತ್ತನ್ನು ಸತ್ಯವೆಂದು ಹೇಳಿರುವುದರಿಂದ ವಾಸ್ತವ ವಾದಿ ದೃಷ್ಟಿಯನ್ನು ಹೊಂದಿದಂತೆ ತೋರುತ್ತದೆ. ಮಧ್ವರು ರಾಮಾನುಜರ ಬೇಧವಾದವನ್ನು ಅಥವಾ ಬೇಧಾಬೇಧ ವಾದವನ್ನು ಮುಂದುವರಿಸಿ ಬೇಧ ವಾದವನ್ನು ಪೂರ್ಣಗೊಳಿಸಿದರು. ಅದ್ವೈತದ ಪ್ರತ್ಯಯ ವಾದವನ್ನು ಖಂಡಿಸಿ ಜೀವಿಯ ಅನನ್ಯತೆಗೆ ಮಹತ್ವ ಕೊಟ್ಟರು. ಇವರು ಜ್ಞಾನ ಕರ್ಮಗಳನ್ನು ಭಕ್ತಿಗೆ ಅಧೀನವಾಗಿಸಿದ್ದಾರೆ. ಆದರೆ ಇವರು ಪ್ರತಿಪಾದಿಸಿದ ಜೀವಿಗಳ ತಾರತಮ್ಯವಾದವು (ಅದೂ ತಮೋಯೋಗ್ಯೀಯ ಜೀವಿಗಳ (ಗತಿಯಿಲ್ಲದ ಜೀವಿಗಳ) ವಾದವು ಟೀಕೆಗೆ ಒಳಗಾಗಿದೆ. ವೇದೋಪನಿಷತ್ತುಗಳಿಗೆ ವೈಷ್ಣವ ದೃಷ್ಟಿಕೋನ ಕೊಟ್ಟಿರುವುದು ಮತ್ತು ಹರಿ–ಗುರು–ವಾಯುಗಳಿಗೆ ಅತಿಯಾದ ಮಹತ್ವ ಕೊಟ್ಟಿರುವುದು ವಿಶಿಷ್ಟವಾಗಿದೆ.

ಕರ್ಮ ಸಿದ್ಧಾಂತ:– ಇಲ್ಲಿ ದೇವರು ನಿನ್ನ ಮನಸ್ಸಿನಲ್ಲೇ ಇದ್ದಾನೆ ? ಶುದ್ಧ ಕರ್ಮಗಳನ್ನು ಮಾಡು ಎನ್ನುತ್ತದೆ. 'ಕರ್ಮ ಸಿದ್ಧಾಂತ' ಇದು ಜ್ಯೋತಿಷ್ಯ ಶಾಸ್ತ್ರದ ಮೂಲ. "ಪೂರ್ವಜನ್ಮ ಕೃತ0 ಪಾಪಂ ವ್ಯಾಧಿರೂಪೇಣ ಭಾಧ್ಯತೇ" ಪೂರ್ವ ಜನ್ಮದಿಂದ ಉಂಟಾದ. ಕರ್ಮ ಫಲಗಳನ್ನು ನಾವು ಈ ಜನ್ಮದಲ್ಲಿ ಅನುಭವಿಸುತ್ತೇವೆ. ಕರ್ಮದಿಂದ

ಉಂಟಾದ ಫಲವನ್ನು ಆತ್ಮನು ಅನುಭವಿಸಿಯೇ ತೀರಬೇಕು. ಆತ್ಮವು ಹೇಗೆ ಅನಾದಿಯೊ ಹಾಗೇ ಕರ್ಮವು ಸಹ ಅನಾದಿಯೇ. ಆತ್ಮವು ಹುಟ್ಟಿದಾಗಲೇ ಕರ್ಮವು ಸಹ ಹುಟ್ಟಿದೆ. ಈ ಕರ್ಮಗಳನ್ನು ಅನುಭವಿಸಲು ಆತ್ಮವು ಅನೇಕ ಶರೀರಗಳನ್ನು ಹೊಂದುತ್ತದೆ. ಇದನ್ನೇ ನಾವು ಪುನರ್ಜನ್ಮವೆಂದು ಕರೆಯುತ್ತೇವೆ. ಕರ್ಮದ ಮೂಲ ಮನಸ್ಸು. ಆದ್ದರಿಂದ ಜ್ಯೋತಿಷ ಶಾಸ್ತ್ರದಲ್ಲಿ ಮನಸ್ಸಿಗೇ (ಚಂದ್ರನಿಗೆ) ಹೆಚ್ಚು ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಭೂತ, ವರ್ತಮಾನ, ಭವಿಷತ್, – ಈ ಮೂರು ಅವಸ್ಥೆಗಳಿಗೆ ಅನುಗುಣವಾಗಿ ಕರ್ಮ ಸಿದ್ಧಾಂತವನ್ನು ಮೂರು ವಿಭಾಗಗಳನ್ನಾಗಿ ಮಾಡಲಾಗಿದೆ.

ಕರ್ಮ ಸಿದ್ದಂತದ ಬಗ್ಗೆ ರಜನೀಶ್ ಇದನ್ನ ಓಶೋ ರಜನೀಶ್ ಹೀಗೆ ವರ್ಣಿಸಿದ್ದಾರೆ ವಾಸ್ತವವಾಗಿ ಕರ್ಮದ ಹಿಂದೆ ನಿಯಮ ಕೊಡು ವಂಥವರು ಯಾರೂ ಇಲ್ಲ. ಬದಲಾಗಿ, ಅದು ಅಸ್ತಿತ್ವದ ಆಂತರ್ಯಕ್ಕೆ ಸಂಬಂಧಿಸಿದುದಾಗಿದೆ. ಅದು ಜೀವನದ ಸ್ವಭಾವವಾಗಿದೆ. ನೀವು ಏನನ್ನು ಬಿತ್ತುವಿರೋ, ಅದೇ ನಿಮಗೆ ಸಿಗುತ್ತದೆ. ಆದರೆ ಇದು ಸಂಕೀರ್ಣವಾದುದು, ಇದು ಅಷ್ಟೇನೂ ಸರಳ ಇಲ್ಲ, ಸ್ಪಷ್ಟವೂ ಇಲ್ಲ. ಅದನ್ನು ಸ್ಪಷ್ಟವಾಗಿ ತಿಳಿಯಬೇಕಾದಲ್ಲಿ, ಮನೋವೈಜ್ಞಾನಿಕ ರೀತಿಯಲ್ಲಿ ಅರಿಯಲು ಯತ್ನಿಸಿದರೆ ಆಧುನಿಕ ಮನಸ್ಸಿಗೆ ಅರ್ಥವಾಗುವುದು. ಪ್ರತಿಯೊಂದು ಅಪರಾಧವೂ ಸ್ವಯಂ, ಪ್ರಕೃತಿಯ ವಿರುದ್ಧವಾಗಿರುತ್ತದೆ. ಪ್ರತಿಯೊಂದು ಅಪರಾಧವೂ ನಮ್ಮ ಅಪ್ರಜ್ಞೆಯಲ್ಲಿ ದಾಖಲಾಗುತ್ತದೆ. ಅದನ್ನು ಬೌದ್ಧರು ಆಲಯ ವಿಜ್ಞಾನ ಎನ್ನುತ್ತಾರೆ. ಅದು ಪ್ರಜ್ಞೆಯ ಉಗ್ರಾಣ ಆಗಿದೆ. ಅಪರಾಧವೆಂದರೆ ನನ್ನ ವಿವರಣೆ ಹೀಗಿದೆ – ನಿಮ್ಮ ವಿರುದ್ಧ , ನಿಮ್ಮ ಪ್ರಕೃತಿಯ ವಿರುದ್ಧ, ನಿಮ್ಮ ಅಸ್ತಿತ್ವದ ವಿರುದ್ಧ ಏನು ಹೋಗುವುದೋ ಅದು ಅಪರಾಧ. ಅದನ್ನು ನೀವು ತಿಳಿಯಬಹುದು. ಹೇಗೆಂದರೆ ನೀವು ತಪ್ಪು ಮಾಡಿದಾಗ ಅದು ನಿಮ್ಮ ಅಪ್ರಜ್ಞೆಯಲ್ಲಿ ದಾಖಲಾಗುತ್ತದೆ. ಅದೊಂದು

ನಿರ್ದಿಷ್ಟ ರೀತಿಯಲ್ಲಿ ದಾಖಲಾಗಿ ನಿಮ್ಮಲ್ಲೊಂದು ಪಾಪ ಪ್ರಜ್ಞೆಯನ್ನು ಮೂಡಿಸಲು ಶುರು ಮಾಡುತ್ತದೆ. ನಿಮ್ಮಿಂದ ನೀವೇ ನಿಂದನೆಗೆ ಒಳಗಾದ ಅನುಭವ ಆಗಲು ಶುರು ಆಗುತ್ತದೆ. ನಿಮ್ಮಲ್ಲಿ ಅನರ್ಹತೆಯ ಭಾವ ಮೂಡಲು ಶುರು ಆಗುತ್ತದೆ. ನೀವು ಹೇಗಿರಬೇಕೋ ಹಾಗಿಲ್ಲಾ ಎನ್ನುವ ಭಾವ ಮೂಡಿಸುತ್ತದೆ. ನಿಮ್ಮೊಳಗೆ ಏನೋ ಒಂದು ಕಠಿಣ ಆದಂತೆ ತೋರುತ್ತದೆ. ನೀವು ಸಹಜವಾಗಿ ಪ್ರವಹಿಸುತ್ತಿರುವುದಿಲ್ಲ. ಅದು ನಿಮಗೆ ನೋವನ್ನು ತರುತ್ತದೆ. ನಿಷ್ಪ್ರಯೋಜಕತೆಯ ಭಾವವನ್ನು ಮೂಡಿಸುತ್ತದೆ.

ನೀವು ಏನಾಗಿರುವಿರೊ, ಏನೆಲ್ಲಾ ಮಾಡುವಿರೋ ಅದು ನಿರಂತರವಾಗಿ ದಾಖಲಾಗುತ್ತಿರುತ್ತದೆ. ಅದೊಂದು ಸ್ವಾಭಾವಿಕ ಸಂಗತಿ. ಅದನ್ನು ಬೇರಾರೂ (ಚಿತ್ರಗುಪ್ತ) ಬರೆದು ಕೊಳ್ಳುತ್ತಿರುವುದಿಲ್ಲ. ನೀವು ಸುಳ್ಳು ಹೇಳುತ್ತಿದ್ದರೆ, ನೀವು ಸುಳ್ಳು ಹೇಳುತ್ತಿದ್ದೀರಿ ಎಂದು ಅದರಲ್ಲಿ ದಾಖಲಾಗುತ್ತದೆ. ಆಗ ನೀವು ಆ ಸುಳ್ಳನ್ನು ಕಾಪಾಡಲು ಸಾವಿರ ಸುಳ್ಳು ಹೇಳಬೇಕಾಗುತ್ತದೆ. ಆಗ ನೀವು ಸುಳ್ಳು ಹೇಳುವುದನ್ನೇ ಮುಂದುವರೆಸಿಕೊಂಡು ಹೋಗುವಿರಿ ಅಪ್ಪಟ ಸುಳ್ಳು ಗಾರರಾಗುವಿರಿ.

ಸಮಾನವಾದವುಗಳು ಪರಸ್ಪರ ಆಕರ್ಷಿತಗೊಳ್ಳುತ್ತವೆ ಇದು ಪ್ರಕೃತಿಯ ನಿಯಮ . ನೀವು ಸುಳ್ಳು ಹೇಳಲು ಶುರು ಮಾಡಿಕೊಂಡು ಅನೇಕ ಸುಳ್ಳುಗಳನ್ನು ಆಮಂತ್ರಣ ನೀಡಿ ಅಪ್ಪಟ ಸುಳ್ಳುಗಾರ ರಾಗುತ್ತೀರಿ. ಆಗ ಸತ್ಯಕ್ಕೆ ಆಮಂತ್ರಣ ಇಲ್ಲವಾಗಿ ತೊಂದರೆಯಿಲ್ಲದ ಸಮಯದಲ್ಲೂ ಕೂಡಾ ನೀವು ಸತ್ಯವನ್ನು ನುಡಿಯಲಾರಿರಿ. ಅದೇ ರೀತಿ ನೀವು ಸ್ವಾಭಾವಿಕ ಸತ್ಯ ಸಂಧರಾಗಿದ್ದರೆ ನಿಮಗೆ ಒಂದು ಸುಳ್ಳು ಹೇಳುವುದಕ್ಕೂ ಅತ್ಯಂತ ಕಷ್ಟವಾಗುತ್ತದೆ. ಇದೊಂದು ಸ್ವಾಭಾವಿಕ ಸಂಗತಿ ಅಷ್ಟೇ ಪರಮಾತ್ಮ ಎಲ್ಲೋ ಪುಸ್ತಕವನ್ನು ಇಟ್ಟುಕೊಂಡಿಲ್ಲ ನೀವೇ ಆ ಪುಸ್ತಕವಾಗಿದ್ದೀರಿ ನೀವೇ ಪರಮಾತ್ಮ ನಿಮ್ಮ ಅಸ್ತಿತ್ವವೇ ಆ ಪುಸ್ತಕ.

ಪ್ರತಿ ಕ್ಷಣ ನಿಮ್ಮನ್ನು ನೀವು ಸೃಷ್ಟಿಸುತ್ತಿದ್ದೀರಿ, ನಿಮ್ಮ ಅಸ್ತಿತ್ವದಲ್ಲಿ ಒಂದೋ ಅನುಗ್ರಹ ಮೂಡಬಹುದು ಅಥವಾ ಅಪಮಾನ ಮೂಡಬಹುದು. ಇದೆ ಕರ್ಮದ ನಿಯಮ. ಇದರಿಂದ ಯಾರಿಗೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇದನ್ನು ನೀವು ಒಮ್ಮೆ ಅರಿತಿರಿ ಎಂದರೆ ಸಂಗತಿಗಳು ಬದಲಾಗಲು ಆರಂಭಿಸುವುದು. ಒಮ್ಮೆ ನಿಮಗೆ ಅದರ ಅನಿವಾರ್ಯತೆ ಯ ಅರಿವಾದರೆ ನೀವು ಸಂಪೂರ್ಣ ಭಿನ್ನ ವ್ಯಕ್ತಿಯಾಗುವಿರಿ. ಇಂತಹ ಕರ್ಮ ಸಿದ್ಧಾಂತವನ್ನು ನಂಬದವರನ್ನು ಕೊಲ್ಲು ಎಂದು ಇಂದಿಗೂ ಯಾರೂ ಹೇಳಿಲ್ಲ.

ಬಸವಣ್ಣ (ಬಸವ, ಬಸವೇಶ್ವರ) ಹಿಂದೂ ಧರ್ಮವು ತನ್ನ ಉತ್ಸಾಹ ಮತ್ತು ಶಕ್ತಿಯನ್ನು ಕಳೆದುಕೊಂಡಿರುವ ಸಮಯದಲ್ಲಿ ಮತ್ತು ಸಂಪ್ರದಾಯ ಮತ್ತು ಸಂಪ್ರದಾಯಗಳನ್ನು ಸ್ವಲ್ಪ ಕುರುಡಾಗಿ ಅನುಸರಿಸುತ್ತಿದ್ದ ಸಮಯದಲ್ಲಿ ಬಸವ ಧರ್ಮವು ಜನಿಸಿತು. ಬಸವನ ಆಗಮನವು ಸಂಸ್ಕೃತಿಯಲ್ಲಿ ಹೊಸ ಪುನರುಜ್ಜೀವನದ ಪ್ರಾರಂಭವನ್ನು ಗುರುತಿಸುತ್ತದೆ, ಸಾಮಾಜಿಕ ಸುಧಾರಣೆ ಮತ್ತು ಧಾರ್ಮಿಕ ಜಾಗೃತಿ. ಅವನ ಆತ್ಮವು ಮೂಲಭೂತವಾಗಿ ಸೃಜನಾತ್ಮಕ ಪ್ರತಿಭೆಯ ಆತ್ಮವಾಗಿದ್ದು, ಅವನ ವಯಸ್ಸಿನ ಅಗತ್ಯತೆಗಳನ್ನು ಸ್ಪಷ್ಟವಾಗಿ ನೋಡುವ ಮತ್ತು ಹೊಸ ನಿರ್ಮಾಣಗಳಿಗೆ ರೂಪುಗೊಳ್ಳುವ ಚೈತನ್ಯದಿಂದ ಕೂಡಿತ್ತು. ಅವರು ಮುಖ್ಯವಾಗಿ ಸ್ವಚ್ಚ ಸಮಾಜದ ನಿರ್ಮಾಣ ಮತ್ತು ತಿದ್ದುವಿಕೆಗಾಗಿ ಬಂದರೇ ಹೊರತು ಯಾವ ಪಂಥಗಳನ್ನು ನಾಶಮಾಡಲು ಬಂದವರಲ್ಲ.

ಬಸವಣ್ಣನವರು ಎಲ್ಲರಲ್ಲೂ ದೇವರನ್ನು ಕಾಣುತ್ತಿದ್ದರು. ಆ ಮೂಲಕ ಸಂವೇದನೆಯ ಸಾಗರವನ್ನೇ ಸೃಷ್ಟಿಸುತ್ತಾರೆ. ಅವರು ಬದುಕನ್ನು ಪ್ರೀತಿಸುವ ಕ್ರಮ ವಿಶ್ವಮಾನ್ಯವಾಗಿದೆ. – ಅಹಂಕಾರ ಮತ್ತು ಭಯದಿಂದ ದೇವರನ್ನು ಪೂಜಿಸುವ ಆವಶ್ಯಕತೆ ಇಲ್ಲ ಎಂದು ಬಸವಣ್ಣನವರು ತಿಳಿಸಿದ್ದಾರೆ. ಭಕ್ತಿಯು ಅಂತಃಕರಣದಿಂದ ತುಂಬಿರಬೇಕು ಮತ್ತು

ದಾಸೋಹ ಭಾವದಿಂದ ಕೂಡಿರಬೇಕು ಅಂಥವರು ಮಾತ್ರ ಬಸವಣ್ಣನವರ ದೇವರನ್ನು ಆರಾಧಿಸುವ ಯೋಗ್ಯತೆಯನ್ನು ಪಡೆಯುತ್ತಾರೆ. ಅವರೇ ಶರಣರಾಗುತ್ತಾರೆ. – ಜಗತ್ತಿನ ಮತ್ತಾವ ಧರ್ಮಗಳಲ್ಲಿಯೂ ಇರದ ದೇವನನ್ನು ವಿಶ್ವದ ಆಕಾರದಲ್ಲಿ ತಾತ್ವಿಕವಾದವಾಗಿ ರೂಪಿಸಿ ಪೂಜಿಸುವ ಪರಿಪೂರ್ಣತೆಯನ್ನ ಇಲ್ಲಿ ಕಾಣಬಹುದು.? ಇಲ್ಲಿ ಏಕದೇವೋಪಾಸನೆ ಅದು ಶಿವನನ್ನ ಇರಬಹುದು ಕೂಡಲಸಂಗಮ ದೇವನನ್ನ ಇರಬಹುದು, ಇಸ್ಟಲಿಂಗವನ್ನಿರಬಹುದು. ಒಟ್ಟಿನಲ್ಲಿ ವಚನದಲ್ಲೇ ಮೂರ್ತಿ ರೂಪಕ ಇಸ್ಟಲಿಂಗಾವನ್ನು ಪೂಜಿಸುವ ಪ್ರಕ್ರಿಯೆ ಸೂಚಿಸಿರುತ್ತದೆ.

ಭಾರತದ 12 ನೇ ಶತಮಾನದ ಹಿಂದೂ ತತ್ವಜ್ಞಾನಿ, ಶಿವ ಕೇಂದ್ರೀಕೃತ ಭಕ್ತಿ ಚಳುವಳಿಯಲ್ಲಿ ಕನ್ನಡ ಕವಿ ಬಸವಣ್ಣ ವಚನಗಳ ಮೂಲಕ ಸಾಮಾಜಿಕ ಅರಿವು ಹರಡಿದರು, ಬಸವಣ್ಣನವರು ಲಿಂಗತಾರತಮ್ಯ ಸಾಮಾಜಿಕ ತಾರತಮ್ಯ, ಮೂಢನಂಬಿಕೆಗಳನ್ನು ನಿರಾಕರಿಸಿದರು. ಇಷ್ಟಲಿಂಗ ಹಾರವನ್ನು ಪರಿಚಯಿಸಿದರು (ಶಿವ ಲಿಂಗ) ಶಿವನ ಒಂದು ಭಕ್ತಿ ಒಂದು ನಿರಂತರ ಜ್ಞಾಪನೆ ಎಂದು. ಅವರ ದೃಷ್ಟಿಯಲ್ಲಿ ದೇವನು ಒಬ್ಬ ಮತ್ತು ಅವನು ಮಾನವನಲ್ಲಿದ್ದಾನೆಯೇ ಹೊರತು ಗುಡಿ–ಗುಂಡಾರಗಳಲ್ಲಿ ಅಲ್ಲ. ಕೆಲಸ ಮಾಡಿ ಜೀವನ ನಡೆಸಬೇಕು, ಆಲಸಿ ಜೀವನ ಸಲ್ಲ. ಸುಳ್ಳು ಹೇಳುವುದು, ವಂಚಿಸುವುದು, ಕೊಲೆ–ಸುಲಿಗೆ ಮಾಡುವುದು, ಪ್ರಾಣಿಬಲಿ ನೀಡುವುದು, ಪರಧನ ಹರಣ, ಪರಸ್ತ್ರೀ ವ್ಯಾಮೋಹ ಹೊಂದುವುದು ಘೋರ ಅಪರಾಧ. ಕೆಲಸದಲ್ಲಿ ಮೇಲು ಅಥವಾ ಕೀಳು ಎಂಬುದಿಲ್ಲ. ಪುರುಷನಂತೆ ಮಹಿಳೆಗೂ ವಿದ್ಯಾಭ್ಯಾಸದ ಮತ್ತು ತನ್ನ ಜೀವನವನ್ನು ರೂಪಿಸಿಕೊಳ್ಳುವ ಹಕ್ಕಿದೆ. ಹೀಗೆ ಸಮಾನತೆ, ಕಾಯಕ, ದಾಸೋಹ ತತ್ವಗಳನ್ನು ಸ್ವೀಕರಿಸುವ ಮತ್ತು ಆಚರಿಸುವ ಯಾರು ಬೇಕಾದರೂ ಶಿವಶರಣರಾಗ ಬಹುದು ಎಂದು ಬಸವಣ್ಣವರು ಸಾರಿದರು.

ಬಹು–ದೇವರುಗಳನ್ನು ಸ್ತುತಿಸುತ್ತಿದ್ದ ಮತ್ತು ಪುರೋಹಿತಶಾಹಿಯಿಂದ ನಿರಂತರವಾಗಿ ವಂಚನೆಗೊಳಗಾಗುತ್ತಿದ್ದ ಜನತೆಗೆ ಬಸವಣ್ಣನವರು ಹೊಸ ಜೀವನ ನೀಡಿದರು. ಜಾತಿ, ಮತ, ಲಿಂಗಗಳ ಭೇದವನ್ನು ತಿರಸ್ಕರಿಸಿದ ಬಸವಣ್ಣನವರು ಸಾಮಾಜಿಕ ಕ್ರಾಂತಿಗೆ ಕಾರಣವಾದರು. ಮಾನವಿಯತೆ. ಕಾಯಕ ನಿಷ್ಠೆ ಧರ್ಮದ ಬುನಾದಿಯಾಗಬೇಕು ಎಂದು ಬಲವಾಗಿ ನಂಬಿದ್ದರು. ಬಸವಣ್ಣ ತಮ್ಮ ವಚನಗಳ ಮೂಲಕ ಕಾಯಕವೇ ಕೈಲಾಸ, ದಯವೇ ಧರ್ಮದ ಮೂಲವಯ್ಯ, ಅಯ್ಯ ಎಂದರೆ ಸ್ವರ್ಗ ಎಲವೂ ಎಂದರೆ ನರಕ ಎಂದು ಸಾರುವ ಮೂಲಕ ತಮ್ಮ ಮಾನವಾತಾ ವಾದಕ್ಕೆ ಸಾಹಿತ್ಯದ ಸ್ಪರ್ಶ ನೀಡಿದರು. ಬಸವಣ್ಣನವರ ಪ್ರೇರಣೆಯಿಂದ ಹರಿಜನ ಮತ್ತು ಬ್ರಾಹ್ಮಣ ಕುಟುಂಬಗಳ ನಡುವೆ ನಡೆದ ಅನುಲೋಮ ವಿವಾಹ ಕಲ್ಯಾಣದ ಕ್ರಾಂತಿಗೆ ಮುನ್ನುಡಿಯಾಯಿತು.

ಬ್ರಹ್ಮ–ವಿಷ್ಣು–ಮಹೇಶ್ವರರೆಂಬ ತ್ರಿಮೂರ್ತಿಗಳನ್ನು ಮೀರಿದ ಸೃಷ್ಟಿಕರ್ತನೇ ಶ್ರೇಷ್ಠವೆಂದು ಘೋಷಿಸಿ ಆ ದೇವನನ್ನು ಲಿಂಗದೇವ ಎಂದು ಕರೆದರು. ನಿರಾಕಾರ ದೇವನಿಗೆ ಮನುಷ್ಯರ, ಪ್ರಾಣಿಗಳ ಆಕಾರ ಕೊಡುವುದು ಸರಿಯಲ್ಲ ಎಂಬ ಭಾವ ತಳೆದು, ದೇವನ ಸಾಕಾರ ಕೃತಿಯೇ ಬ್ರಹ್ಮಾಂಡ, ಇದು ಗೋಲಾಕಾರದಲ್ಲಿದೆ. ಆದ್ದರಿಂದ ಲಿಂಗದೇವನನ್ನು ವಿಶ್ವದಾಕಾರದಲ್ಲಿ ಪೂಜಿಸುವುದು ಸರಿ ಎಂದು ಇಷ್ಟಲಿಂಗದ ಪರಿಕಲ್ಪನೆ ಕೊಟ್ಟರು. ದೇವರ ಕುರುಹಾದ ಇಷ್ಟಲಿಂಗವು ಮಾನವನ ಜಾತಿ, ವರ್ಣ, ವರ್ಗ ಭೇದಗಳನ್ನು ಕಳೆದು ಶರಣನನ್ನಾಗಿ ಮಾಡುವ ಸಾಧನವಾಗಬೇಕೆಂದು ಅದನ್ನು ಗಣ ಲಾಂಛನವನ್ನಾಗಿ ಮಾಡಿದರು. ಇಡೀ ವೀರಶೈವ ಸಮಾಜವು ಬಸವಣ್ಣನವರ ಬೋದನೆಗೆ ಮಹತ್ವವನ್ನು ನೀಡಿದೆ, ಇದು ಹಿಂದೂಧರ್ಮದ ಮುಂದುವರಿದ ಭಾಗವನ್ನು ಪ್ರತಿನಿಧಿಸುತ್ತದೆ, ಹಿಂದೂ ಧರ್ಮದಲ್ಲಿ ಅದರ ಜನ್ಮ ಭೂಮಿಗೆ ಒಂದು ಶಕ್ತಿಯನ್ನು ಕೊಡುವಂತಾ ಪಂಥವಾಗಿದೆ.

ಶಿವ ಪುರಾಣವು ಶಿವ-ಲಿಂಗ ಎಂದು ಕರೆಯಲ್ಪಡುವ ಲಿಂಗನ ಮೂಲವನ್ನು ಎಲ್ಲಾ ಕಾರಣಗಳಿಗೂ ಕಾರಣವಾದ ಆದಿ ಮತ್ತು ಅಂತ್ಯವಿಲ್ಲದ ಬೆಂಕಿಯಿಂದ ಕೂಡಿದ ಮಹತ್ತಾದ ಸ್ತಂಭದವಾಗಿದೆ ಎಂದು ವಿವರಿಸುತ್ತದೆ. ಭಗವಾನ್ ಶಿವನನ್ನು ಬೆಂಕಿಯ ಮಹತ್ತಾದ ಸ್ತಂಭದಿಂದ ಬಂದವನೆಂದು ಚಿತ್ರಿಸಲಾಗಿದೆ – ಬ್ರಹ್ಮ ಮತ್ತು ವಿಷ್ಣುವಿನ ಮೇಲೆ ತನ್ನ ಶ್ರೇಷ್ಠತೆಯನ್ನು ಸಾಬೀತುಪಡಿಸುವಂತೆ ಚಿತ್ರಿಸಲಾಗಿದೆ. ಇದನ್ನು ಲಿಂಗೋದ್ಭವ ಎಂದು ಕರೆಯಲಾಗುತ್ತದೆ. ಲಿಂಗ ಪುರಾಣವು ಲಿಂಗದ ಈ ವ್ಯಾಖ್ಯಾನವನ್ನು ಮಹತ್ತಾದ ಸ್ತಂಭವಾಗಿ ಬೆಂಬಲಿಸುತ್ತದೆ, ಇದು ಶಿವನ ಅನಂತ ಸ್ವರೂಪವನ್ನು ಸಂಕೇತಿಸುತ್ತದೆ. ಲಿಂಗಾ ಪುರಾಣದ ಪ್ರಕಾರ, ಲಿಂಗದ ರೂಪವುಳ್ಳ ಈ ಜಗತ್ತನ್ನು ಒಳಗೊಂಡಿದೆ ಎಂಬ ಸಂಪೂರ್ಣ ಸಾಂಕೇತಿಕ ನಿರೂಪಣೆಯಾಗಿದೆ – ಅಂಡಾಕಾರದ ಆಕಾರದ ಕಲ್ಲು ಜಗತ್ತಿನ ಸಂಕೇತವಾಗಿದೆ, ಮತ್ತು ಕೆಳಭಾಗದ ತಳವು ಇಡೀ ಜಗತ್ತನ್ನು ಹೊಂದಿರುವ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಇದೇ ರೀತಿಯ ವ್ಯಾಖ್ಯಾನವು ಸ್ಕಂದ ಪುರಾಣದಲ್ಲಿ ಕಂಡುಬರುತ್ತದೆ: "ಅಂತ್ಯವಿಲ್ಲದ ಆಕಾಶ (ಇಡೀ ವಿಶ್ವವನ್ನು ಒಳಗೊಂಡಿರುವ ಮಹಾನ್ ಶೂನ್ಯವಾಗಿದೆ) ಲಿಂಗಾವಾಗಿದೆ, ಭೂಮಿಯು ಅದರ ಮೂಲವಾಗಿದೆ. ಸಮಯದ ಅಂತ್ಯದಲ್ಲಿ ಇಡೀ ವಿಶ್ವ ಮತ್ತು ಎಲ್ಲಾ ದೇವರುಗಳು ಅಂತಿಮವಾಗಿ ಲಿಂಗದಲ್ಲಿ ಸ್ವತಃ ವಿಲೀನಗೊಳ್ಳುತ್ತಾರೆ. "ಲಿಂಗ ಪುರಾಣದಲ್ಲಿ, ಅಥರ್ವವೇದ ಶ್ಲೋಕವನ್ನು ಶ್ರೇಷ್ಠವಾದ ಸ್ಥಂಬಾ ಮತ್ತು ಸರ್ವೋಚ್ಚ ಸ್ವಭಾವದ ಮಹಾದೇವನ (ಮಹಾ ದೇವರು, ಶಿವ) ಕಥೆಗಳೊಂದಿಗೆ ವಿಸ್ತರಿಸಲಾಗುತ್ತದೆ. ಹೀಗೆ ಶೈವ ಭಕ್ತರು ಪೂಜಿಸುವ ಲಿಂಗವು ಬಸವಣ್ಣನವರ ಇಷ್ಟ ಲಿಂಗವೂ ಒಂದೇ ಆಗಿದೆ.

# ಪತಂಜಲಿ ಯೋಗ ಸೂತ್ರದ ದಶ "ಯಮ" "ನಿಯಮ" – ಮಾರ್ಗಗಳು[1]

1. ಅಹಿಂಸಾ – ಆಲೋಚನೆಯಿಂದ, ಮಾತಿನಿಂದ ಅಥವಾ ಪತ್ರದಿಂದ, ನಿಮ್ಮ ಕನಸಿನಲ್ಲಿಯೂ ಇತರರಿಗೆ ಹಾನಿ ಮಾಡದಿರಿ. ಒಬ್ಬ ದೈವಿಕ ಶಕ್ತಿಯ ಅಭಿವ್ಯಕ್ತಿಯಾಗಿ ಎಲ್ಲಾ ಜೀವಿಗಳನ್ನು ಹಿಂದಿರುಗಿಸಿ, ದಯೆಯಿಂದ ಜೀವಿಸಿ. ಭಯ ಮತ್ತು ಅಭದ್ರತೆ, ದುರುಪಯೋಗದ ಮೂಲಗಳಿಂದ ಹೊರ ಬರೋಣ. ಇತರರಿಗೆ ಉಂಟಾಗುವ ಹಾನಿ ಬಗ್ಗೆ ತಿಳಿದುಕೊಳ್ಳಿ ಅದು ತಪ್ಪದೇ ತನಗೆ ತಾನೇ ಹಿಂದಿರುಗುತ್ತದೆ. ದೇವರ ಸೃಷ್ಟಿಗೆ ಶಾಂತಿಯುತವಾಗಿ ಬದುಕಬೇಕು. ಭಯ, ನೋವು ಅಥವಾ ಗಾಯದ ಮೂಲವಾಗಿರಬಾರದು. ಸಸ್ಯಾಹಾರಿ ಆಹಾರವನ್ನು ಅನುಸರಿಸಿ.

2. ಸತ್ಯ – ಸತ್ಯಸಂಗತಿಗೆ ಬದ್ಧರಾಗಿರಿ, ಸುಳ್ಳಿನಿಂದ ಮತ್ತು ಭರವಸೆಗಳ ದ್ರೋಹದಿಂದ ದೂರವಿರುವುದು. ಸತ್ಯ, ದಯೆ, ಸಹಾಯಕವಾಗಿರುವುದು ಮತ್ತು ಅವಶ್ಯಕವಾಗಿರುವುದು ಮಾತ್ರ ಹೇಳು. ಆ ವಂಚನೆ ದೂರವನ್ನು ಸೃಷ್ಟಿಸುತ್ತದೆ ಎಂದು ತಿಳಿದುಕೊಂಡು, ಕುಟುಂಬದಿಂದ ಅಥವಾ ಪ್ರೀತಿಪಾತ್ರರಿಂದ ರಹಸ್ಯಗಳನ್ನು ಇಟ್ಟುಕೊಳ್ಳಬೇಡಿ. ಚರ್ಚೆಯಲ್ಲಿ ನ್ಯಾಯಯುತ, ನಿಖರ ಮತ್ತು ಸರಳರಾಗಿ, ಮೋಸಕ್ಕೆ ಅಪರಿಚಿತರಾಗಿ. ನಿಮ್ಮ ವಿಫಲತೆಗಳನ್ನು ಒಪ್ಪಿಕೊಳ್ಳಿ. ಅಪನಿಂದೆ, ವದಂತಿ ಹರಡುವಿಕೆ ಅಥವಾ ಹಿಂದಿನಿಂದ ಅಪಮಾನ ಮಾಡುವುದರಲ್ಲಿ ತೊಡಗಿಸಬೇಡಿ. ಇನ್ನೊಬ್ಬರ ವಿರುದ್ಧ ಸುಳ್ಳು ಸಾಕ್ಷಿಗಳನ್ನು ಹೊರಿಸಬೇಡ.

3. ಅಸ್ತೇಯ – ಕದಿಯದಿರುವುದು – ಕದಿಯದಿರುವ ಸದ್ಗುಣವನ್ನು ಎತ್ತಿ ಹಿಡಿಯುವುದು, ಕಳ್ಳತನ ಮಾಡದಿರುವುದು, ಸಾಲವನ್ನು

---

[1] https://www.himalayanacademy.com/media/books/code-of-conduct-ei/web/ch42.html#para-9

ಮರುಪಾವತಿಸಲು ಅಪಹಾಸ್ಯ ಬೇಡ ಅಥವಾ ವಿಫಲಗೊಳ್ಳುವುದು ಬೇಡ. ನಿಮ್ಮ ಆಸೆಗಳನ್ನು ನಿಯಂತ್ರಿಸಿ ಮತ್ತು ನಿಮ್ಮ ಸಂಪತ್ತಿನಲ್ಲಿ ವಾಸಿಸಿ. ಅನಪೇಕ್ಷಿತ ಉದ್ದೇಶಗಳಿಗಾಗಿ ಎರವಲು ಪಡೆದ ಸಂಪನ್ಮೂಲಗಳನ್ನು ಬಳಸಬೇಡಿ ಅಥವಾ ಅವುಗಳ ಹಿಂದಿನ ಬಾಕಿ ಇರಿಸಬೇಡಿ. ಇತರರನ್ನು ಜೂಜಾಡು ಮಾಡಬೇಡಿ ಅಥವಾ ವಂಚಿಸಬೇಡಿ. ಭರವಸೆಗಳಿಂದ ಹಿಂಜರಿಯಬೇಡಿ. ಅನುಮತಿ ಮತ್ತು ಸ್ವೀಕೃತಿ ಇಲ್ಲದೆ ಇತರರ ಹೆಸರುಗಳು, ಪದಗಳು, ಸಂಪನ್ಮೂಲಗಳು ಅಥವಾ ಹಕ್ಕುಗಳನ್ನು ಬಳಸಬೇಡಿ.

4. ಬ್ರಹ್ಮಚರ್ಯ – ಪವಿತ್ರತೆಯ ಅಭ್ಯಾಸ – ದೈವಿಕ ನಡವಳಿಕೆಯನ್ನು ಅಭ್ಯಾಸ ಮಾಡಿ, ಏಕೈಕನಾಗಿದ್ದಾಗ ಮತ್ತು ಮದುವೆಯಲ್ಲಿ ನಿಷ್ಠಾವಂತರಾಗಿ ಉಳಿದಿರುವ ಬ್ರಹ್ಮಾಂಡದ ಮೂಲಕ ಕಾಮವನ್ನು ನಿಯಂತ್ರಿಸುವುದು. ಮದುವೆಯ ಮುಂಚೆ, ಅಧ್ಯಯನದಲ್ಲಿ ಪ್ರಮುಖ ಶಕ್ತಿಯನ್ನು ಬಳಸಿ, ಮತ್ತು ಮದುವೆಯ ನಂತರ ಕುಟುಂಬ ಯಶಸ್ಸನ್ನು ಸೃಷ್ಟಿಸುವಲ್ಲಿ. ಚಿಂತನೆ, ಮಾತಿನಿಂದ ಅಥವಾ ಪತ್ರದಲ್ಲಿ ಅನ್ನೈತಿಕತೆಯಿಂದ ಪವಿತ್ರ ಶಕ್ತಿಯನ್ನು ವ್ಯರ್ಥ ಮಾಡಬೇಡಿ. ವೈರುದ್ಯ ಲಿಂಗದವರೊಂದಿಗೆ ಸಂಯಮದಿಂದಿರಿ. ಪವಿತ್ರ ಸಂಗಡ ಹೊಂದಿ. ಉಡುಗೆಯೊಂದಿಗಿರಿ ಮತ್ತು ಸಾಧಾರಣವಾಗಿ ಮಾತನಾಡಿ. ಅಶ್ಲೀಲತೆ, ಲೈಂಗಿಕ ಹಾಸ್ಯ ಮತ್ತು ಹಿಂಸೆಯನ್ನು ನಿಷೇಧಿಸಿ.

5. ಕ್ಷಮಾ (ತಾಳ್ಮೆ) – ತಾಳ್ಮೆ ಅಭ್ಯಸಿಸು, ಜನರೊಂದಿಗೆ ಅಸಹಿಷ್ಣುತೆಯನ್ನು ಮತ್ತು ಸಂದರ್ಭಗಳಲ್ಲಿ ಅಸಹನೆ ನಿಗ್ರಹಿಸುವುದು. ಸಮ್ಮತಿಸಿರಿ. ನಿಮಗೆ ಸರಿಹೊಂದಿಸದೆಯೇ ಇತರರು ತಮ್ಮ ಸ್ವಭಾವದ ಪ್ರಕಾರ ವರ್ತಿಸಲಿ. ಪ್ರಿಯವಾದವರಾಗಿ ಇರಿ, ನಿಮಗೆ ಸರಿಹೊಂದಿಸದೆಯೇ ಇತರರು ತಮ್ಮ ಸ್ವಭಾವದ ಪ್ರಕಾರ ವರ್ತಿಸಲಿ. ವಾದಿಸಬೇಡಿ, ಸಂಭಾಷಣೆಗಳನ್ನು ನಿಯಂತ್ರಿಸಬೇಡಿ ಅಥವಾ ಇತರರನ್ನು ಅಡ್ಡಿಪಡಿಸಬೇಡಿ. ಅತ್ಯಾತುರದಲ್ಲಿ ಇರಬೇಡ. ಮಕ್ಕಳು ಮತ್ತು ಹಿರಿಯರಲ್ಲಿ ತಾಳ್ಮೆಯಿಂದಿರಿ. ಚಿಂತೆಗಳನ್ನು

ಕಡಿಮೆ ಮಾಡಿ ಒತ್ತಡವನ್ನು ದೂರ ಮಾಡಿ. ಒಳ್ಳೆಯ ಸಮಯಗಳಲ್ಲಿ ಮತ್ತು ಕೆಟ್ಟದ್ದರಲ್ಲಿ ಸಮತೋಲನ ಕಾಪಾಡಿಕೊಳ್ಳಿ.

6. ಧ್ರಿತಿ – ಆತ್ಮ ಸಂಯಮ – ದೃಡತೆ – ಸಂಕಲ್ಪ – ಎದೆಗಾರಿಕೆ – ಆರೈಕೆಮಾಡುವ ದೃಡತೆಯಿರಲಿ, ಪರಿಶ್ರಮವಿಲ್ಲದಿರುವಿಕೆ, ಭಯ, ನಿರ್ದಾರವಿಲ್ಲದಿರುವಿಕೆ ಮತ್ತು ಪರಿವರ್ತನೆಯಿಂದ ಹೊರಬನ್ನಿ. ನಿಮ್ಮ ಗುರಿಗಳನ್ನು ಪ್ರಾರ್ಥನೆ, ಉದ್ದೇಶ, ಯೋಜನೆ, ಸ್ಥಿರತೆ ಮತ್ತು ಮುಂದುವರಿಸುವಿಕೆಯೊಂದಿಗೆ ಸಾಧಿಸಿ. ನಿಮ್ಮ ನಿರ್ದಾರದಲ್ಲಿ ದೃಡತೆ ಇರಲಿ. ಸೋಮಾರಿತನ ಮತ್ತು ವಿಳಂಬ ಪ್ರವೃತ್ತಿಯನ್ನು ತಪ್ಪಿಸಿ. ಸಾಮರ್ಥ್ಯ, ಧೈರ್ಯ ಮತ್ತು ಶ್ರಮಶೀಲತೆಯನ್ನು ಅಭಿವೃದ್ಧಿಪಡಿಸಿ. ಅಡಚಣೆಗಳಿಂದ ಹೊರಬನ್ನಿ. ಗೊಣಗಾಟ ಅಥವ ಆರೋಪ ಮಾಡಬೇಡಿ. ವೈರುದ್ಯತೆಯ ಅಥವಾ ವೈಫಲ್ಯದ ಭಯವು ಬದಲಾಗುತ್ತಿರುವ ಕಾರ್ಯತಂತ್ರಗಳಲ್ಲಿ ಪರಿಣಾಮ ಬೀರಬಾರದು.

7. ದಯಾ – ಸಹಾನುಭೂತಿ – ಎಲ್ಲಾ ಜೀವಿಗಳ ಕಡೆಗೆ ಸಹಾನುಭೂತಿಯನ್ನು ಅಭ್ಯಾಸ ಮಾಡಿ, ಕಟೋರತೆ, ಕ್ರೂರತೆ ಮತ್ತು ಸೂಕ್ಷ್ಮವಲ್ಲದ ಭಾವನೆಗಳನ್ನು ಜಯಿಸಿ. ಎಲ್ಲೆಡೆ ದೇವರನ್ನು ನೋಡಿ. ಜನರು, ಪ್ರಾಣಿಗಳು, ಸಸ್ಯಗಳು ಮತ್ತು ಭೂಮಿಗೆ ದಯೆತೋರು. ಕ್ಷಮೆಯಾಚಿಸಿ ಮತ್ತು ನಿಜವಾದ ಪಶ್ಚಾತ್ತಾಪವನ್ನು ತೋರಿಸುವವರಿಗೆ ಕ್ಷಮಿಸಿ. ಇತರರ ಅಗತ್ಯತೆಗಳು ಮತ್ತು ನೋವುಗಳಿಗೆ ಸಹಾನುಭೂತಿಯ ಅರೈಕೆಮಾಡಿ. ದುರ್ಬಲರು, ಬಡವರು, ವಯಸ್ಸಾದವರು ಅಥವಾ ನೋವಿನಿಂದ ಬಳಲುತ್ತಿರುವವರಿಗೆ ಸಹಾಯ ಮಾಡಿ. ಕುಟುಂಬ ದುರುಪಯೋಗ ಮತ್ತು ಇತರ ಕ್ರೌರ್ಯಗಳನ್ನು ವಿರೋಧಿಸಿ.

8. ಅರ್ಜ್ವ – ಪ್ರಾಮಾಣಿಕತೆ – ಪ್ರಾಮಾಣಿಕತೆ ಕಾಪಾಡಿಕೊಳ್ಳುವುದು, ವಂಚನೆ ಮತ್ತು ತಪ್ಪನ್ನು ಬಿಟ್ಟುಬಿಡುವುದು. ಕಷ್ಟ ಕಾಲದಲ್ಲಿ ಸಹ ಗೌರವಾನ್ವಿತವಾಗಿ ವರ್ತಿಸಿ. ನಿಮ್ಮ ರಾಷ್ಟ್ರದ ಕಾನೂನು ಮತ್ತು ಸ್ಥಳವನ್ನು

ಅನುಸರಿಸು. ನಿಮ್ಮ ತೆರಿಗೆಗಳನ್ನು ಪಾವತಿಸಿ. ವ್ಯವಹಾರದಲ್ಲಿ ನೇರವಾಗಿರಿ. ಪ್ರಾಮಾಣಿಕವಾಗಿ ದಿನ ಕೆಲಸ ಮಾಡಿ. ಲಂಚ ಕೊಡಬೇಡ ಅಥವಾ ಸ್ವೀಕರಿಸಬೇಡ. ವಂಚನೆ, ಮೋಸ, ಅಂತ್ಯವನ್ನು ಸಾದಿಸಲು ತಪ್ಪಿಸಿಕೊಳ್ಳುವುದು ಮಾಡಬೇಡ, ನಿಮ್ಮೊಂದಿಗೆ ನೀವು ಮುಗ್ದವಾಗಿರಿ. ಇತರರನ್ನು ದೂಷಿಸದೆಯೇ ನಿಮ್ಮ ತಪ್ಪುಗಳನ್ನು ಒಪ್ಪಿಕೊಳ್ಳಿ ಮತ್ತು ಎದುರಿಸಿ.

9. ಮಿತಾಹಾರ – ಮಧ್ಯಮ – ಮಿತವಾಗಿರಿ – ತಿನ್ನುವುದರಲ್ಲಿ ಮಿತವಾಗಿರಿ, ಮಾಂಸ, ಮೀನು, ಚಿಪ್ಪುಮೀನು, ಕೋಳಿ ಅಥವಾ ಮೊಟ್ಟೆಗಳನ್ನು ತುಂಬಾ ತಿನ್ನುವುದು ಅಥವ ಸೇವಿಸುವುದು. ತಾಜಾ, ಆರೋಗ್ಯಕರ ಸಸ್ಯಾಹಾರಿ ಆಹಾರವನ್ನು ಆನಂದಿಸಿ. ಕಡಿಮೆ ಪೌಷ್ಟಿಕತೆಯುಳ್ಳ ಆಹಾರವನ್ನು ತಪ್ಪಿಸಿ. ಮಿತವಾಗಿ ಕುಡಿಯಿರಿ. ನಿಯಮಿತ ಸಮಯದಲ್ಲಿ ತಿನ್ನಿರಿ ಹಸಿವಿನಿಂದ ಇದ್ದಾಗ, ಮಧ್ಯಮ ವೇಗದಲ್ಲಿ, ಊಟಗಳಿಗೆ ಮದ್ಯೆ ಬೇಡ, ತೊಂದರೆಗೊಳಗಾದ ವಾತಾವರಣದಲ್ಲಿ ಅಥವಾ ಅಸಮಾಧಾನಗೊಂಡಾಗ ಮಾತ್ರ ಬೇಡ. ಶ್ರೀಮಂತ ಅಥವಾ ಅಲಂಕಾರಿಕ ಶುಲ್ಕವನ್ನು ತಪ್ಪಿಸಲು, ಸರಳ ಆಹಾರವನ್ನು ಅನುಸರಿಸಿ.

10. ಶೌಚ – ಶುದ್ದತೆ – ಶುದ್ಧತೆಯ ನೈತಿಕತೆಯನ್ನು ಎತ್ತಿಹಿಡಿಯಿರಿ, ಅಶುದ್ಧತೆಯನ್ನು ಮನಸ್ಸಿನಲ್ಲಿ, ದೇಹದಲ್ಲಿ ಮತ್ತು ಭಾಷಣದಲ್ಲಿ ತಪ್ಪಿಸಿಕೊಳ್ಳುವುದು. ಸ್ವಚ್ಛ, ಆರೋಗ್ಯಕರ ದೇಹವನ್ನು ಕಾಪಾಡಿಕೊಳ್ಳಿ. ಶುದ್ಧ, ಸ್ಪಷ್ಟವಾದ ಮನೆ ಮತ್ತು ಕೆಲಸದ ಸ್ಥಳವನ್ನು ಇರಿಸಿ. ಸದ್ಗುಣವಾಗಿ ವರ್ತಿಸಿ. ಒಳ್ಳೆಯ ಸಂಗಡವನ್ನು ಇರಿಸಿ, ವ್ಯಭಿಚಾರ ಮಾಡುವವರೊಂದಿಗೆ, ಕಳ್ಳರು ಅಥವಾ ಇತರ ಅಶುದ್ಧ ಜನರೊಂದಿಗೆ ಸಂಪರ್ಕ ಮಾಡಬೇಡಿ. ಅಶ್ಲೀಲತೆ ಮತ್ತು ಹಿಂಸೆಯಿಂದ ದೂರವಿರಿ. ಕಠಿಣ, ಕೋಪಗೊಂಡ ಅಥವಾ ಅಸಭ್ಯ ಭಾಷೆಯನ್ನು ಬಳಸಬೇಡಿ. ಭಕ್ತಿಭರಿತವಾಗಿ ಪೂಜಿಸು. ದಿನಾ ಧ್ಯಾನ ಮಾಡಿ.

# ವೇದಗಳ ದಶ ನಿಯಮ – ಮಿತಿಗಳು – ಪಾಲನೆಗಳು

1. ಹ್ರಿ – ಪಶ್ಚಾತಾಪ:– ಸಾಧಾರಣವಾಗಿ ಮತ್ತು ದುಷ್ಕೃತ್ಯಗಳಿಗಾಗಿ ಅವಮಾನವನ್ನು ತೋರಿಸಿ ನೀವೇ ಪಶ್ಚಾತ್ತಾಪದ ಅಭಿವ್ಯಕ್ತಿಗೆ ಅವಕಾಶ ಮಾಡಿಕೊಡಿ,. ನಿಮ್ಮ ದೋಷಗಳನ್ನು ಗುರುತಿಸಿ, ತಪ್ಪೊಪ್ಪಿಕೊಳ್ಳಿ ಮತ್ತು ತಿದ್ದುಪಡಿ ಮಾಡಿಕೊಳ್ಳಿ. ನಿಮ್ಮ ಮಾತು ಅಥವಾ ಕಾರ್ಯಗಳಿಂದ ಹಾನಿಯುಂಟಾಗುವವರಿಗೆ ಹೃತ್ಪೂರ್ವಕವಾಗಿ ಕ್ಷಮೆಯಾಚಿಸಿ. ನಿದ್ರೆಗೆ ಮುನ್ನ ಎಲ್ಲ ವಿಚಾರಗಳನ್ನು ಪರಿಹರಿಸಿ. ನಿಮ್ಮ ದೋಷಗಳು ಮತ್ತು ಕೆಟ್ಟ ಹವ್ಯಾಸಗಳನ್ನು ಹುಡುಕಿ ಮತ್ತು ಸರಿಪಡಿಸಿ. ತೃಪ್ತಿಯನ್ನು ತರುವ ವಿಧಾನವಾಗಿ ತಿದ್ದುಪಡಿಯನ್ನು ಸ್ವಾಗತಿಸಿ. ಬಡಾಯಿ ಕೊಚ್ಚಿಕೊಳ್ಳಬೇಡಿ. ಅಹಂಕಾರ ಮತ್ತು ನಟನೆ ನಿಲ್ಲಿಸಿ.

2. ಸಂತೋಷ – ನೆಮ್ಮದಿ – ತೃಪ್ತಿದಾಯಕ – ಸಂತಸವನ್ನು ಪೋಷಿಸಿ, ಜೀವನದಲ್ಲಿ ಸಂತೋಷ ಮತ್ತು ಪ್ರಶಾಂತತೆ ಪಡೆಯಿರಿ. ಸಂತೋಷದಿಂದ, ಕಿರುನಗೆಯಿಂದ ಮತ್ತು ಇತರರನ್ನು ಮೇಲಕ್ಕೆತ್ತಿರಿ. ನಿಮ್ಮ ಆರೋಗ್ಯ, ನಿಮ್ಮ ಸ್ನೇಹಿತರು ಮತ್ತು ನಿಮ್ಮ ಸಂಬಂಧಿಕರಿಗೆ ನಿರಂತರವಾದ ಕೃತಜ್ಞತೆಯಿಂದ ಜೀವಿಸಿರಿ, ನೀವು ಹೊಂದಿಲ್ಲದಿರುವ ಬಗ್ಗೆ ದೂರು ನೀಡಬೇಡಿ. ಮನಸ್ಸು, ದೇಹ ಅಥವಾ ಭಾವನೆಗಳನ್ನು ಹೊರತುಪಡಿಸಿ ಶಾಶ್ವತವಾದವನ್ನು ಗುರುತಿಸಿ. ಆಧ್ಯಾತ್ಮಿಕ ಪ್ರಗತಿಗೆ ಜೀವನವು ಒಂದು ಅವಕಾಶ ಎಂದು ಪರ್ವತದ ನೋಟವನ್ನು ಇರಿಸಿ. ಇಂದಿನ ಶಾಶ್ವತತೆಯಲ್ಲಿ ಜೀವಿಸಿ.

3. ಧಾನ – ನೀಡುವುದು – ಪ್ರತಿಫಲದ ಚಿಂತನೆಯಿಲ್ಲದೆ ಉದಾರವಾಗಿ ನೀಡಿರಿ, ತಪ್ಪುಗಳಿಗೆ ಉದಾರವಾಗಿರಿ. ದೇವತೆಗಳು, ಆಶ್ರಮಗಳು ಮತ್ತು ಆಧ್ಯಾತ್ಮಿಕ ಸಂಸ್ಥೆಗಳಿಗೆ ನಿಮ್ಮ ಒಟ್ಟು ಆದಾಯದ ಹತ್ತನೇ ಭಾಗವನ್ನು (ದಶಾಮಂಶ) ದೇವರ ಹಣದಂತೆ ಅರ್ಪಿಸಿ. ಅರ್ಪಣೆಗಳೊಂದಿಗೆ ದೇವಸ್ಥಾನವನ್ನು ಸಂಪರ್ಕಿಸಿ. ಕೈಯಲ್ಲಿ ಉಡುಗೊರೆಗಳೊಂದಿಗೆ ಗುರುಗಳನ್ನು ಭೇಟಿ ಮಾಡಿ. ಧಾರ್ಮಿಕ ಸಾಹಿತ್ಯವನ್ನು ನೀಡಿ.

ಅಗತ್ಯವಿರುವವರಿಗೆ ಆಹಾರ ಉಣಬಡಿಸಿ ಮತ್ತು ಕೊಡಿ. ಮೆಚ್ಚುಗೆಯನ್ನು ಪಡೆಯದೆ ನಿಮ್ಮ ಸಮಯ ಮತ್ತು ಪ್ರತಿಭೆಯನ್ನು ದಯಪಾಲಿಸಿರಿ. ಅತಿಥಿಗಳನ್ನು ದೇವರಂತೆ ಪರಿಗಣಿಸಿ.

4. ಅಸ್ತಿಕ್ಯ – ನಂಬಿಕೆ – ಅಲುಗಿಸಲಾಗದ ನಂಬಿಕೆಯನ್ನು ಬೆಳೆಸಿಕೊಳ್ಳಿ. ದೇವ, ದೇವರು, ಗುರು ಮತ್ತು ಜ್ಞಾನೋದಯದ ನಿಮ್ಮ ಮಾರ್ಗದಲ್ಲಿ ದೃಢವಾಗಿ ನಂಬಿರಿ. ಪಾಂಡಿತ್ಯವುಳ್ಳವರ, ಗ್ರಂಥಗಳ ಮತ್ತು ಸಂಪ್ರದಾಯಗಳ ಮಾತುಗಳಲ್ಲಿ ವಿಶ್ವಾಸವಿಡಿ. ಪ್ರಾಮಾಣಿಕ ಭಕ್ತಿ ಮತ್ತು ಸಾಧನೆಯು ಸುಧಾರಿತ ನಂಬಿಕೆಯನ್ನು ಬೆಳೆಸಿಕೊಳ್ಳುವ ಅನುಭವಗಳನ್ನು ಪ್ರೇರೇಪಿಸುತ್ತದೆ. ನಿಮ್ಮ ಸಂತತಿಗೆ, ನಿಮ್ಮ ಸದ್ಗುರು ಜೊತೆ ನಿಷ್ಠರಾಗಿರಿ. ವಾದ ಮತ್ತು ಆರೋಪಗಳಿಂದ ನಿಮ್ಮ ನಂಬಿಕೆಯನ್ನು ಮುರಿಯಲು ಪ್ರಯತ್ನಿಸುವವರಿಗೆ ದೂರವಿಡಿ. ಅನುಮಾನ ಮತ್ತು ಹತಾಶೆಯನ್ನು ತಪ್ಪಿಸಿ.

5. ಈಶ್ವರ–ಪೂಜನ – ಆರಾಧನೆ–ಪೂಜಿಸುವುದು – ದೈನಂದಿನ ಪೂಜೆ ಮತ್ತು ಧ್ಯಾನ ಮೂಲಕ ಭಕ್ತಿ ಬೆಳೆಸಿಕೊಳ್ಳಿ. ದೇವರ ಮನೆಯಂತೆ ನಿಮ್ಮ ಮನೆಯ ಒಂದು ಕೊಠಡಿಯನ್ನು ಪಕ್ಕಕ್ಕೆ ಇರಿಸಿ. ಪ್ರತಿದಿನ ಹಣ್ಣು, ಹೂವುಗಳು ಅಥವಾ ಆಹಾರವನ್ನು ಒದಗಿಸಿ. ಸರಳ ಪೂಜೆಯನ್ನು ಮತ್ತು ಪಠಣಗಳನ್ನು ತಿಳಿಯಿರಿ. ಪ್ರತಿ ಪೂಜೆಯ ನಂತರ ಧ್ಯಾನ ಮಾಡಿ. ಮನೆ ತೊರೆಯುವ ಮುಂಚೆ ಮತ್ತು ನಂತರ ನಿಮ್ಮ ದೇವಾಲಯವನ್ನು ಭೇಟಿ ಮಾಡಿ. ದೇವ, ದೇವರು ಮತ್ತು ಗುರುವಿಗೆ ಆಂತರಿಕ ಮಾರ್ಗಗಳನ್ನು ಶುದ್ಧಗೊಳಿಸುವಂತೆ ಹೃತ್ಪೂರ್ವಕ ಭಕ್ತಿಯಲ್ಲಿ ಪೂಜೆ ಮಾಡಿಕೊಳ್ಳಿ. ಆದ್ದರಿಂದ ಅವರ ಕೃಪೆಯು ನಿಮ್ಮ ಕಡೆಗೆ ಹರಿಯುತ್ತದೆ ಮತ್ತು ಪ್ರೀತಿಪಾತ್ರರ ಕಡೆಗೆ ಹರಿಯುತ್ತದೆ.

6. ಸಿದ್ಧಾಂತ ಶ್ರಾವಣ – ಅಧ್ಯಾತ್ಮಿಕ ಬೋದನೆ ಕೇಳುವಿಕೆ – ಗ್ರಂಥಗಳನ್ನು ಆಶಾದಾಯಕವಾಗಿ ಕೇಳುವುದು, ಬೋಧನೆಗಳನ್ನು ಅಧ್ಯಯನ ಮಾಡಿ ಮತ್ತು ನಿಮ್ಮ ವಂಶಾವಳಿಯ ಜ್ಞಾನವನ್ನು ಕೇಳಿ. ಗುರುವನ್ನು ಆಯ್ಕೆಮಾಡಿ,

ಅವನ ಮಾರ್ಗವನ್ನು ಅನುಸರಿಸಿ ಮತ್ತು ಇತರ ಮಾರ್ಗಗಳನ್ನು ಅನ್ವೇಷಿಸುವ ಸಮಯ ವ್ಯರ್ಥ ಮಾಡಬೇಡಿ. ಓದುವ, ಅಧ್ಯಯನ ಮತ್ತು, ಎಲ್ಲಕ್ಕಿಂತ ಹೆಚ್ಚಾಗಿ, ಅನ್ವೇಷಕರ ಜ್ಞಾನದಿಂದ ಜ್ಞಾನವು ಹರಿಯುವ ಅವರ ವಾಚನಗೋಷ್ಠಿಗಳು ಮತ್ತು ಸಂಶೋಧನೆಗಳನ್ನು  ಕೇಳಿ. ಹಿಂಸೆಯನ್ನು ಬೋಧಿಸುವ ಮಾಧ್ಯಮಿಕ ಪಠ್ಯಗಳನ್ನು ತಪ್ಪಿಸಿ. ಬಹಿರಂಗ ಪವಿತ್ರ ಗ್ರಂಥಗಳು, ವೇದಗಳು ಮತ್ತು ಅಗಾಮಗಳನ್ನು ಅಧ್ಯಯನ ಮಾಡಿ.

7. ಮತಿ – ಸಂವೇದನೆ – ನಿಮ್ಮ ಸದ್ಗುರು ಮಾರ್ಗದರ್ಶನದಲ್ಲಿ ಆಧ್ಯಾತ್ಮಿಕ ಇಚ್ಛೆಯನ್ನು ಮತ್ತು ಬುದ್ಧಿಯನ್ನು ಅಭಿವೃದ್ಧಿಪಡಿಸಿ. ಒಳಗಿನ ಬೆಳಕು ಜಾಗೃತಗೊಳಿಸುವುದಕ್ಕೆ ದೇವರ ಜ್ಞಾನಕ್ಕಾಗಿ ಪ್ರಯತ್ನಿಸು. ಜೀವನ ಮತ್ತು ನಿಮ್ಮ ಬಗ್ಗೆ ಆಳವಾದ ತಿಳುವಳಿಕೆಯನ್ನು ಬೆಳೆಸಲು ಪ್ರತಿ ಅನುಭವದಲ್ಲಿ ಗುಪ್ತವಾದ ಪಾಠವನ್ನು ಅನ್ವೇಷಿಸಿ. ಧ್ಯಾನದ ಮೂಲಕ, ಸೂಕ್ಷ್ಮ ವಿಜ್ಞಾನಗಳು, ಒಳಗಿನ ಪ್ರಪಂಚಗಳು ಮತ್ತು ಅತೀಂದ್ರಿಯ ಪಠ್ಯಗಳನ್ನು ಅರ್ಥಮಾಡಿಕೊಳ್ಳುವ ಮೂಲಕ ಇನ್ನೂ ಒಳಗಿನ ಸಣ್ಣ ಧ್ವನಿಯನ್ನು ಕೇಳುವ ಮೂಲಕ ಅಂತರ್ದೃಷ್ಟಿಯನ್ನು ಬೆಳೆಸಿಕೊಳ್ಳಿ.

8. ವ್ರತ – ಪವಿತ್ರ ಪ್ರತಿಜ್ಞೆ – ಧಾರ್ಮಿಕ ಶಪಥಗಳು, ನಿಯಮಗಳು ಮತ್ತು ಆಚರಣೆಗಳನ್ನು ಅಳವಡಿಸಿಕೊಳ್ಳಿ ಮತ್ತು ಅವುಗಳನ್ನು ಪೂರೈಸುವಲ್ಲಿ ಎಂದಿಗೂ ಅಸಡ್ಡೆ ಮಾಡಬಾರದು. ಗೌರವವು ನಿಮ್ಮ ಆತ್ಮ, ನಿಮ್ಮ ಸಮುದಾಯ, ದೇವ, ದೇವರು ಮತ್ತು ಗುರುಗಳೊಂದಿಗೆ ಆಧ್ಯಾತ್ಮಿಕ ಒಪ್ಪಂದಗಳಂತೆ ಪ್ರತಿಜ್ಞೆ ಮಾಡುತ್ತದೆ. ಸಹಜ ಸ್ವಭಾವವನ್ನು ನಿಯಂತ್ರಿಸಲು ಪ್ರತಿಜ್ಞೆ ತೆಗೆದುಕೊಳ್ಳಿ. ಉಪವಾಸ ನಿಯತಕಾಲಿಕವಾಗಿ. ತೀರ್ಥಯಾತ್ರೆ ವಾರ್ಷಿಕವಾಗಿರಲಿ. ಮದುವೆ, ಸನ್ಯಾಸಿಧರ್ಮ, ವ್ಯಸನವಿಲ್ಲದಿರುವಿಕೆ, ದಶಾದಾನ, ವಂಶಾವಳಿಗೆ ನಿಷ್ಠೆ, ಸಸ್ಯಾಹಾರ ಅಥವಾ ದೂಮಪಾನರಹಿತತೆ ವಿಚಾರಗಳಲ್ಲಿ ನಿಮ್ಮ ಪ್ರತಿಜ್ಞೆಗಳನ್ನು ಕಟ್ಟುನಿಟ್ಟಾಗಿ ಎತ್ತಿಹಿಡಿಯಿರಿ.

9. ಜಪ – ಪಠಣ – ದೈನಂದಿನ ನಿಮ್ಮ ಪವಿತ್ರ ಮಂತ್ರವನ್ನು ಪಠಿಸಿ, ನಿಮ್ಮ ಗುರು ನೀಡಿದ ಪವಿತ್ರ ಧ್ವನಿ, ಪದ ಅಥವಾ ಪದಗುಚ್ಛವನ್ನು ಪಠಿಸಿ. ಮೊದಲಿಗೆ ಸ್ನಾನ ಮಾಡಿ, ಮನಸ್ಸನ್ನು ಸ್ತಬ್ಧಗೊಳಿಸಿ ಮತ್ತು ಜಪವನ್ನು ಸಮನ್ವಯಗೊಳಿಸಲು, ಶುದ್ಧೀಕರಿಸುವ ಮತ್ತು ಉನ್ನತಿಗೇರಿಸಲು ಸಂಪೂರ್ಣವಾಗಿ ಗಮನವನ್ನು ಕೊಡಿ. ನಿಮ್ಮ ಸೂಚನೆಗಳೆಡೆಗೆ ಗಮನ ಕೊಡಿ ಮತ್ತು ಶಿಫಾರಸು ಮಾಡಿದ ಪುನರಾವರ್ತನೆಗಳು ವಿಫಲಗೊಳ್ಳದೆ ಪಠಣೆ ಮಾಡಿ. ನಿಮ್ಮ ಹೆಚ್ಚಿನ ಸ್ವಭಾವವನ್ನು ಜಾಪವು ಪ್ರಬಲಗೊಳಿಸುವುದರಿಂದ ಕೋಪದಿಂದ ಮುಕ್ತರಾಗಿರಿ. ಜಪದಿಂದ ಭಾವನೆಗಳನ್ನು ನಿಗ್ರಹಿಸಿ ಮತ್ತು ಚಿಂತನೆಯ ನದಿಗಳನ್ನು ಸ್ತಬ್ಧಗೊಳಿಸಿ.

10. ತಪಸ್ – ಸಂಯಮ – ಸಂಯಮ, ಗಂಭೀರ ಶಿಸ್ತುಗಳು, ಪ್ರಾಯಶ್ಚಿತ್ತ ಮತ್ತು ತ್ಯಾಗ ಅಭ್ಯಾಸಮಾಡಿ. ಪೂಜೆ, ಧ್ಯಾನ ಮತ್ತು ತೀರ್ಥಯಾತ್ರೆಗಳಲ್ಲಿ ಬಾವೋದ್ವೇಗದಿಂದ ಇರಿ. 108 ಪ್ರಾರ್ಥನೆ ಅಥವಾ ಉಪವಾಸ ಮುಂತಾದ ಪ್ರಾಯಶ್ಚಿತ್ತ ಮೂಲಕ ದುಷ್ಪರಿಣಾಮಗಳಿಗಾಗಿ ರಾಜಿ ಮಾಡಿ. ಸ್ವಯಂ–ನಿರಾಕರಣೆ ಮಾಡಿ, ಸಲಹಬೇಕಾದ ಆಸ್ತಿ, ಹಣ ಅಥವಾ ಸಮಯವನ್ನು ಬಿಟ್ಟುಕೊಡುವುದು. ಸ್ವಯಂ ರೂಪಾಂತರಕ್ಕೆ ಒಳ ಬೆಳಕು ಹಚ್ಚುವ ಸಲುವಾಗಿ, ವಿಶೇಷ ಸಮಯಗಳಲ್ಲಿ, ಸದ್ಗುರು ಮಾರ್ಗದರ್ಶನದಲ್ಲಿ, ತೀವ್ರವಾದ ಸಂಯಮಗಳನ್ನು ಪೂರ್ಣಗೊಳಿಸುವುದು.

## ಋಗ್ವೇದದಲ್ಲಿ ಏಳು ಮರ್ಯಾದಾ ನೀತಿ ನಿಯಮಗಳ ಬಗ್ಗೆ ಉಲ್ಲೇಕವಿದೆ

10:05:06 – (ಹೆಚ್.ಪಿ. ವೆಂಕಟರಾವ್ ಋಗ್ವೇದ ಅನುವಾದದಿಂದ)

1. ಪಾನಂ – ಮದ್ಯಾದಿ ನಿಷಿದ್ದ ವಸ್ತುಗಳು
2. ಅಕ್ಷಾ – ಪಗಡೆ ಮುಂತಾದ ದ್ಯೂತಕೃತ್ಯ, ತದಂಗವಾದ ಮೋಸ.
3. ಸ್ತ್ರೀಯಾ– ಸ್ತ್ರೀ ವ್ಯಸನ, ತತ್ಪರಿಣಾಮಗಳು

4. ಮೃಗಯಾ – ಕಾಡಿನ ಜಂತುಗಳನ್ನು ಬೇಟೆಯಾಡಿ ಹಿಂಸಿಸುವುದು.
5. ದಂಡಃ – ಅನ್ಯಾಯವಾಗಿ ಇತರರನ್ನು ಶಿಕ್ಷಿಸುವುದು (ರಾಜದಂಡವಲ್ಲ)
6. ಪಾರುಷ್ಯಂ – ಇತರರ ಮನಃ ಕ್ಲೇಶವಾಗುವಂತೆ ಕ್ರೂರ ಭಾಷಣ ಮತ್ತು ವ್ಯವಹಾರ
7. ಅನ್ಯದೂಷಣಂ – ಇತರರನ್ನು ಅನ್ಯಾಯವಾಗಿ ದೂಷಿಸುವುದು

## ಭಗವದ್ಗೀತೆಯಲ್ಲಿ ಇಂದಿನ ಕಾನೂನು ಮಾರ್ಗದರ್ಶಿ ನಿಯಮಗಳು

1. ಅಧ್ಯಾಯ 6 (ನಿನ್ನ ಪರಿಶ್ರಮದ ಮನದಿಂದಲೇ ಉದ್ಧಾರವಾಗುತ್ತಿ)

6:5 ಉದ್ಧರೇತ್ ಆತ್ಮನಾ ಆತ್ಮಾನಮ್ ನ ಆತ್ಮಾನಮ್ ಅವಸಾದಯೇತ್ । ಆತ್ಮಾ ಏವ ಹಿ ಆತ್ಮನಃ ಬಂಧುಃ ಆತ್ಮಾ ಏವ ರಿಪುಃ ಆತ್ಮನಃ – ಅಂದರೆ ನಮ್ಮ ಅಧಃಪಾತಕ್ಕೂ ಕಾರಣ ಮನಸ್ಸು. ನಮ್ಮ ಉದ್ಧಾರಕ್ಕೆ ಕಾರಣ ಮನಸ್ಸು. ಆದ್ದರಿಂದ ಮನಸ್ಸಿನಿಂದ(ಆತ್ಮಾನಾ) ಜೀವದ(ಆತ್ಮಾನಂ) ಉದ್ಧಾರದ ದಾರಿಯನ್ನು ಹುಡುಕು. ಆ ಮನಸ್ಸನ್ನು ಎತ್ತರಕ್ಕೆ ಕಳಿಸು. ಎತ್ತರಕ್ಕೆ ಹೋದ ಮನಸ್ಸು ನಿನ್ನನ್ನು ಎತ್ತರಕ್ಕೆ ಕೊಂಡೊಯ್ಯುತ್ತದೆ. ಮನಸ್ಸಿನಿಂದ ನಿನ್ನ ಜೀವ ಸ್ವರೂಪವನ್ನು ಉದ್ಧಾರ ಮಾಡಿಕೊ. ಜೀವಕ್ಕೆ ಮನಸ್ಸೇ ಬಂಧು, ಮನಸ್ಸೇ ಶತ್ರು. ಆದ್ದರಿಂದ ಸಾಧನೆ ಮಾಡಬೇಕಾದರೆ ಮನಸ್ಸನ್ನು ಬಂಧುವಾಗಿ ಪರಿವರ್ತನೆ ಮಾಡಿಕೊ. ಮನಸ್ಸು ನಿನ್ನ ಶತ್ರುವಾಗಿ ನಿಂತರೆ ನಿನ್ನ ಜೀವಮಾನದಲ್ಲೇ ಉದ್ಧಾರವಿಲ್ಲ.

6:6 ಬಂಧುಃ ಆತ್ಮಾ ಆತ್ಮನಃ ತಸ್ಯ ಯೇನ ಆತ್ಮಾ ಏವ ಆತ್ಮನಾ ಜಿತಃ । ಅನಾತ್ಮನಃ ತು ಶತ್ರುತ್ವೇ ವರ್ತೇತ ಆತ್ಮಾ ಏವ ಶತ್ರುವತ್– ಯಾರು ಮನಸ್ಸನ್ನು ಗೆದ್ದಿದ್ದಾನೋ ಅವನಿಗೆ ಮನಸ್ಸು ಬಂಧುವಾಗುತ್ತದೆ ಆದರೆ ಹಾಗೆ ಮಾಡದವನಿಗೆ ಅವನ ಮನಸ್ಸೇ ಅತ್ಯಂತ ದೊಡ್ಡ ಶತ್ರುವಾಗುತ್ತದೆ.

6:26 ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ । ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥26॥ ನಮ್ಮ ಮನಸ್ಸು ಬಹಳ ಚಂಚಲ. ಈ ಕಾರಣದಿಂದ ಅದು ಎಲ್ಲೆಡೆ ಹರಿಯುತ್ತಿರುತ್ತದೆ. ಅದು ಎಲ್ಲಿ ಎಲ್ಲಿ ಜಾರುತ್ತದೋ ಅಲ್ಲಿ ಅಲ್ಲಿ ಭಗವಂತನೆಂಬ ಒಡ್ಡು ಹಾಕಿ ಅದನ್ನು ಭಗವಂತನಲ್ಲಿ ನೆಲೆನಿಲ್ಲುವಂತೆ ಮಾಡಬೇಕು. ಇದಕ್ಕೆ ನಿರಂತರ ಪ್ರಯತ್ನ ಅಗತ್ಯ.

6:35 ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ । ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥35॥ ನೀನು ಹೇಳುವುದರಲ್ಲಿ ಯಾವ ಸಂಶಯವೂ ಇಲ್ಲ. ಮನಸ್ಸನ್ನು ತಡೆ ಹಿಡಿಯುವುದು ಸುಲಭದ ಕೆಲಸವಲ್ಲ, ಆದರೆ ಅಭ್ಯಾಸ ಮತ್ತು ವೈರಾಗ್ಯದಿಂದ ಇದನ್ನು ಕ್ರಮೇಣವಾಗಿ ಸಾಧಿಸಬಹುದು.

2. ಅಧ್ಯಾಯ 2 ಶ್ಲೋಕ 47 (ಕರ್ತವ್ಯ ಮಾಡು ಫಲಕ್ಕೆ ಚಿಂತಿಸಬೇಡ)

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾ ಚನ ।
ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋ,,ಸ್ತ್ವಕರ್ಮಣಿ ॥
ನಿನಗೆ ವಿಹಿತ ಕರ್ತವ್ಯಗಳನ್ನು ಮಾಡುವುದಕ್ಕಷ್ಟೇ ಅಧಿಕಾರ, ಅದರ ಫಲಕ್ಕಿಲ್ಲ. ಕರ್ಮ ಫಲಕ್ಕೆ ನೀನೇ ಕಾರಣಕರ್ತನೆಂದುಕೊಂಡು ಕರ್ಮ ಮಾಡಬೇಡ. ಹಾಗೆಯೇ ಕರ್ತವ್ಯ ಮಾಡುವ ಆಸಕ್ತಿಯೂ ಇರಲಿ.

3. ಅಧ್ಯಾಯ 2 ಶ್ಲೋಕ 70 (ಆಸೆಯೆಂಬ ಕಾಮನೆಗಳಿಂದ ದೂರವಿರಿ)

ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ । ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥

ಸದಾ ನದಿಗಳು ಪ್ರವೇಶಿಸಿ ನೀರು ತುಂಬಿದರೂ ಹೇಗೆ ಸಮುದ್ರವು ಶಾಂತವಾಗಿರುವುದೋ ಹಾಗೆಯೇ ಯಾವಾಗಲೂ ಹರಿದು ಬರುವ ಆಸೆಗಳು ಪ್ರವೇಶಿಸಿದರೂ ಸ್ಥಿರ ಮನಸ್ಕನಾದವನು ಮಾತ್ರವೇ ಶಾಂತಿಯನ್ನು ಸಾಧಿಸಬಲ್ಲ. ಇಂತಹ ಆಸೆಗಳನ್ನು ತೀರಿಸಿಕೊಳ್ಳಲು ಶ್ರಮಿಸುವವನಿಗೆ ಶಾಂತಿ ದೊರೆಯಲಾರದು

4. ಅಧ್ಯಾಯ 4 ಶ್ಲೋಕ 42 (ಜ್ಞಾನವೆಂಬ ಯೋಗದಲ್ಲಿ ನೆಲಸಿ)

ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾ,,ತ್ಮನಃ ।
ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥

ಆದ್ದರಿಂದ ಅಜ್ಞಾನದಿಂದ ನಿನ್ನ ಹೃದಯದಲ್ಲಿ ಉದ್ಭವವಾಗಿರುವ ಸಂದೇಹಗಳನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸು. ಭರತ ಕುಲದವನೇ ಹೋರಾಡಲು ಎದ್ದೇಳು ಯೋಗದಲ್ಲಿ ನೆಲಸು.

5. ಅಧ್ಯಾಯ 4 ಶ್ಲೋಕ 39 (ನಂಬಿಕೆಯಿಂದ ಜ್ಞಾನವು – ಶಾಂತಿಯು)

ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥

ನಿಯಂತ್ರಿತ ಇಂದ್ರಿಯಗಳಿರುವ ಶ್ರದ್ಧಾವಂತನು ದಿವ್ಯ ಜ್ಞಾನದಲ್ಲೇ ಆಸಕ್ತನಾದವನು ಅದನ್ನು ಹೊಂದಿ ಶೀಘ್ರವಾಗಿ ಅಧ್ಯಾತ್ಮಿಕ ಶಾಂತಿಯನ್ನು ಪಡೆಯುವನು

6. ಅಧ್ಯಾಯ 4 ಶ್ಲೋಕ 40 (ಸಂಶಯಕ್ಕೊಳಗಾದವನಿಗೆ ಸುಖವಿಲ್ಲ)

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।
ನಾಯಂ ಲೋಕೋ,,ಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥

ಮೂಢರು, ಶ್ರದ್ಧೆ ಇಲ್ಲದವರು ಮತ್ತು ಧರ್ಮಗ್ರಂಥಗಳಲ್ಲಿ ಸಂಶಯಪಡುವವರು ಪತನ ಹೊಂದುವರು. ಸಂದೇಹವಿರುವವರಿಗೆ ಈ ಲೋಕದಲ್ಲಿಯೂ ಸುಖವಿಲ್ಲ, ಮುಂದಿನ ಲೋಕದಲ್ಲಿಯೂ ಇಲ್ಲ

7. ಅಧ್ಯಾಯ 18 ಶ್ಲೋಕ 47 (ಸ್ವಭಾವಕ್ಕೆ–ಸ್ವಧರ್ಮಕ್ಕೆ ಕರ್ತವ್ಯಗಳಿರಲಿ)

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥

ತನ್ನ ವೃತ್ತಿಧರ್ಮದಲ್ಲಿ ಪರಿಪೂರ್ಣ ಯಶಸ್ಸನ್ನು ಕಾಣದಿದ್ದರೂ, ಮತ್ತೊಬರ ವೃತ್ತಿಧರ್ಮವನ್ನು ಆಚರಿಸುವುದಕ್ಕಿಂತ ಉತ್ತಮವಾದದ್ದು. ತನ್ನ ಸ್ವಭಾವಕ್ಕೆ ಅನುಗುಣವಾದ ಕರ್ಮಗಳನ್ನು ಮಾಡುತ್ತಾ ಯಾವ ದೋಷ–ಪಾಪಗಳನ್ನೂ ಹೊಂದುವುದಿಲ್ಲ

8. ಅಧ್ಯಾಯ 6 ಶ್ಲೋಕ 40 – (ಒಳ್ಳೆಯದನ್ನು ಮಾಡುವವನಿಗೆ ಕೆಟ್ಟದ್ದಾಗದು)

ಭಗವಾನುವಾಚ ।
ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।
ನಹಿ ಕಲ್ಯಾಣಕೃತ್ ಕಶ್ಚಿದ್ ದುರ್ಗತಿಂ ತಾತ ಗಚ್ಛತಿ

ಭಗವಂತ ಹೇಳಿದನು: ಪಾರ್ಥ, ಅವನ ಸಾಧನೆ ವ್ಯರ್ಥವಲ್ಲ, ಇಹದಲ್ಲಿ ಮತ್ತು ಪರದಲ್ಲಿ. ಅಪ್ಪಾ, ಒಳಿತನ್ನು ಮಾಡುವವನು ಎಂದೂ ಕೇಡನ್ನು ಪಡೆಯುವುದಿಲ್ಲ.

9. ಅಧ್ಯಾಯ 2 ಶ್ಲೋಕ 57 (ಒಳ್ಳೆಯದೂ ಕೆಟ್ಟದ್ದು ಸಮವಾಗಿ ಸ್ವೀಕರಿಸು)

ಯಃ ಸರ್ವತ್ರಾನಭಿಸ್ನೇಹಸ್ತತ್ತತ್ ಪ್ರಾಪ್ಯ ಶುಭಾಶುಭಮ್ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ

ಆಯಾ ಒಳಿತು-ಕೆಡುಕುಗಳು ಬಂದೊದಗಿದಾಗ ಎಲ್ಲೂ ಅತಿಯಾಗಿ ಅಂಟಿಕೊಳ್ಳುವುದಿಲ್ಲ. ಒಳಿತಿನ ಬಗೆಗೆ ಮೆಚ್ಚೂ ಇಲ್ಲ. ಕೆಡುಕಿನ ಬಗ್ಗೆ ರೊಚ್ಚೂ ಇಲ್ಲ. ಇಂತವನ ಅರಿವು ಗಟ್ಟಿಗೊಂಡಿರುತ್ತದೆ.

10. ಅಧ್ಯಾಯ 5 ಶ್ಲೋಕ 16-17 (ಜ್ಞಾನದಿಂದ ಶುದ್ದನಾಗು ಬೆಳಕು ಚೆಲ್ಲು)

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವತ್ ಜ್ಞಾನಂ ಪ್ರಕಾಶಯತಿ ತತ್ಪರಂ ॥
ಯಾರ ಅಜ್ಞಾನವು ಜ್ಞಾನದಿಂದ ನಾಶವಾಗುತ್ತದೋ, ಅವನ ಜ್ಞಾನವು ಸೂರ್ಯನಂತೆ ಪರತತ್ತ್ವವನ್ನು ಪ್ರಕಾಶಿಸುತ್ತದೆ
ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥
ಬುದ್ಧಿ, ಮನಸ್ಸು, ಶ್ರದ್ಧೆ ಮತ್ತು ಆಶ್ರಯವನ್ನು ಪರಮೋನ್ನತದಲ್ಲಿಯೇ ಹೊಂದಿದವರ ಸಂಶಯಗಳು ಜ್ಞಾನದಿಂದ ಶುದ್ಧವಾಗಿ ಮೋಕ್ಷದೆಡೆ ಹೋಗುವರು

11. ಅಧ್ಯಾಯ 10 ಶ್ಲೋಕ 20 (ಎಲ್ಲಾ ಜೀವಿಗಳಲ್ಲಿ ನೆಲಸಿರುವ ಪರಮಾತ್ಮ)

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥
ಗುಡಾಕೇಶ! ನಾನು ಎಲ್ಲಾ ಜೀವಿಗಳ ಹೃದಯದಲ್ಲಿ ನೆಲೆಸಿರುವ ಪರಮಾತ್ಮನು. ನಾನು ಜೀವಿಗಳೆಲ್ಲದರ ಮೂಲನೂ, ಮಧ್ಯವೂ ಮತ್ತು ಅಂತ್ಯವೂ ಆಗಿದ್ದೇನೆ

12. ಅಧ್ಯಾಯ 2 ಶ್ಲೋಕ 62,63 (ಕ್ರೋದ ಮೂಲ ಆಸೆಗಳಿಂದ ಮನುಜನ ನಾಷ)

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋ,,ಭಿಜಾಯತೇ ॥
ಮನುಷ್ಯನು ಇಂದ್ರಿಯ ವಿಷಯಗಳನ್ನು ಕುರಿತು ಚಿಂತಿಸಿದರೆ ಅದರಲ್ಲಿ ಆಸಕ್ತಿಯು ಬೆಳೆಯುತ್ತದೆ, ಆಸಕ್ತಿಯಿಂದ ಆಸೆಯು ವರ್ಧಿಸುತ್ತದೆ. ಆಸೆಯಿಂದ ಕೋಪವು ವ್ಯಕ್ತವಾಗುವುದು
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥
ಕೋಪದಿಂದ ಭ್ರಮೆಯುಂಟಾಗುವುದು, ಭ್ರಮೆಯಿಂದ ನೆನಪಿನ ಶಕ್ತಿ ಕಳೆದು ಹೋಗುವುದು. ಈ ಮರೆವಿನಿಂದ ಬುದ್ಧಿ ನಾಶವಾಗುವುದು. ಬುದ್ಧಿನಾಶವಾದವನು ಪತನ ಹೊಂದುವನು

13. ಅಧ್ಯಾಯ 16 ಶ್ಲೋಕ 21 (ಕಾಮ,ಕ್ರೋದ, ಲೋಭವನ್ನು ತೊರೆ)

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥
ಆತ್ಮದ ಅಧೋಗತಿಗೆ ಕಾರಣವಾದ, ನರಕಕ್ಕೆ ಕೊಂಡೊಯ್ಯುವ ಮೂರು ದ್ವಾರಗಳಿವೆ – ಕಾಮ, ಕ್ರೋಧ ಮತ್ತು ಲೋಭ (ದುರಾಸೆ). ಆದ್ದರಿಂದ ಈ ಮೂರನ್ನೂ ತ್ಯಜಿಸಬೇಕು

14. ಅಧ್ಯಾಯ 5 ಶ್ಲೋಕ 18, 19, 20 (ಎಲ್ಲವನ್ನೂ ಸಾಮನತೆಯಿಂದ ಕಾಣು)

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ

ಹೊಂದಿರುತ್ತಾನೆ. ಅಗತ್ಯದ ಸಂದರ್ಭದಲ್ಲಿ ಅಥವಾ ಆಸ್ತಿಯ ಪ್ರಯೋಜನಕ್ಕಾಗಿ ಮಾತ್ರ ಇದನ್ನು ಸರಿಯಾಗಿ ಬಳಸಬಹುದಾಗಿದೆ. ಜಂಟಿ ಹಿಂದೂ ಕುಟುಂಬದ ವ್ಯವಸ್ಥಾಪಕ ಜಂಟಿ ಕುಟುಂಬದ ಆಸ್ತಿಯನ್ನು ಮಾರಾಟ ಮಾಡುವಲ್ಲಿ, ಖರೀದಿದಾರನು ಮಾರಾಟ ಅಥವಾ ಅಡಮಾನದ ಅಗತ್ಯತೆಗೆ ವಿಚಾರಣೆ ಮಾಡಲು ಬಾಧ್ಯನಾಗುತ್ತಾನೆ ಮತ್ತು ಖರೀದಿದಾರನು ವಾಸ್ತವವಾಗಿ ಕಾನೂನುಬದ್ಧ ಅವಶ್ಯಕತೆಯಿದೆಯೆಂದು ಸಾಬೀತುಪಡಿಸಲು ಅಥವಾ ಸರಿಯಾದ ಮತ್ತು ಅಂತಹ ಅವಶ್ಯಕತೆಯ ಅಸ್ತಿತ್ವದ ಬಗ್ಗೆ ಸುದೀರ್ಘ ವಿಚಾರಣೆ ಮತ್ತು ಅಂತಹ ಅವಶ್ಯಕತೆಯ ಅಸ್ತಿತ್ವದಲ್ಲಿದೆಯೆಂದು ತೃಪ್ತಿಪಡಿಸಿಕೊಳ್ಳಲು ಎಲ್ಲವನ್ನೂ ಮಾಡಿದೆ ಎಂದು ಸಾಬೀತು ಪಡಿಸಬೇಕಿರುತ್ತದೆ.

3. ವ್ಯವಸ್ಥಾಪಕನಿಗಾಗಿ ಅಥವಾ ಅವರ ವಿರುದ್ಧದ ಮೊಕದ್ದಮೆಯನ್ನು ಕುಟುಂಬವನ್ನು ಪ್ರತಿನಿಧಿಸುವಂತೆ ಅವನಾಗೆ ಅಥವಾ ಅವನ ವಿರುದ್ಧ ಮಾಡಲಾಗುತ್ತದೆ ಎಂದು ಪರಿಗಣಿಸಲಾಗುತ್ತದೆ, ಪ್ರಕರಣದ ಸಂದರ್ಭಗಳಲ್ಲಿ ಅವನು ಕುಟುಂಬದ ವ್ಯವಸ್ಥಾಪಕನೆಂದು ಮತ್ತು ದಾವೆಯಲ್ಲಿ ಒಳಗೊಂಡಿರುವ ಆಸ್ತಿ ಕುಟುಂಬದ ಆಸ್ತಿ ಎಂದು ತೋರಿಸುತ್ತದೆ. ವ್ಯವಸ್ಥಾಪಕನು ಪ್ರತಿವಾದಿಯಾಗಿದ್ದಾಗ ಅಲ್ಲಿ ವ್ಯವಸ್ಥಾಪಕನಾಗಿ ಮೊಕದ್ದಮೆ ಹೂಡಿರುತ್ತಾರೆ ಎಂದು ತಿಳಿಯಲಾಗುವುದಿಲ್ಲ.

4. ಮೈನರ್ ಪುತ್ರರ ವಿಷಯದಲ್ಲಿ, ಅವಶ್ಯವಾಗಿ ತಂದೆ ಒಟ್ಟು ಕುಟುಂಬದ ವ್ಯವಸ್ಥಾಪಕನಾಗಿದ್ದಾನೆ. (ಪ್ಯಾರಾ (ಕಂಡಿಕೆ) 254 ಮುಲ್ಲಾ ಹಿಂದು ಲಾ 19 ನೇ ಆವೃತ್ತಿ)

5. ಬಾಂಬೆ, ಮದ್ರಾಸ್, ಮಧ್ಯಪ್ರದೇಶ ಮತ್ತು ಇನ್ನಿತರ ರಾಜ್ಯಗಳಲ್ಲಿ ಅನ್ವಯಿಸಲಾದ ಮಿತಾಕ್ಷರಾ ಕಾನೂನಿನ ಪ್ರಕಾರ, ಕೋಪಾರ್ಸೆನರ್ ತನ್ನ ಅವಿಭಜಿತ ಆಸಕ್ತಿಯನ್ನು ಸಂಪೂರ್ಣ ಜಂಟಿ ಕುಟುಂಬದ ಆಸ್ತಿಯಲ್ಲಿ

ಪರಬಾರೆ ಮಾಡಬಹುದು ಅಥವ ಜಂಟಿ ಕೌಟುಂಬಿಕ ಆಸ್ತಿಗಳಲ್ಲಿ ಆತನ ಭಾಗವಾಗಿ ರೂಪುಗೊಳ್ಳುವ ಅವಿಭಜಿತ ನಿರ್ದಿಷ್ಟ ಆಸ್ತಿಯಲ್ಲಿ ಆಸಕ್ತಿಯನ್ನು ಪರಬಾರೆ ಮಾಡಬಹುದು. ಹೇಗಾದರೂ, ಅವರು ಪರಬಾರೆ ಮಾಡಲು ಯಾವುದೇ ಹಕ್ಕನ್ನು ಹೊಂದಿಲ್ಲ, ಅವರ ಆಸಕ್ತಿ, ಕೋಪಾರ್ಸೆನರಿಗೆ ಸೇರಿದ ಯಾವುದೇ ನಿರ್ದಿಷ್ಟ ಆಸ್ತಿ, ವಿಭಜನೆಗೆ ಮುಂಚಿತವಾಗಿ, ಯಾವುದೇ ರೀತಿಯ ಸ್ವತ್ತುಗಳನ್ನು ತನ್ನದೇ ಆದಂತೆ ಹೇಳಿಕೊಳ್ಳಲಾಗುವುದಿಲ್ಲ; ಅವರು ಪರಬಾರೆ ಮಾಡಿದರೆ ಅಂತಹ ಪರಭಾರೆ ತಮ್ಮ ಸ್ವಂತ ಆಸಕ್ತಿಯಲ್ಲಿನ ಹದ್ದಿಗೆ ಮಾತ್ರ ಪರಭಾರೆಯ ಆಸ್ತಿಯಲ್ಲಿ ಮಾನ್ಯವಾಗುತ್ತದೆ. (ಪ್ಯಾರಾ (ಕಂಡಿಕೆ) 259 ಮುಲ್ಲಾ ಹಿಂದು ಲಾ 19 ನೇ ಆವೃತ್ತಿ)

6. ಕೋಪಾರ್ಸೆನರ್ನ ಅವಿಭಜಿತ ಆಸಕ್ತಿಯಲ್ಲಿ ಖರೀದಿದಾರನು ಸ್ವಾಧೀನ ಪಡೆದಿದ್ದರೆ, ಮಾರಾಟಗಾರನನ್ನು ಸೇರಿಸಿ ದಾವೆ ಹೂಡಿ ಜಂಟಿ ಕುಟುಂಬದ ಪ್ರಯೋಜನಕ್ಕಾಗಿ ಒಟ್ಟು ಆಸ್ತಿಯನ್ನು ಮರು ಸ್ವಾಧೀನಪಡಿಸಿಕೊಳ್ಳಲು ಮಾರಾಟಮಾಡದ ಕೋಪಾರ್ಸೆನರ್ಗಳು ಅರ್ಹರಾಗಿರುತ್ತಾರೆ. ಅವನಿಗೆ ಮಾರಾಟವಾಗಿರುವ ನಿರ್ದಿಷ್ಟ ಆಸ್ತಿಯಲ್ಲಿ ಅಥವಾ ಜಂಟಿ ಕುಟುಂಬ ಆಸ್ತಿಗಳಿಗೆ ಸಾಮಾನ್ಯವಾಗಿ ಅಂತಹ ಮೊಕದ್ದಮೆಯಲ್ಲಿ ಕೊಳ್ಳುವವರಿಗೆ ವಿಭಾಗದ ಆದೇಶವನ್ನು ನೀಡಲಾಗುವುದಿಲ್ಲ; ಅವನು ತನ್ನ ಮಾರಾಟಗಾರನ ಆಸಕ್ತಿಯನ್ನು ಸಿದ್ದಿಸಿಕೊಳ್ಳಲು ಬಯಸಿದರೆ, ಒಂದು ಸಾಮಾನ್ಯ ವಿಭಾಗಕ್ಕಾಗಿ ತನ್ನದೇ ಆದ ಒಂದು ದಾವೆಯನ್ನು ತರಬೇಕು. ಹಾಗಾಗಿ ದಾವೆಯನ್ನು ಮಾರಾಟಮಾಡದ ಕೋಪಾರ್ಸೆನರ್ಗಳಿಂದ ಸ್ವಾಧೀನಕ್ಕಾಗಿ ತಂದಾಗ, ಸಂಪೂರ್ಣ ಆಸ್ತಿಯ ಸ್ವಾಧೀನವನ್ನು ಖರೀದಿದಾರರು ವಾದಿಗಳಿಗೆ ನೀಡುವಂತೆ ನಿರ್ದೇಶಿಸುವ ಆದೇಶವನ್ನು ರವಾನಿಸಿ ಮತ್ತು ಆಸ್ತಿಯಲ್ಲಿ ತನ್ನ ಮಾರಾಟಗಾರರ ಅವಿಭಜಿತ ಆಸಕ್ತಿಯನ್ನು ಅವನು ಪಡೆದಿದ್ದಾನೆ ಎಂಬ ಆದೇಶವು ಖರೀದಿದಾರರಿಗೆ ಘೋಷಣೆಗೆ ಅರ್ಹವಾಗಿದೆ ಮತ್ತು

ವಿಭಜನೆಯಿಂದ ದೃಢೀಕರಿಸಲ್ಪಟ್ಟ ಆಸಕ್ತಿಯನ್ನು ಹೊಂದಲು ಅವರು ಕ್ರಮಗಳನ್ನು ತೆಗೆದುಕೊಳ್ಳುವ ಅಧಿಕಾರ ಹೊಂದಿದ್ದಾರೆ ಎಂದು ಘೋಷಿಸುತ್ತದೆ. ಆದಾಗ್ಯೂ, ಖರೀದಿದಾರನನ್ನು ರಕ್ಷಿಸಲು ಮತ್ತಷ್ಟು ನಿರ್ದೇಶನಗಳನ್ನು ಸೇರಿಸಿಕೊಳ್ಳಬೇಕು, ತೀರ್ಪುಗಳನ್ನು ಅಮುಲ್ಜಾರಿ ಮಾಡುವುದು, ಖರೀದಿದಾರನು ವಾದಿಗಳಿಗೆ ಸ್ವಾಧೀನಕೊಡಲು ನಿರ್ದೇಶಿಸುವಾಗ, ನಿರ್ದಿಷ್ಟ ಅವಧಿಯವರೆಗೆ ತಡೆಹಿಡಿದು, ಆ ಅವಧಿಯ ಅಂತ್ಯದ ಮೊದಲು, ಖರೀದಿದಾರನು  ವಾದಿಗಳ ವಿರುದ್ಧ ಸಾಮಾನ್ಯ ವಿಭಾಗಕ್ಕೆ ಒಂದು ಮೊಕದ್ದಮೆ ಹೂಡಿ, ನಂತರ ಆ ಮೊಕದ್ದಮೆಯ ವಿಲೇವಾರಿ ತನಕ ಈ ವಾಸ್ತವ್ಯವು ಮುಂದುವರೆಸಬೇಕು, ಆದರೆ ಅಂತಹ ಯಾವುದೇ ಮೊಕದ್ದಮೆ ಆ ಅವಧಿಯೊಳಗೆ ತರಲಾಗದಿದ್ದರೆ, ನಂತರ ಅಮುಲ್ಜಾರಿ ತಡೆ ಹಿಡಿದಿರುವುದು ರದ್ದುಗೊಳ್ಳುತ್ತದೆ.

7. ಜಂಟಿ ಹಿಂದೂ ಕುಟುಂಬದ ವ್ಯವಸ್ಥಾಪಕರು ಮೌಲ್ಯಕ್ಕೆ, ಜಂಟಿ ಕುಟುಂಬದ ಆಸ್ತಿಯನ್ನು ಪರಭಾರೆ ಮಾಡುವ ಶಕ್ತಿಯನ್ನು ಹೊಂದಿದ್ದಾರೆ, ಆದ್ದರಿಂದ ಆಸ್ತಿಯಲ್ಲಿ ವಯಸ್ಕರು ಮತ್ತು ಮೈನರ್ ಕೋಪಾರ್ಸೆನರ್‌ಗಳ ಹಿತಾಸಕ್ತಿಗಳನ್ನು ಭಾದಿಸಲು ಕಾನೂನುಬದ್ಧ ಅವಶ್ಯಕತೆಯಿಂದ ಕೂಡಿರಬೇಕಿರುತ್ತದೆ. (ಪ್ಯಾರಾ (ಕಂಡಿಕೆ) 243 ಮುಲ್ಲಾ ಹಿಂದು ಲಾ 19 ನೇ ಆವೃತ್ತಿ)

**ಕಾನೂನು ಅವಶ್ಯಕತೆ, ರಿವರ್ಶನರ್ಸ್ (ಹಿಂತಿರುಗಿಸುವವರ) ಹಕ್ಕು**

ಹಿಂದೂ ವಿಧವೆ ಯಾವುದೇ ಆಸ್ತಿಯನ್ನು ಉತ್ತರಾಧಿಕರಿಸುವುದು ಅಥವಾ ಆನುವಂಶಿಕವಾಗಿ ಪಡೆಯುವುದು ಅವಳ ಪತಿಯಿಂದ ಅಥವಾ ಸತ್ತ ಮಗನ ವಿಧವೆಯಾಗಿ 1956 ರ ಕಾಯ್ದೆ ಜಾರಿಯಲ್ಲಿ ಬರುವ ಮೊದಲು ಹಿಂದು ಮಹಿಳಾ ಹಕ್ಕುಗಳ ಆಸ್ತಿ ಕಾಯಿದೆ, 1937 ಅಡಿಯಲ್ಲಿ ಹಿಂದು ಮಹಿಳಾ ಎಸ್ಟೇಟ್ ಎಂದು ಸೀಮಿತ ಆಸಕ್ತಿ ಹೊಂದಿದ್ದಳು. ಆದಾಗ್ಯೂ, ಆಕೆ ಆನಂದಿಸಲು ಅಥವಾ ನಾಶಪಡಿಸುವ ಅಥವಾ ಆಸ್ತಿ

ವಿಲೇವಾರಿ ಮಾಡುವ ಅಥವ ಪರಭಾರೆ ಮಾಡುವ ಹಕ್ಕನ್ನು ಹೊಂದಿದ್ದಳು[1] ಆದರೆ ಅಂತಹ ವಿನಾಶ ಅಥವಾ ಪರಭಾರೆ ಕಾನೂನು ಅವಶ್ಯಕತೆಯಿಂದ ಅಥವಾ ಧಾರ್ಮಿಕ ಅಥವಾ ಧಾರ್ಮಿಕ ಉದ್ದೇಶಗಳಿಗಾಗಿ ಅಥವಾ ಗಂಡನ ಆಧ್ಯಾತ್ಮಿಕ ಕಲ್ಯಾಣಕ್ಕಾಗಿ ಪ್ರಭಾವಿತವಾಗಿರಬೇಕು. ಪರಭಾರೆಯಿಂದ ಹರಿಯುವ ಅವಶ್ಯಕ ಪರಿಣಾಮಗಳು ಕಾನೂನಿನ ಅವಶ್ಯಕತೆಗೆ ಪರಭಾರೆಯಾಗುವುದು ಆಸ್ತಿ ವಶದಲ್ಲಿರುವ ವರ್ಗಾಯಿತರಲ್ಲಿ ಅಥವಾ ಪರಭಾರೆಪಡೆದವರಲ್ಲಿ, ಹಿಂತಿರುಗಿಸುವವರು (ರಿವರ್ಷನರ್ಸ್) ಅದರ ಸಿಂಧುತ್ವವನ್ನು ಆಕ್ರಮಿಸದಂತೆ ತಡೆಹಿಡಿಯಲಾಗಿದೆ. ಇಂತಹ ಆಸ್ತಿಗಳನ್ನು ಕೆಲವು ಸಂದರ್ಭಗಳ ಹೊರತುಪಡಿಸಿ, ನಿರ್ದಿಷ್ಟ ಉದ್ದೇಶಕ್ಕಾಗಿ, ಹಿಡಿತದಲ್ಲಿರುವವ ಅಥವ ಸೀಮಿತ ಮಾಲೀಕ ಹಿಂದೂ ಕಾನೂನಿನ ಅಡಿಯಲ್ಲಿ ಪರಭಾರೆ ಮಾಡಲು ಬರುವುದಿಲ್ಲ. –> 'ಸೀಮಿತ ಮಾಲೀಕ' ಎಂಬ ಪದವಿನ್ಯಾಸ ಸಾಮಾನ್ಯ ರೀತಿಯಲ್ಲಿ ಅರ್ಥಮಾಡಿಕೊಳ್ಳಬಾರದು ಇದು ಹಿಂದು ಕಾನೂನಿನಲ್ಲಿ ವ್ಯಾಖ್ಯಾನಿಸಿರುವ ಮತ್ತು ಅರ್ಥ ಮಾಡಿಕೊಂಡಿರುವ ರೀತಿಯಲ್ಲಿ ಮಾತ್ರ ಅರ್ಥೈಸಬೇಕು. ಪದ ಸಾಮಾನ್ಯವಾಗಿ ಅರ್ಥ, ವ್ಯಕ್ತಿಯ ಸಂಪೂರ್ಣ ಹಕ್ಕಿನ ಪೂರ್ಣ ಮಾಲೀಕರಿಗೆ ವಿರುದ್ಧವಾಗಿ ನಿರ್ಬಂಧಿತ ಹಕ್ಕುಗಳು. ಆಸ್ತಿಗೆ ಸಂಬಂದಿಸಿದಂತೆ, ಸಂಪೂರ್ಣ ಅಥವಾ ಪರಿಪೂರ್ಣ ಅಥವಾ ಪೂರ್ಣ ಮಾಲೀಕತ್ವವು ಹಲವಾರು ಘಟಕಗಳನ್ನು ಒಳಗೊಂಡಿದೆ ಅದುವೆಂದರೆ, ವಾಸ್ತವಿಕ ಅಥವಾ ರಚನಾತ್ಮಕ ಸ್ವಾಧೀನದ ಹಕ್ಕನ್ನು, ಆನಂದಿಸಲು ಇರುವ ಶಕ್ತಿ, ಅಂದರೆ, ಅದನ್ನು ನಾಶಮಾಡುವುದಕ್ಕೂ ಸಹ ವಿಸ್ತಾರ ಮಾಡಬಹುದಾದ ಬಳಕೆಯ ವಿಧಾನವನ್ನು ನಿರ್ಧರಿಸಿ ವಿನಿಯೋಗಿಸಲು, ವರ್ಗಾವಣೆ ಮಾಡಲು, ಪರಭಾರೆ ಮಾಡಲು ಅಥವಾ ಇತ್ಯರ್ಥ ಮಾಡಲು ಇನ್ನಿತರೆ. ಯಾವುದೇ ನಿರ್ಬಂಧ ಅಥವಾ ಈ

---

[1] ಕಲಾವತಿಬಾಯ್ ವಿ. ಸೌರ್ಯಾಬಾಯ್ – ಎ.ಐ.ಆರ್ 1991 ಎಸ್.ಸಿ 1581

ಹಕ್ಕುಗಳ ಆಚರಣೆ ಮಿತಿಯನ್ನು ಸೀಮಿತಗೊಳಿಸುವುದು ಸೀಮಿತ ಅಥವ ಅಗತ್ಯ ಅರ್ಹತೆ ಪಡೆದ ಮಾಲೀಕತ್ವವಾಗುತ್ತದೆ. ಉದಾಹರಣೆಗೆ ಆಸ್ತಿಯ ಅನುಭವದ ಮೇಲೆ ಅಥವಾ ಅದರ ಪರಭಾರೆ ಮೇಲೆ ನಿರ್ಬಂಧ. ಅಂತಹ ನಿರ್ಬಂಧ ಅಥವಾ ಪರಿಮಿತಿ ಕಾನೂನಿನ ಕಾರ್ಯಾಚರಣೆ ಅಥವಾ ದಾಖಲೆಯಿಂದ ಅಥವ ಉಪಕರಣದಿಂದ ಉಂಟಾಗಬಹುದು. ಹಿಂದೂಗಳಲ್ಲಿ ಸ್ತ್ರೀ ಹಿಂದೂಗಳ ಕಾನೂನಿನ ಸೀಮಿತ ಮಾಲೀಕತ್ವ ಕಾನೂನು ವಿಷಯವಾಗಿ ಹುಟ್ಟಿಕೊಂಡಿತು. ಹಿಂದು ವಿಧವೆ, ವಿವಿಧ ಶಾಲೆಗಳ ಪ್ರಕಾರ, ಬನಾರಸ್, ಬಂಗಾಳ ಅಥವಾ ಮಿಥಿಲಾ ಮತ್ತು ಬಾಂಬೆ ಪುರುಷರು ಅಥವಾ ಮಹಿಳಾ ಆಸ್ತಿಯಲ್ಲಿನ ಉತ್ತರಾಧಿಕಾರಿಯಾಗಿ ಸೀಮಿತ ಮಾಲೀಕರಾಗಿ ಮತ್ತು ಸೀಮಿತ ಆಸ್ತಿಯನ್ನು ಮಾತ್ರ ಹೊಂದುತ್ತಾರೆ. –> 1956 ರ ಮೊದಲು, ಹಿಂದೂ ವಿಧವೆ ಮಾಡಿದ ಯಾವುದೇ ಪರಭಾರೆ ಅಥವಾ ವಿಧವೆಯ ಎಸ್ಟೇಟ್ ಅನ್ನು ಕಾನೂನು ಅಥವಾ ನಿಷೇಧದಿಂದ ನಿಷೇಧಿಸಲಾಗಿದೆ ಅಥವ ಅನುಮತಿ ಮಿತಿಗಳನ್ನು ಮೀರಿರುವ ಪರಭಾರೆ ಹೊಂದಿದವರಲ್ಲಿ ಹೆಚ್ಚೆಂದರೆ ಪ್ರಕೃತಿಯಲ್ಲಿ ಅನಿಶ್ಚಿತವಾಗಿರುವ ತಾತ್ಕಾಲಿಕ ಮತ್ತು ಸಂಭಾವ್ಯ ಮಾಲೀಕತ್ವ ಸೃಷ್ಟಿಸಬಹುದಾದ ಪಾತ್ರದಲ್ಲಿ ದುರ್ಬಲವಾಗಿರುತ್ತದೆ, ಯಾವುದೇ ಹಿಂತಿರುಗಿಸುವವರ (ರಿವರ್ಶನರ್ಸ್) ಆಸಕ್ತಿಯನ್ನು ಮುಸುಕಾಗಿಸುವ ಪ್ರಯತ್ನವಿದ್ದರೆ ಪ್ರಶ್ನಿಸಬಹುದಾಗಿರುತ್ತದೆ. ಪರಭಾರೆ ಹೊಂದಿದವರಲ್ಲಿ ಸ್ವಾಧೀನವು ವಿಶ್ವದ ವಿರುದ್ಧ ಉತ್ತಮವಾಗಿರಬಹುದು ಮತ್ತು ಆಕೆಯ ಆಸ್ತಿಯಲ್ಲಿನ ಅವಳ ಹಕ್ಕು ವಿಧವೆ ಪ್ರಶ್ನಿಸುವಂತಿಲ್ಲ, ಆದರೆ ಅವಳ ಆಸಕ್ತಿಯು ಹಿಂತಿರುಗಿಸುವವವರ ಸ್ವಾಧೀನದಲ್ಲಿ ಮುಂದುವರೆಯುವುದು, ಗರಿಷ್ಠ, ಅವಳ ದಾನಿಯ ಅಥವಾ ವರ್ಗಾಯಿತನ ಜೀವಿತಾವಧಿ ವರೆಗೆ. ಇದು ಆಸಕ್ತಿಯ ಅವಧಿಯಂತೆ, ಸಡಿಲವಾಗಿ, ಜೀವನ ಆಸಕ್ತಿಯನ್ನು ಹೊಂದಿತ್ತು ಅಮಾನ್ಯ ವರ್ಗಾವಣೆಯ ಅಡಿಯಲ್ಲಿ ರಚಿಸಲಾಗಿರುವುದು

ದಾನ ಪಡೆದವನ ಅಥವ ವರ್ಗಾವಣೆ ಪಡೆದವನ ಸಾವಿನ ಮೇಲೆ ಕೊನೆಗೊಂಡಿಲ್ಲ, ದಾನಿ ಅಥವ ವರ್ಗಾವಣೆ ಮಾಡಿದವನ ಸಾವಿನ ಮೇಲೆ ಅವಲಂಬಿತ. ಅಂತಹ ವರ್ಗಾವಣೆ ತನ್ನ ವಿಧವೆಯ ಹಕ್ಕುಗಳನ್ನು ಹೊರತೆಗೆದಿರುವುದಿಲ್ಲ ಮತ್ತು ಆಕೆಯು ಕಲಂ 14 ರಲ್ಲಿ ಯಾವುದೇ ಹಕ್ಕು ಪಡೆದುಕೊಂಡಿಲ್ಲ, ಅದು ಪ್ರಶ್ನಿಸುವಂತದ್ದಾಗಿದ್ದು ಮತ್ತು ನಿರರ್ಥಕ ಅಲ್ಲ, ಹಿಂತಿರುಗಿಸುವ ಮೂಲಕ ತಪ್ಪಿಸಬಹುದು, ಸರ್ಕಾರ ಸೇರಿದಂತೆ ವಾರಸ್ಸು ಇಲ್ಲದಂತೆ ತೆಗೆದುಕೊಳ್ಳುವುದು; ಆದರೆ ವಿಧವೆಗೆ ಅದು ಭಾದಿಸುತ್ತದೆ. –> ಈ ಕೇಸಿನಲ್ಲಿ ಮಹಿಳಾ ವಿಧವೆ ಮಹಿಳಾ ಹಿಂತಿರುಗಿಸುವವರಿಗೆ (ರಿವರ್ಶನರ್ಸ್) ವರ್ಗಾವಣೆ ಮಾಡಿದ್ದರೂ ಕೂಡ ಕಾಯ್ದೆ ಕಲಂ 14 ರಲ್ಲಿ ವರ್ಗಾವಣೆ ಪಡೆದ ಮಹಿಳೆ ಸಂಪೂರ್ಣ ಮಾಲೀಕಳು ಆಗುವುದಿಲ್ಲ ಎಂದು ತೀರ್ಪನ್ನಿತ್ತಿದೆ. ಅದು ವ್ಯತಿರಿಕ್ತ ಸ್ವಾಧೀನವಾಗುವುದಕ್ಕೂ ಸಾದ್ಯವಿಲ್ಲ ಎನ್ನುತ್ತದೆ. ಇತರೆ ಹಿಂತಿರುಗಿಸುವವರಿಗೆ (ರಿವರ್ಶನರ್ಸ್) ಹಿಂದು ವಿದವೆ ಸತ್ತ ನಂತರ ಪೂರ್ತಿ ಆಸ್ತಿಯನ್ನು ವಾಪಸ್ ಪಡೆಯುವ ಹಕ್ಕು ಪ್ರಾರಂಬವಾಗಿ ಅದು ಕಾನೂನು ಅವಶ್ಯಕತೆಗೆ ಮಾಡಿದ್ದಲ್ಲ ಎಂದು ಪ್ರತಿಪಾದಿಸಿ ನಿರರ್ಥಕ ಗೊಳಿಸುವ ಹಕ್ಕು ಇರುತ್ತದೆ. ಅವರು ಘೋಷಣಾ ಕೇಸನ್ನು ಹಾಕುವ ಅವಶ್ಯಕತೆ ಇಲ್ಲ."

## ಬೇನಾಮಿ ಆಸ್ತಿಗಳು

ಇನ್ನೊಬ್ಬರ ಹೆಸರಿನಲ್ಲಿ ಖರೀದಿಸಿರುವ ಆಸ್ತಿಗಳು, ಅದು ಸತ್ಯದಲ್ಲಿ ಮಾಲೀಕತ್ವ ಬೇರೆಯವರದ್ದು ಎಂದು ಪ್ರತಿಪಾದಿಸಲು 19–05–1988 ರಿಂದ ಸಾದ್ಯವಿಲ್ಲ, ಕಲಂ 3 ಮತ್ತು 4 ಬೇನಾಮಿ ವ್ಯವಹಾರಗಳ ಪ್ರತಿಬಂದಕ ಕಾಯ್ದೆ 1988 ರಲ್ಲಿ ಹೇಳಿರುವಂತೆ ಮತ್ತು ಇದು 01–11–2016 ರಿಂದ ತಿದ್ದುಪಡಿಯಾಗಿರುವಂತೆ, 01–11–2016ಕ್ಕೆ ಮುಂಚೆ ಕೋಪಾರ್ಸನರ್ ಹೆಸರಿನಲ್ಲಿ, ನಂಬಿಕಸ್ಥ ಹಣಕಾಸು ಸಾಮರ್ಥ್ಯವನ್ನು

ಇನ್ನೊಬ್ಬರ ನಂಬಿಕೆಯಲ್ಲಿ ಹೊಂದಿರುವವರ ಹೆಸರಿನಲ್ಲಿ, ಹೆಂಡತಿ ಹೆಸರಿನಲ್ಲಿ, ಮದುವೆಯಾಗದ ಮಗಳ ಹೆಸರಿನಲ್ಲಿ, ಬೇರೆಯವರ ಒಳತಿಗಾಗಿ ತನ್ನ ಹೆಸರಿನಲ್ಲಿ ಟ್ರಸ್ಟಿಯಾಗಿ ಆಸ್ತಿ ಹೊಂದುವುದು, ಅನುಮತಿ ಇತ್ತು ಆದರೆ 01–11–2016 ರಿಂದ ಅಂತಹ ಅಥವ ಇನ್ನಿತರೆ ಯಾವುದೇ ರೀತಿಯಲ್ಲಿ ಬೇನಾಮಿ ಆಸ್ತಿಗಳನ್ನು ಮಾಡುವುದು ಅಪರಾಧ ಅಂತ ತಿದ್ದುಪಡಿಯಾಗಿದೆ, ಆದರೆ ಕಲಂ 2 (9) ರಲ್ಲಿ ಹೊಸ ನಾಲ್ಕು ವಿವರಗಳನ್ನು ನೀಡಿ ಅಂತಹ ಆಸ್ತಿಗಳು ಬೇನಾಮಿಯಾಗುವುದಿಲ್ಲ ಎಂದಿದೆ. (1) ಆಸಿಯನ್ನು ಹೊಂದಿರುವ ಕಾರ್ತಾ, ಅಥವಾ ಹಿಂದೂ ಅವಿಭಜಿತ ಕುಟುಂಬದ ಸದಸ್ಯ, ಸಂದರ್ಭದಲ್ಲಿ, ಮತ್ತು ಆಸ್ತಿಯನ್ನು ತನ್ನ ಪ್ರಯೋಜನಕ್ಕಾಗಿ ಅಥವಾ ಕುಟುಂಬದ ಇತರ ಸದಸ್ಯರ ಪ್ರಯೋಜನಕ್ಕಾಗಿ ಹೊಂದಲಾಗುತ್ತದೆ ಮತ್ತು ಅಂತಹ ಆಸ್ತಿಯ ಪರಿಗಣನೆಯನ್ನು ಹಿಂದೂ ಅವಿಭಜಿತ ಕುಟುಂಬದ ಪ್ರಸಿದ್ಧ ಮೂಲಗಳಿಂದ ಒದಗಿಸಲಾಗುತ್ತದೆ ಅಥವಾ ಪಾವತಿಸಲಾಗಿದೆ; (2) ಆಸಿಯನ್ನು ಹೊಂದಿರುವ ಒಬ್ಬ ವ್ಯಕ್ತಿಯು ಆರ್ಥಿಕ ವಿಶ್ವಾಸಾರ್ಹ ಸಾಮರ್ಥ್ಯದಲ್ಲಿ ಒಬ್ಬ ವ್ಯಕ್ತಿಯ ಪ್ರಯೋಜನಕ್ಕಾಗಿ ನಿಷ್ಠಾವಂತ ಸಾಮರ್ಥ್ಯದಲ್ಲಿ ನಿಂತಿರುವ ವ್ಯಕ್ತಿಯು ಮತ್ತು ಇವರು ಸೇರಿ, ಒಬ್ಬ ಟ್ರಸ್ಟಿ, ಕಾರ್ಯನಿರ್ವಾಹಕ, ಪಾಲುದಾರ, ಕಂಪೆನಿಯ ನಿರ್ದೇಶಕ, ಒಂದು ಡಿಪಾಸಿಟರಿ ಅಥವಾ ಪಾಲ್ಗೊಂಡಿರುವ ಒಬ್ಬ ಡಿಪಾಸಿಟರಿಯ ಏಜೆಂಟ್ ಆಗಿ ಡಿಪಾಸಿಟರಿ ಆಕ್ಟ್, 1996 (1996 ರ 22) ಕೆಳಗೆ ಮತ್ತು ಈ ಉದ್ದೇಶಕ್ಕಾಗಿ ಕೇಂದ್ರ ಸರ್ಕಾರವು ಸೂಚಿಸಬಹುದಾದ ಯಾವುದೇ ವ್ಯಕ್ತಿಯನ್ನು; (3) ಆಸಿಯನ್ನು ಹೊಂದಿರುವ ಒಬ್ಬ ವ್ಯಕ್ತಿಯೊಬ್ಬನಾಗಿ ತನ್ನ ಸಂಗಾತಿಯ ಹೆಸರಿನಲ್ಲಿ ಅಥವಾ ಅಂತಹ ವ್ಯಕ್ತಿಯ ಯಾವುದೇ ಮಗುವಿನ ಹೆಸರಿನಲ್ಲಿ ಮತ್ತು ಅಂತಹ ವ್ಯಕ್ತಿಗಳಿಗೆ ಪರಿಗಣಿಸಿ ಆಸ್ತಿಯನ್ನು ವ್ಯಕ್ತಿಯ ಮೂಲ ಮೂಲಗಳಿಂದ ಒದಗಿಸಲಾಗಿದೆ ಅಥವಾ ಪಾವತಿಸಲಾಗಿದೆ; (4) ತನ್ನ ಸಹೋದರ ಅಥವಾ ಸಹೋದರಿ ಅಥವಾ ಪಾರಂಪರ್ಯವಾದ

ಪೂರ್ವಜರು ಅಥವಾ ಸಂತತಿಯವ (ಲೀನಿಯಲ್ ಅಸೆಂಡೆಂಟ್ ಆರ್ ಡಿಸೆಂಡೆಂಟ್) ಆಸಿಯನ್ನು ಹೊಂದಿರುವ ಯಾವುದೇ ವ್ಯಕ್ತಿ ಮತ್ತು ಯಾವುದೇ ದಸ್ತಾವೇಜುಗಳಲ್ಲಿ ಜಂಟಿ–ಮಾಲೀಕರಾಗಿ ಕಾಣಿಸಿಕೊಳ್ಳುವ ವ್ಯಕ್ತಿಯ ಹೆಸರು ಅವರ ಸಹೋದರ ಅಥವಾ ಸಹೋದರಿ ಅಥವಾ ಪಾರಂಪರ್ಯವಾದ ಪೂರ್ವಜರು ಅಥವಾ ಸಂತತಿಯವ ಹೆಸರಿನಲ್ಲಿರುವ ಯಾವುದೇ ವ್ಯಕ್ತಿಯು ಮತ್ತು ಅಂತಹ ಆಸ್ತಿಯ ಪರಿಗಣನೆಯು ವ್ಯಕ್ತಿಯ ತಿಳಿದಿರುವ ಮೂಲಗಳಿಂದ ಒದಗಿಸಲಾಗಿದೆ ಅಥವಾ ಪಾವತಿಸಲಾಗಿದೆ;

ಹಾಗಾಗಿ ಇನ್ನೊಬ್ಬರ ಹೆಸರಿನಲ್ಲಿರುವುದು ಈ ಮೇಲ್ಕಂಡಂತೆ ಆರ್ಜಿಸಿದ್ದು ಎಂದು ತೋರದ ಹೊರತು, ಅದನ್ನು ಬೇರೆಯವರ ಹೆಸರಿನಲ್ಲಿ ಖರೀದಿಸಿರುವುದನ್ನು ಬೇನಾಮಿಯಾಗಿ ಆರ್ಜಿಸಿದೆ ಎಂದು ವಿಭಾಗ ಕೋರಿ ದಾವೆ ಸಲ್ಲಿಸಿ ಸಫಲರಾಗಲು ಬರುವುದಿಲ್ಲ. ಈ ಕಾಯ್ದೆಯಲ್ಲಿನ ವಿಶೇಷವೆಂದರೆ ಕಲಂ 2(24) ರಲ್ಲಿ ಒಬ್ಬ ವ್ಯಕ್ತಿ ಎಂದರೆ ಹಿಂದು ಅವಿಭಕ್ತ ಕುಟುಂಬ ಎಂದು ಸೇರಿಸಲಾಗಿದ್ದು. ಹಿಂದು ಅವಿಭಕ್ತ ಕುಟುಂಬವು ಸದಸ್ಯನಲ್ಲದವನ ಹೆಸರಿನಲ್ಲಿ ಬೇನಾಮಿ ಆಸ್ತಿ ಖರೀದಿಸಲು ಬರುವುದಿಲ್ಲ. ಮೊದಲಿಗೆ ಸಹೊದರ ಅಥವ ಸಹೋದರಿ ಹೆಸರಿನಲ್ಲಿ ಬೇನಾಮಿ ಆಸ್ತಿ ಅರ್ಜಿಸಿದ್ದರೆ ಅದನ್ನು ದಾವೆ ಹೂಡಲು ಬರುತ್ತಿರಲಿಲ್ಲ. ಆದರೆ ಈಗ ಅದನ್ನು ಬೇನಾಮಿ ಆಸ್ತಿಯಿಂದ ಹೊರಗಿಡಲಾಗಿದೆ. ಅಗ್ರಿಮೆಂಟ್ ಹಾಕಿಕೊಂಡು ಸರಿಯಾದ ಸ್ಟಾಂಪ್ ಶುಲ್ಕವನ್ನು ಕಟ್ಟಿ ನೊಂದಾಯಿತ ಕ್ರಯಕರಾರಿನ ಮೇಲೆ ಸ್ವಾಧೀನಕ್ಕೆ ಹೋಗಿರುವುದನ್ನು ಬೇನಾಮಿ ವ್ಯವಹಾರ ಅಂತ ತೀರ್ಮಾನಿಸಲು ಬರುವುದಿಲ್ಲ ಎಂದು ಕಲಂ 2(9) (ಡಿ) ವಿವರಣೆಯಲ್ಲಿ ಇದೆ, ಹಾಗಾಗಿ ನೊಂದಾವಣಿಯಾಗದ ಸ್ಟಾಂಪ್ ಶುಲ್ಕ ಕಟ್ಟದ ಕಲಂ 53ಎ ಸ್ವತ್ತು ವರ್ಗಾವಣೆ ಕಾಯ್ದೆ ಅಡಿಯ ವ್ಯವಹಾರವು ಬೇನಾಮಿ ವ್ಯವಹಾರ ಅಂತ 01–11–2016 ರಿಂದ ಪರಿಗಣಿಸಲಾಗುತ್ತದೆ. ಈ ಕಾಯ್ದೆಯ ಮೂಲ ಸ್ವರೂಪವನ್ನು ಒಮ್ಮೆ

ನೋಡಿ, 05–09–1988 ರಿಂದ ಬೇನಾಮಿ ವ್ಯವಹಾರವನ್ನು ಮಾಡುವುದು ನಿರ್ಬಂದಿಸಿ ಅದನ್ನು ಅಪರಾಧ ಅಂತ ಘೋಷಿಸಲಾಗಿತ್ತು ಅದರಲ್ಲಿ ಕೆಲವು ವ್ಯವಹಾರಗಳನ್ನು ಬೇನಾಮಿ ವ್ಯವಹಾರಗಳು ಎಂದು ಪರಿಗಣಿಸಲಾಗಿರಲಿಲ್ಲ. ಕೋಪಾರ್ಸನರ್ ಹೆಸರಿನಲ್ಲಿ, ನಂಬಿಕಸ್ಥ ಹಣಕಾಸು ಸಾಮರ್ಥ್ಯವನ್ನು ಇನ್ನೊಬ್ಬರ ನಂಬಿಕೆಯಲ್ಲಿ ಹೊಂದಿರುವವರ ಹೆಸರಿನಲ್ಲಿ, ಹೆಂಡತಿ ಹೆಸರಿನಲ್ಲಿ, ಮದುವೆಯಾಗದ ಮಗಳ ಹೆಸರಿನಲ್ಲಿ, ಬೇರೆಯವರ ಒಳತಿಗಾಗಿ ತನ್ನ ಹೆಸರಿನಲ್ಲಿ ಟ್ರಸ್ಟಿಯಾಗಿ ಆಸ್ತಿ ಹೊಂದುವುದು, ಅನುಮತಿ ಇತ್ತು. ಆದರೆ 01–11–2016 ರಿಂದ ಬದಲಾಗಿ ಈ ಅನುಮತಿ ಇದ್ದವರ ವಿವರಣೆಯಲ್ಲಿ ಬದಲಾವಣೆ ತರಲಾಯಿತು. ಆದರೆ 05–09–1988 ರಿಂದ ಬೇನಾಮಿ ವ್ಯವಹಾರವನ್ನು ಮಾಡುವುದು ನಿರ್ಬಂದಿಸಿ ಅಪರಾಧ ಮಾಡಿರುವುದು ಅಳಿಸಿಹಾಕಿಲ್ಲ. 01–11–2016 ರ ಮೇಲೆ ಬೇನಾಮಿ ಆಸ್ತಿಯನ್ನು ಮಾಡುವುದು ಪ್ರತ್ಯೇಕ ಅಪರಾಧವಾಗಿ ಗುರುತಿಸಲ್ಪಟ್ಟಿದೆ. ಈಗಾಗಲೇ ಇದೇ ಕಾಯ್ದೆಯನ್ನು ಜಾರಿ ಮಾಡಲು ಹಾಲಿ ಇರುವ ಕೇಸುಗಳಿಗೆ ಕಾನೂನು ಅನ್ವಯಿಸುವುದೆ ಎಂಬ ವಿಚಾರಕ್ಕೆ 19–05–1988 ರ ನಂತರ ಕೇಸು ಹಾಕಲು ಬರುವುದಿಲ್ಲ, ಅದಕ್ಕೆ ಮುಂಚೆ ಹಾಕಿರುವ ಕೇಸುಗಳು ಮುಂದುವರಿಯುತ್ತವೆ ಎಂದಿದೆ. ಹಾಗೆಯೇ ಈಗ ತಿದ್ದುಪಡಿಯಾದ ಅಂಶಗಳು 01–11–2016 ರ ನಂತರ ಹಾಕಿರುವ ಕೇಸುಗಳಿಗೆ ಅನ್ವಯಿಸುತ್ತದೆ ಎಂಬುದನ್ನು ಮಾನ್ಯ ಸುಪ್ರೀಮ್ ಕೋರ್ಟ್[1] ತೀರ್ಪಿನ ಸಿದ್ದಾಂತದಂತೆ ವ್ಯಾಖ್ಯಾನಿಸಬಹುದು.

2016 ರಲ್ಲಿ ಬೇನಾಮಿ ಕಾಯ್ದೆ ತಿದ್ದುಪಡಿ ಆಗುವುದಕ್ಕೆ ಮುಂಚೆ ಸುಪ್ರೀಮ್ ಕೋರ್ಟ್ ತೀರ್ಪು[2] ಈ ಬಗ್ಗೆ ಆಗಿದೆ ಅದನ್ನು ಬೇನಾಮಿ ವ್ಯವಹಾರಗಳ ಬಗ್ಗೆ ತಿಳಿದುಕೊಳ್ಳಲು ಮತ್ತು ಕಲಂ 2(9) ಅರ್ಥೈಸಲು

---

[1] ರಾಜಗೋಪಾಲ ರೆಡ್ಡಿ ವಿ. ಪದ್ಮಿನಿ ಚಂದ್ರಶೇಖರನ್ – 1995 (2) ಎಸ್.ಸಿ.ಸಿ 630

[2] ಓಂಪ್ರಕಾಶ್ ಶರ್ಮ ವಿ. ರಾಜೇಂದ್ರಪ್ರಸಾದ್ – 2015 (15) ಎಸ್.ಸಿ.ಸಿ 556

ಮಾತ್ರ ಅವಲೋಕಿಸೋಣ. "ಹೆಂಡತಿಯ ಹೆಸರಿನಲ್ಲಿ ಪತಿ ಆಸ್ತಿಯ ಖರೀದಿಯನ್ನು ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಪ್ರಚಲಿತದಲ್ಲಿರುವ ಬೇನಾಮಿ ಖರೀದಿಯ ಒಂದು ವಿಶಿಷ್ಟ ಲಕ್ಷಣವಾಗಿದೆ. ಹಿಂದೂ ಉತ್ತರಾಧಿಕಾರ ಕಾಯಿದೆ ಮತ್ತು ಕಾಲಕಾಲಕ್ಕೆ ತಿದ್ದುಪಡಿ ಮಾಡುವ ತನಕ ಹಿಂದೂ ಮಹಿಳೆಯರ ಸ್ಥಾನಮಾನದ ಆಧಾರದ ಮೇಲೆ ಇಂತಹ ಅಭ್ಯಾಸವು ಪ್ರಚಲಿತವಾಗಿದೆ. ಹಿಂದೂ ಮಹಿಳಾ ಹಕ್ಕುಗಳ ಆಸ್ತಿ ಕಾಯಿದೆ, 1937 ರ ಅಡಿಯಲ್ಲಿ ಮೃತ ಪತಿನ ಎಸ್ಟೇಟ್ಗೆ ಹಿಂದು ವಿಧವೆಗೆ ಸೀಮಿತ ಹಕ್ಕನ್ನು ಹೊಂದಿರುವ ಪರಿಸ್ಥಿತಿಯಲ್ಲಿ, ಹೆಂಡತಿಯ ಹೆಸರಿನಲ್ಲಿ ಪತಿಯಿಂದ ಸ್ಥಿರ ಆಸ್ತಿಯನ್ನು ಖರೀದಿಸುವುದು ಅದರೊಂದಿಗೆ ಹೆಂಡತಿಗೆ ಗಂಡನ ಮರಣದ ಸಂದರ್ಭದಲ್ಲಿ ಸುರಕ್ಷಿತ ಜೀವನವು ಒದಗಿಸಲು ಭಾರತೀಯ ಜೀವನದಲ್ಲಿ ಅಂಗೀಕರಿಸಲ್ಪಟ್ಟ ಮತ್ತು ಸ್ವೀಕೃತವಾದ ಲಕ್ಷಣವಾಗಿದೆ, ಇದು ಬೇನಾಮಿ ಟ್ರಾನ್ಸಾಕ್ಷನ್ಸ್ (ನಿಷೇಧ) ಕಾಯಿದೆ, 1988 ರ ಸೆಕ್ಷನ್ 3 ರಲ್ಲಿ ವಿವರಣಾ ಷರತ್ತಿನಲ್ಲಿ ಮಾನ್ಯತೆ ಕಂಡುಕೊಳ್ಳುತ್ತದೆ. (2016 ರಲ್ಲಿ ಈ ಷರತ್ತು ತೆಗೆದುಹಾಕಿದ್ದಾರೆ) ಇದು ಒಂದು ಮೂಲಭೂತ ಲಕ್ಷಣವಾಗಿದ್ದು ಅದನ್ನು ತನ್ನ ಹೆಂಡತಿಯ ಹೆಸರಿನಲ್ಲಿ ಗಂಡನಿಂದ ಆಸ್ತಿಯ / ಮಾರಾಟದ ವಹಿವಾಟಿನ ಸ್ವಭಾವವನ್ನು ನಿರ್ಧರಿಸುವ ಸಂದರ್ಭದಲ್ಲಿ ಇತರ ಸಂಗತಿಗಳ ಮತ್ತು ಸಂದರ್ಭಗಳೊಂದಿಗೆ ನಿರ್ಧರಿಸುವ ಸಂದರ್ಭದಲ್ಲಿ ಮನಸ್ಸಿನಲ್ಲಿಟ್ಟುಕೊಳ್ಳಬೇಕು, ಆಸ್ತಿಯನ್ನು ಬೇನಾಮಿ ಖರೀದಿಸಿದ್ದರೇ ಎಂಬ ವಾಸ್ತವಿಕ ಪ್ರಶ್ನೆಯನ್ನು ಕಂಡುಹಿಡಿಯುವಲ್ಲಿ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ." ಇದೇ ಕೇಸಿನಲ್ಲಿ ಮುಂದುವರಿದು ಇನ್ನೊಂದು ಹಳೇ ಕೇಸನ್ನು ಉಲ್ಲೇಕಿಸಿ[1] ಒಂದು ವ್ಯವಹಾರವು ಬೇನಾಮಿಯೇ ಅಲ್ಲವೆ ಎಂದು ಅರಿಯಲು ಕೆಲವು ಸಂಧರ್ಬಗಳನ್ನು ಕೋರ್ಟ್ ಪರಿಗಣಿಸಬೇಕಿರುತ್ತದೆ ಎನ್ನುವುದನ್ನು ಉಲ್ಲೇಖಿಸಿದೆ – ಸಂಧರ್ಬಗಳು –

---

[1] ಜಯದಯಲ್ ಪೋದ್ದರ್ ವಿ. ಬೀಬಿ ಹಜ್ರಾ – ಎ.ಐ.ಆರ್ 1974 ಎಸ್.ಸಿ 171

"(1). ಯಾವ ಮೂಲದಿಂದ ಸದರಿ ಹಣ ಬಂತು, (2) ಖರೀದಿಸಿದ ಮೇಲೆ ಸದರಿ ಆಸ್ತಿಯ ಪ್ರಕೃತಿ ಮತ್ತು ಸ್ವಾಧೀನ, (3). ಬೇನಾಮಿ ಬಣ್ಣವನ್ನು ಆ ವ್ಯವಹಾರಕ್ಕೆ ನೀಡುವ ಉದ್ದೇಶ, (4). ಪಾರ್ಟಿಗಳ ಸ್ಥಾನ ಮತ್ತು ಸಂಬಂಧ, ಇದು ಯಾವುದೇ, ಹಕ್ಕುದಾರ ಮತ್ತು ಆಪಾದಿತ ಬೇನಾಮಿದಾರನ ನಡುವೆ; (5). ಮಾರಾಟದ ನಂತರದಲ್ಲಿ ಮಲೀಕತ್ವದ ಪತ್ರಗಳ ಸ್ವಾಧೀನ (6). ಮಾರಾಟದ ನಂತರ ಸಂಬಂದಿಸಿದ ಪಾರ್ಟಿಗಳ ನಡವಳಿಕೆ ಸದರಿ ಸ್ವತ್ತಿನಲ್ಲಿ ವ್ಯವಹರಿಸುವ ವಿಚಾರವಾಗಿ."

## ಅಧ್ಯಾಯ–5 (ವಿವಿದ ಪಾತ್ರಗಳು)

## ಹಿಂದುಗಳಲ್ಲಿ ಆಸ್ತಿ ಹಕ್ಕು ಮತ್ತು ವಿವಿದ ಬಾಂದವ್ಯಗಳು

1. ಅನೈತಿಕ ಸಂಪರ್ಕದಲ್ಲಿ ಹುಟ್ಟಿದ ಮಕ್ಕಳು – ಸಂವಿಧಾನದ ಮೌಲ್ಯಗಳ ದೃಷ್ಟಿಯಿಂದ ನಮ್ಮ ಸಂವಿಧಾನದ ಪ್ರಸ್ತಾವನೆಯಲ್ಲಿ ಸ್ಥಾನಮಾನ ಮತ್ತು ಅವಕಾಶದ ಸಮಾನತೆ ಮತ್ತು ವೈಯಕ್ತಿಕ ಘನತೆಯ ಬಗ್ಗೆ ಕೇಂದ್ರೀಕರಿಸುತ್ತದೆ. ನ್ಯಾಯಾಲಯವು ಪೋಷಕರ ನಡುವಿನ ಸಂಬಂಧವನ್ನು ಕಾನೂನಿನಿಂದ ಮಂಜೂರು ಮಾಡದಿರಬಹುದು ಆದರೆ ಅಂತಹ ಸಂಬಂಧದಲ್ಲಿ ಮಗುವಿನ ಹುಟ್ಟನ್ನು ಪೋಷಕರ ಸಂಬಂಧದಿಂದ ಸ್ವತಂತ್ರವಾಗಿ ನೋಡಬೇಕು ಎಂದು ನೆನಪಿನಲ್ಲಿರಿಸಿಕೊಳ್ಳಬೇಕು. ಅಂತಹ ಸಂಬಂಧದಲ್ಲಿ ಹುಟ್ಟಿದ ಮಗುವನ್ನು ಮುಗ್ಧರು ಮತ್ತು ಮಾನ್ಯ ಮದುವೆಯಲ್ಲಿ ಹುಟ್ಟಿದ ಇತರ ಮಕ್ಕಳಿಗೆ ನೀಡಲಾಗುವ ಎಲ್ಲಾ ಹಕ್ಕುಗಳಿಗೆ ಅರ್ಹರಾಗಿರುತ್ತಾರೆ. ಇದು ಕಲಂ 16 (3) ಹಿಂದು ವಿವಾಹ ಕಾಯ್ದೆ ರ ತಿದ್ದುಪಡಿಯ ತಳಹದಿ ಆಗಿದೆ. ಆದಾಗ್ಯೂ, ಅಂತಹ ಮಕ್ಕಳ ಆಸ್ತಿ ಹಕ್ಕುಗಳ ಮೇಲೆ ಕೆಲವು ಮಿತಿ ಇನ್ನೂ ಅದರ ಅರ್ಥದಲ್ಲಿ ಅವರ ಪೋಷಕರ ಆಸ್ತಿಗೆ ಸೀಮಿತವಾಗಿದೆ. ಮೇಲಿನ ಚರ್ಚೆಯ ಪೂರ್ವ ಅಸ್ತಿತ್ವದಲ್ಲಿರುವ ಸಾಮಾನ್ಯ ಕಾನೂನಿನ ದೃಷ್ಟಿಕೋನದಲ್ಲಿ ಅಂತಹ ಹಕ್ಕುಗಳನ್ನು ಇನ್ನಷ್ಟು ನಿರ್ಬಂಧಿಸಲಾಗುವುದಿಲ್ಲ."[1]

2. ಜೀವನಾಂಶ ನೀಡುವ ಮುನ್ನ – ಹಿಂದು ವಿವಾಹ ಕಾಯ್ದೆಯಲ್ಲಿ ಆಸ್ತಿಯ ಬಗ್ಗೆ ಕಲಂ 16(3) ರಲ್ಲಿ, ಕಲಂ 25 ರಲ್ಲಿ ಶಾಶ್ವತ

---

[1] ರೇವಣ್ಣಸಿದ್ದಪ್ಪ ವಿ. ಮಲ್ಲಿಕಾರ್ಜುನ್ – 2011 (11) ಎಸ್.ಸಿ.ಸಿ 1

ಜೀವನಾಂಶ ಮತ್ತು ಪೋಷಣಾಂಶ ಕೊಡುವ ವೇಳೆ ಈರ್ವರ ಆಸ್ತಿ ಮತ್ತು ಆಧಾಯವನ್ನು ಲೆಕ್ಕಹಾಕಲು ಮತ್ತು ಪ್ರತಿವಾದಿಯ ಆಸ್ತಿಯ ಮೇಲೆ ಅಂತಹ ಜೀವನಾಂಶ ಮತ್ತು ಪೋಷಣಾಂಶದ ಹೊಣೆ ಹೇರಲು. ಕಲಂ 27 ರಲ್ಲಿ ಮದುವೆಯಲ್ಲಿ ಅಥವ ಮದುವೆ ಸಮಯದಲ್ಲಿ ನೀಡಲಾಗಿರುವ ಇಬ್ಬರಿಗೂ ಜಂಟಿಯಾಗಿ ಸೇರಿದ ಉಡುಗೊರೆಗಳ ಬಗ್ಗೆ ಕೋರ್ಟ್ ತನ್ನ ಡಿಕ್ರಿಯಲ್ಲಿ ಒಂದು ವ್ಯವಸ್ಥೆಗಳನ್ನು ಮಾಡಲು ಸೂಚನೆ ಇದೆ.

3. ಮೈನರ್ ಆಸ್ತಿಗಳು – ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ ಕಾಯ್ದೆ 1956, (ಹಿಂದು ಅಪ್ರಾಪ್ತ ವಯಸ್ಕತೆ ಮತ್ತು ಪೋಷಕತ್ವ ಕಾಯ್ದೆ 1956 ರ ಕಲಂ 4 ರಲ್ಲಿ ಈ ಕೆಳಕಂಡಂತೆ ಆಸ್ತಿ ವಿಚಾರಗಳ ಉಲ್ಲೇಕಗಳಿವೆ. ಗಾರ್ಡಿಯನ್ (ಸಂರಕ್ಷಕ, ಪೋಷಕ) ಎಂದರೆ ಒಬ್ಬ ವ್ಯಕ್ತಿಯು ಒಬ್ಬರು ಮೈನರ್ನ ಅಥವಾ ಅವನ ಆಸ್ತಿಯ ಆರೈಕೆ ಅಥವಾ ಆ ವ್ಯಕ್ತಿ ಮತ್ತು ಆಸ್ತಿಯ ಎರಡರಲ್ಲಿ, ಮತ್ತು ಇವರು ಒಳಗೊಂಡಿದ್ದಾರೆ (1). ನೈಸರ್ಗಿಕ ಗಾರ್ಡಿಯನ್ (2). ಮೈನರ್ ತಂದೆ ಅಥವ ತಾಯಿಯ ವಿಲ್ನಿಂದ ನೇಮಿಸಲಾದ ಗಾರ್ಡಿಯನ್ (3). ನ್ಯಾಯಾಲಯದಿಂದ ನೇಮಿಸಲಾದ ಅಥವ ಘೋಷಿಸಲಾದ ಗಾರ್ಡಿಯನ್ (4). ಕೋರ್ಟ್ ಆಫ್ ವಾರ್ಡ್ಸ್ ಕಾನೂನುಗಳ ಕೆಳಗೆ ಒಬ್ಬ ವ್ಯಕ್ತಿಗೆ ಅಂತಹ ಕಾರ್ಯನಿರ್ವಹಿಸಲು ಅಧಿಕಾರವನ್ನು ನೀಡಿರುವಾತ (ವಾರ್ಡ್ಸ್ ಎಂದರೆ ಇನ್ನೊಬ್ಬರ ಯಾ ನ್ಯಾಯಾಲಯದ ರಕ್ಷಣೆಯಲ್ಲಿರುವ ಮಗು).

4. ಗಾರ್ಡಿಯನ್ – ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ ಕಾಯ್ದೆ 1956 ಇಲ್ಲಿ ನೈಸರ್ಗಿಕ ಗಾರ್ಡಿಯನ್ ಎಂಬ ಪದದ ವಿವರಣೆ ಕಲಂ 6 ರಲ್ಲಿ ಇಂತಿದೆ " ಮೈನರ್ ವ್ಯಕ್ತಿಯ ವಿಷಯದಲ್ಲಿ ಮತ್ತು ಮೈನರ್ ಆಸ್ತಿಯ ವಿಷಯದಲ್ಲಿ (ಜಂಟಿ ಕುಟುಂಬ ಆಸ್ತಿಯಲ್ಲಿ ಅವನ ಅಥವಾ ಅವಳ ಅವಿಭಜಿತ ಆಸಕ್ತಿಯನ್ನು ಹೊರತುಪಡಿಸಿ) ಹಿಂದೂ ಮೈನರ್ನ ನೈಸರ್ಗಿಕ ಗಾರ್ಡಿಯನ್ ಇವರಾಗಿರುತ್ತಾರೆ:– (ಎ). ಒಬ್ಬ ಹುಡುಗನಿಗೆ

ಅಥವಾ ಅವಿವಾಹಿತ ಹೆಣ್ಣು –ತಂದೆ, ಮತ್ತು ಅವನ ನಂತರ, ತಾಯಿ: ಐದು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸದ ಒಬ್ಬ ಚಿಕ್ಕ ಮಗುವಿನ ಪಾಲನೆಯು ಸಾಮಾನ್ಯವಾಗಿ ತಾಯಿಯೊಂದಿಗೆ ಇರಬೇಕು ಎಂದು ಒದಗಿಸಿದ; (ಬಿ). ಅನೈತಿಕವಾಗಿ ಹುಟ್ಟಿದ ಹುಡುಗನಾಗಿದ್ದರೆ ಅಥವಾ ಅನೈತಿಕವಾಗಿ ಹುಟ್ಟಿದ ಅವಿವಾಹಿತ ಹೆಣ್ಣುಮಗಳಾಗಿದ್ದರೆ, – ತಾಯಿ, ಮತ್ತು ಅವಳ ನಂತರ, ತಂದೆ; (ಸಿ) ವಿವಾಹಿತ ಹೆಣ್ಣು ವಿಷಯದಲ್ಲಿ – ಗಂಡ: ಈ ವಿಭಾಗದ ನಿಬಂಧನೆಗಳ ಅಡಿಯಲ್ಲಿ ಯಾವುದೇ ವ್ಯಕ್ತಿಯು ಮೈನರ್ನ ನೈಸರ್ಗಿಕ ಗಾರ್ಡಿಯನ್ ಆಗಿ ವರ್ತಿಸುವ ಅರ್ಹತೆ ಕಳೆದುಕೊಳ್ಳುವ ಕಾರಣಗಳು – (1) ಅವನು ಹಿಂದುವಾಗಿರುವುದು ಮುಕ್ತಾಯಗೊಳಿಸಿದಾಗ, (2) ಈ ಲೋಕವನ್ನು ತೊರೆದು ವಾನಪ್ರಸ್ತಾಶ್ರಮ ಸೇರಿದಾಗ ಅಥವ ಸನ್ಯಾಸಿಯಾದಾಗ. ಈ ನೈಸರ್ಗಿಕ ಗಾರ್ಡಿಯನ್ ವಿವರಣೆಯಲ್ಲಿ ತಂದೆ ಮತ್ತು ತಾಯಿಯ ಜಾಗದಲ್ಲಿ ಮಲ ತಾಯಿ ಮಲತಂದೆ ಸೇರಲಾರರು.

5. ಅವಿಭಕ್ತ ಕುಟುಂಬದಲ್ಲಿ ಮೈನರ್ – ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ ಕಾಯ್ದೆ 1956 ಕಲಂ 12 ರಲ್ಲಿ ಹೇಳಿರುವಂತೆ "ಜಂಟಿ ಕುಟುಂಬದ ಆಸ್ತಿಯಲ್ಲಿ ಒಂದು ಮೈನರ್ ಆಸಕ್ತಿಯುಳ್ಳವರು ಮತ್ತು ಆಸ್ತಿಯು ಕುಟುಂಬದ ವಯಸ್ಕ ಸದಸ್ಯರ ನಿರ್ವಹಣೆಗೆ ಒಳಗಾಗಿದ್ದರೆ, ಅಂತಹ ಅವಿಭಜಿತ ಆಸಕ್ತಿಗೆ ಸಂಬಂಧಿಸಿದಂತೆ ಯಾವುದೇ ಗಾರ್ಡಿಯನ್ ನೇಮಕ ಮಾಡಬಾರದು: ಈ ಕಲಂನಲ್ಲಿ ಏನನ್ನೂ ಪರಿಗಣಿಸದೆ ಅಂತಹ ಆಸಕ್ತಿಗೆ ಸಂಬಂಧಿಸಿದಂತೆ ಗಾರ್ಡಿಯನ್ ನೇಮಕ ಮಾಡಲು ಹೈಕೋರ್ಟ್ನ ಅಧಿಕಾರ ವ್ಯಾಪ್ತಿಯ ಮೇಲೆ ಪರಿಣಾಮ ಬೀರದು."

6. ಮೈನರ್ ಆಸ್ತಿಯ ವಿಚಾರವಾಗಿ ನೈಸರ್ಗಿಕ ಗಾರ್ಡಿಯನ್ ಅಧಿಕಾರ ವ್ಯಾಪ್ತಿ:– (1) ಹಿಂದು ಅವಿಭಕ್ತ ಕುಟುಂಬದ ಹಿಸ್ಸೆಯುಳ್ಳ ಆಸ್ತಿಗಳಲ್ಲಿ, ಹಿಂದು ಅವಿಭಕ್ತ ಕುಟುಂಬದ ಹಿರಿಯನ ಅಧೀನದಲ್ಲಿ

ಆಸ್ತಿಗಳಿದ್ದರೆ, ಮೈನರ್ ನೈಸರ್ಗಿಕ ಗಾರ್ಡಿಯನ್ ರವರಿಗೆ ಅಧಿಕಾರ ನೀಡಿಲ್ಲ, ಅಂತಹ ಕುಟುಂಬದ ಹಿರಿಯನು ಇಲ್ಲವಾದಲ್ಲಿ ನೈಸರ್ಗಿಕ ಗಾರ್ಡಿಯನ್ ಕರ್ತನ ಸ್ಥಾನವನ್ನು ಪಡೆದು ಒಟ್ಟು ಕುಟುಂಬದ ಮೈನರ್ ಹಿಸ್ಸೆಯನ್ನು ನಿರ್ವಹಿಸುವರು. (2). ಹಿಂದು ಮೈನರ್ನ ನೈಸರ್ಗಿಕ ಗಾರ್ಡಿಯನ್ ಕಲಂ 8 ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ ಕಾಯ್ದೆ 1956 ಒಳಪಟ್ಟು ಅಗತ್ಯ ಅಥವಾ ಸಮಂಜಸವಾದ ಎಲ್ಲಾ ಕಾರ್ಯಗಳನ್ನು ಮಾಡಲು ಮತ್ತು ಮೈನರ್ ಲಾಭಕ್ಕಾಗಿ ಅಥವಾ ಮೈನರ್ ಎಸ್ಟೇಟ್ನ ಒಳತಿಗೆ, ರಕ್ಷಣೆಗೆ ಅಥವಾ ಲಾಭಕ್ಕಾಗಿ; ಅದಿಕಾರ ಉಳ್ಳವರಾಗಿರುತ್ತಾರೆ. ಆದರೆ ಗಾರ್ಡಿಯನ್ ಯಾವುದೇ ಸಂದರ್ಭದಲ್ಲಿ ವೈಯಕ್ತಿಕ ಒಡಂಬಡಿಕೆಯಿಂದ ಮೈನರನ್ನು ಬಂಧಿಸಲಾಗದು. (3). ಹಿಂದು ಮೈನರ್ನ ನೈಸರ್ಗಿಕ ಗಾರ್ಡಿಯನ್ ನ್ಯಾಯಾಲಯದ ಅನುಮತಿಯನ್ನು ಈ ಸಂಧರ್ಬಗಳಲ್ಲಿ ಪಡೆಯುವುದು ಕಡ್ಡಾಯವಾಗಿದೆ. (ಎ) ಯಾವುದೇ ಸ್ಥಿರ ಆಸ್ತಿಯ ಯಾವುದೇ ಭಾಗಃ ಅಡಮಾನ ಅಥವಾ ಹೊಣೆಯಾಗಿಸಲು, ಅಥವಾ ಮಾರಾಟದ ಮೂಲಕ ವರ್ಗಾವಣೆ, ಉಡುಗೊರೆ, ವಿನಿಮಯ ಅಥವಾ ಅನ್ಯಥಾ ಅಥವಾ (ಬಿ). ಅಂತಹ ಆಸ್ತಿಯ ಯಾವುದೇ ಭಾಗವನ್ನು ಐದು ವರ್ಷಗಳ ಮೀರಿದ ಅವಧಿಯ ಲೀಸನ್ನು ಅಥವಾ ಮೈನರ್ ಮೇಜರ್ ಆಗುವ ದಿನಾಂಕದಿಂದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಯನ್ನು ವಿಸ್ತರಿಸುವುದನ್ನು ಮಾಡಲು. (4). ಈ ಮೇಲಿನ ನಿಯಮಗಳನ್ನು ಉಲ್ಲಂಘಿಸಿ ನೈಸರ್ಗಿಕ ಗಾರ್ಡಿಯನ್ ಯಾವುದೇ ಸ್ಥಿರ ಆಸ್ತಿಯನ್ನು ಇತ್ಯರ್ಥ (ಮಾರಾಟ/ವರ್ಗಾವಣೆ) ಮಾಡಿದರೆ ಅಂತಹ ಇತ್ಯರ್ಥವನ್ನು ನಿರರ್ಥಕ ಗೊಳಿಸಲು ಮೈನರ್ ಆಗಲೀ ಆತನ ಕೆಳಗೆ ಕ್ಲೇಮು ಮಾಡುವವರಾಗಲೀ ಮುಂದಾಗಬಹುದು. (5). ಗಾರ್ಡಿಯನ್ ಮತ್ತು ವಾರ್ಡ್ಸ್ ಕಾಯ್ದೆ 1890 ರಲ್ಲಿ ನ್ಯಾಯಾಲಯದ ಈ ಮೇಲ್ಕಂಡ ಅನುಮತಿ ಕೋರಿ ಅರ್ಜಿ ಸಲ್ಲಿಸಬಹುದು. ಮೈನರ್ನ ಅವಶ್ಯಕತೆಯ

ವಿಷಯದಲ್ಲಿ ಅಥವಾ ಆತನಿಗೆ ರುಜುವಾತಿನ ಪ್ರಯೋಜನಕಾರಿಗೆ ಕೋರ್ಟ್ ಈ ಮೇಲ್ಕಂಡ ಅಂಶಗಳಿಗೆ ಅನುಮತಿ ನೀಡಬಹುದು.

7. ವಿಲ್ ಮುಖೇನ ಗಾರ್ಡಿಯನ್:–

(1). ಮೈನರ್ ನ್ಯಾಯಸಮ್ಮತ ಮಕ್ಕಳ ನೈಸರ್ಗಿಕ ಗಾರ್ಡಿಯನ್ನಾಗಿ ವರ್ತಿಸುವ ಹಿಂದು ತಂದೆ, ಮೈನರ್ ವ್ಯಕ್ತಿಯ ವಿಷಯದಲ್ಲಿ ಅಥವಾ ಮೈನರ್ ಆಸ್ತಿಯ ವಿಷಯದಲ್ಲಿ ಅಥವಾ ಎರಡೂ ವಿಷಯಗಳಲ್ಲಿ. ವಿಲ್ನಿಂದ, ಅವರುಗಳಿಗೆ ಗಾರ್ಡಿಯನ್ ನೇಮಕ ಮಾಡಬಹುದು (ಕಲಂ 12 ರಲ್ಲಿ ಉಲ್ಲೇಖಿಸಲ್ಪಟ್ಟಿರುವ ಅವಿಭಜಿತ ಆಸಕ್ತಿಯ ಹೊರತುಪಡಿಸಿ)

(2). ಈ ಮೇಲೆ ಹೇಳಿದ ರೀತಿಯಲ್ಲಿ ತಂದೆ ನೇಮಕ ಮಾಡಿದ ಮೇಲೆ ತಂದೆ ತಾಯಿಗಿಂತ ಮುಂಚೆ ತೀರಿಕೊಂಡರೆ, ತಾಯಿ ನೈಸರ್ಗಿಕ ಗಾರ್ಡಿಯನ್ ಆಗುತ್ತಾಳೆ ಆಕಸ್ಮಿಕ ಆಕೆ ವಿಲ್ ಬರೆಯದೆ ಸತ್ತರೆ ನಂತರ ಆಕೆಯ ಪತಿ ಬರೆದ ವಿಲ್ ಜಾರಿಯಾಗುತ್ತದೆ.

(3). ಹಿಂದು ವಿದವೆ ವಿಲ್ ಮುಖೇನ  ಗಾರ್ಡಿಯನ್ ಅನ್ನು ತನ್ನ ನೈತಿಕ ಮೈನರ್ ಮಕ್ಕಳಿಗೆ ಮೈನರ್ ವ್ಯಕ್ತಿಯ ವಿಷಯದಲ್ಲಿ ಅಥವಾ ಮೈನರ್ ಆಸ್ತಿಯ ವಿಷಯದಲ್ಲಿ ಅಥವಾ ಎರಡೂ ವಿಷಯಗಳಲ್ಲಿ ನೇಮಿಸುವ ಹಕ್ಕು ಇರುತ್ತದೆ. (ಕಲಂ 12 ರಲ್ಲಿ ಉಲ್ಲೇಖಿಸಲ್ಪಟ್ಟಿರುವ ಅವಿಭಜಿತ ಆಸಕ್ತಿಯ ಹೊರತುಪಡಿಸಿ)

(4) ಎಲ್ಲಿ ತಂದೆಯು ನೈಸರ್ಗಿಕ ಗಾರ್ಡಿಯನ್ ಆಗಿ ಮುಂದುವರಿಯಲು ಅಧಿಕಾರ ಕಳೆದುಕೊಳ್ಳುತ್ತಾನೋ ಆಗ ಹಿಂದು ತಾಯಿ  ಗಾರ್ಡಿಯನ್ ಅನ್ನು ವಿಲ್ ಮುಖೇನ ತನ್ನ ನೈತಿಕ ಮೈನರ್ ಮಕ್ಕಳಿಗೆ ಮೈನರ್ ವ್ಯಕ್ತಿಯ ವಿಷಯದಲ್ಲಿ ಅಥವಾ ಮೈನರ್ ಆಸ್ತಿಯ ವಿಷಯದಲ್ಲಿ ಅಥವಾ ಎರಡೂ ವಿಷಯಗಳಲ್ಲಿ ನೇಮಿಸಲು ಹಕ್ಕು ಇರುತ್ತದೆ. (ಕಲಂ 12 ರಲ್ಲಿ ಉಲ್ಲೇಖಿಸಲ್ಪಟ್ಟಿರುವ ಅವಿಭಜಿತ ಆಸಕ್ತಿಯ ಹೊರತುಪಡಿಸಿ)

(5). ಹಿಂದು ತಾಯಿ ತನ್ನ ಮೈನರ್ ನೈತಿಕ ಮಕ್ಕಳ ನೈಸರ್ಗಿಕ ಗಾರ್ಡಿಯನ್ ಆಗಿ ವಿಲ್ ಮುಖೇನ ಮೈನರ್ ವ್ಯಕ್ತಿಯ ವಿಷಯದಲ್ಲಿ ಅಥವಾ ಮೈನರ್ ಆಸ್ತಿಯ ವಿಷಯದಲ್ಲಿ ಅಥವಾ ಎರಡೂ ವಿಷಯಗಳಲ್ಲಿ ಗಾರ್ಡಿಯನ್ ನೇಮಕ ಮಾಡಬಹುದು.

(6). ಅಂತಹ ನೇಮಕವಾದ ಗಾರ್ಡಿಯನ್ ಈ ಕಾಯ್ದೆ ಮತ್ತು ವಿಲ್ ನಲ್ಲಿನ ವಿಸ್ತರಣೆ ಮತ್ತು ನಿರ್ಬಂದದಂತೆ ನೈಸರ್ಗಿಕ ಗಾರ್ಡಿಯನ್ನಿನ ಎಲ್ಲಾ ಹಕ್ಕುಗಳನ್ನು ಸದರಿ ವಿಲ್ ಬರೆದ ಮೈನರ್ನ ತಾಯಿ ಅಥವ ತಂದೆ ಮರಣದ ನಂತರ ಕಾರ್ಯಗತವಾಗುತ್ತಾರೆ.

(7). ಅಂತಹ ನೇಮಕವಾದ ಗಾರ್ಡಿಯನ್ ಹಕ್ಕು ಮೈನರ್ ಹೆಣ್ಣು ಮದುವೆ ನಂತರ ಕೊನೆಯಾಗುತ್ತದೆ.

(8). ಒಬ್ಬ ಮನರ್ ಇನ್ನಾರೇ ಮೈನರ್ ಗಾರ್ಡಿಯನ್ ಆಗಿ ಕಾರ್ಯ ನಿರ್ವಹಿಸಲು ಅಸಮರ್ಥರಾಗಿದ್ದಾರೆ. (ಕಲಂ 10)

(9). ಡಿ ಫ್ಯಾಕ್ಟೋ ಗಾರ್ಡಿಯನ್ (ಕಾರ್ಯತಃ ಗಾರ್ಡಿಯನ್) ಈ ಕಾಯ್ದೆ ಪ್ರಾರಂಬವಾದ ಮೇಲೆ ಹಿಂದು ಮೈನರ್ ಆಸ್ತಿಯನ್ನು ವ್ಯವಹರಿಸುವುದಾಗಲೀ, ಇತ್ಯರ್ಥ (ಮಾರಾಟ) ಮಾಡುವುದಾಗಲೀ ಮಾಡುವಹಾಗಿಲ್ಲ. ಆತ ಅಥವ ಆಕೆ ಕಾರ್ಯತಃ ಗಾರ್ಡಿಯನ್ ಎಂದ ಮಾತ್ರಕ್ಕೆ ಮೈನರ್ ಆಸ್ತಿಯ ನಿರ್ವಹಣೆ ಅಥವ ಅತ್ಯರ್ಥ ಮಾಡುವ ಹಾಗಿಲ್ಲ.

## ಹಿಂದು ದತ್ತು ಪಡೆದಾಗ ಆಸ್ತಿಗಳಲ್ಲಿ ಅನ್ವಯಿಸುವ ಕಾನೂನು

ಹಿಂದು ದತ್ತಕ ಮತ್ತು ಪೋಷಣಾ ಕಾಯ್ದೆ 1956 ರಲ್ಲಿ ಆಸ್ತಿಗಳ ವಿಚಾರವಾಗಿ ಹೀಗೆ ಉಲ್ಲೇಕಿಸಲಾಗಿದೆ

(1). ದತ್ತು ಅಂಗೀಕಾರಕ್ಕೆ ಮುಂಚಿತವಾಗಿ ದತ್ತು ಮಗುವಿನೊಳಗೆ ನಿಲ್ಲುವ ಯಾವುದೇ ಆಸ್ತಿಯು ಅಂತಹ ವ್ಯಕ್ತಿಯ ಯಾವುದೇ ಜವಾಬ್ದಾರಿಗಳಿಗೆ ಒಳಪಟ್ಟು ಪ್ರಾಪ್ತವಾಗಿರುತ್ತದೆ, ಯಾವುದೇ, ಅವನ ಅಥವಾ ಅವಳ ಜನ್ಮದ ಕುಟುಂಬದಲ್ಲಿ ಸಂಬಂಧಿಕರನ್ನು ಕಾಪಾಡಿಕೊಳ್ಳುವ ಜವಾಬ್ದಾರಿ, ಅಂತಹ ಆಸ್ತಿಯ ಮಾಲೀಕತ್ವಕ್ಕೆ ಜವಾಬ್ದಾರಿಗಳು ಒಳಪಟ್ಟಿರುತ್ತದೆ. (ಕಲಂ 12)

(2). ದತ್ತುವಾಗಿ ಹೋದ ಮಗುವಿನಲ್ಲಿ ಯಾವುದೇ ಎಸ್ಟೇಟ್ ದತ್ತುವಿಗೆ ಮುಂಚೆ ಪ್ರಾಪ್ತವಾಗಿರುವಾಗ ಅದು ಅವನಿಂದ ದೂರವಾಗದು. (ಕಲಂ 12)

(3). ದತ್ತು ಪಡೆಯುವ ತಂದೆ ಅಥವ ತಾಯಿ ದತ್ತು ಪಡೆದ ಮೇಲೆ ಅವನ ಅಥವ ಆಕೆಯ ಆಸ್ತಿಯನ್ನು ಜೀವಂತ ಇರುವಾಗಲೇ ವರ್ಗಾವಣೆಯನ್ನಾಗಲೀ (ಟ್ರಾನ್ಸ್‌ಫ಼ರ್ ಇಂಟರ್ ವೈವಸ್) ವಿಲ್ ಮುಖೇನ ವರ್ಗಾವಣೆಯನ್ನಾಗಲೀ ಮಾಡಬಹುದು, ಆದರೆ ಇದು ದತ್ತಕ ಕರಾರಿನ ಅನ್ಯ ನಿಬ್ಬಂದಗಳಿಗೆ ಒಳಪಟ್ಟಿರುತ್ತದೆ. (ಕಲಂ 13).

(4). ಅವಲಂಬಿತನು ಪೋಷಣಾಂಶವನ್ನು ಈ ಕಾಯ್ದೆ ಕೆಳೆಗ ಕ್ಲೇಮ್ ಮಾಡಿದಾಗ ಅದು ಸತ್ತವನ ಎಸ್ಟೇಟ್ ಮೇಲೆ ಅಥವ ಅಂತಹ ಬಾಗದ ಮೇಲೆ ಹೊಣೆಯಾಗದು, ಆದರೆ ಸತ್ತವನು ವಿಲ್ ಮುಖೇನ ಅಂತಹ ಹೊಣೆ ಬರೆದಿದ್ದಲ್ಲಿ, ಕೋರ್ಟ್ ಡಿಕ್ರಿ ಮುಖಾಂತರ ಹೊಣೆಯಾಗಿದ್ದಲ್ಲಿ, ಅವಲಂಬಿತನು ಮತ್ತು ಎಸ್ಟೇಟ್ ಅಥವ ಅದರ ಬಾಗದ ಅಥವ ಅನ್ಯಥಾ ಮಾಲೀಕನ ನಡುವೆ ಕರಾರಿನಿಂದ ಹೊಣೆಯಾಗಿದ್ದಲ್ಲಿ ಹೊಣೆ ಮಾಡಬಹುದಾಗಿರುತ್ತದೆ. (ಕಲಂ 27).

(5). ಒಬ್ಬ ಅವಲಂಬಿತನಿಗೆ ಒಂದು ಎಸ್ಟೇಟ್ ಮುಖಾಂತರ ಪೋಷಣಾಂಶ ಪಡೆಯುವ ಹಕ್ಕು ಇದ್ದಲ್ಲಿ, ಅಂತಹ ಎಸ್ಟೇಟ್ ಅಥವ ಅದರ ಬಾಗ ವರ್ಗಾವಣೆಯಾದರೆ, ವರ್ಗಾವಣೆ ಪಡೆದವನಿಗೆ ಸದರಿ ಪೋಷಣಾಂಶದ ಹಕ್ಕಿನ ಬಗ್ಗೆ ತಿಳಿದಿದ್ದರೆ, ಅಥವ ವರ್ಗಾವಣೆಯನ್ನು

ಉಚಿತವಾಗಿ ಪಡೆದಿದ್ದರೆ, ಅಂತಹ ಪೋಷಣಾಂಶದ ಕ್ಲೇಮನ್ನು ವರ್ಗಾವಣೆ ಪಡೆದವನ ಮೇಲೆ ಜಾರಿ ಮಾಡಬಹುದು. ವರ್ಗಾವಣೆಯು ಪರಿಗಣನೆಗಾಗಿ ಅಂತಹ ಹಕ್ಕಿನ ತಿಳುವಳಿಕೆ ಇಲ್ಲದೆ ಪಡೆದ ವರ್ಗಾವಣೆ ಪಡೆದವನ ಮೇಲೆ ಜಾರಿಮಾಡಲಾಗಲ್ಲ. (ಕಲಂ 28)

## ಹಿಂದು ಕಾನೂನಿನಲ್ಲಿ "ಕರ್ತ"

ಇವರ ಬಗ್ಗೆ ಇರುವ ಕಾನೂನು ವ್ಯಾಖ್ಯಾನಗಳಲ್ಲಿ, ಕರ್ತ ಎಂದರೆ ವ್ಯವಸ್ಥಾಪಕ ಎನ್ನುವ ಪದಾರ್ಥದಲ್ಲಿ ಬಳಸಲಾಗಿದೆ. ಹಿಂದು ಅವಿಭಕ್ತ ಕುಟುಂಬದ ಆಸ್ತಿಗಳನ್ನು ಸಾಮಾನ್ಯವಾಗಿ ತಂದೆಯ ವ್ಯವಸ್ಥಾಪನೆಯಲ್ಲಿ ಇರುತ್ತದೆ ಅಥವ ಕುಟುಂಬದ ಹಿರಿಯ ಸದಸ್ಯರ ವ್ಯವಸ್ಥಾಪನೆಯಲ್ಲಿ ಇರುತ್ತದೆ. ಕುಟುಂಬದ ಹಿರಿಯ ಸದಸ್ಯನು ತನ್ನ ವ್ಯವಸ್ಥಾಪನೆ ಹಕ್ಕನ್ನು ಇತರೆ ಎಲ್ಲಾ ಸದಸ್ಯರ ಅನುಮತಿಯೊಂದಿಗೆ ಕಿರಿಯರಿಗೆ ಬಿಟ್ಟುಕೊಡಬಹುದು, ಇಂತಹ ಬಿಟ್ಟು ಕೊಟ್ಟಿರುವ ಸನ್ನಿವೇಶವನ್ನು ಪ್ರತಿಪಾದಿಸುವವರು ಸದರಿ ಅಂಶವನ್ನು ಸಾಕ್ಷಿಯೊಂದಿಗೆ ರುಜುವಾತು ಪಡಿಸಬೇಕಿರುತ್ತದೆ. ವ್ಯವಸ್ಥಾಪಕನ ಹೆಸರಿನಲ್ಲಿ ಆಸ್ತಿ ಇದೆ ಎಂದ ಮಾತ್ರಕ್ಕೆ ಅದು ಒಟ್ಟು ಕುಟುಂಬದ ಆಸ್ತಿ ಎಂದು ಪರಿಬಾವಿಸಲು ಬರುವುದಿಲ್ಲ. ಹಿಂದು ಕಾನೂನಿನಲ್ಲಿ ಒಟ್ಟು ಕುಟುಂಬದ ಪರಿಬಾವನೆ ಇರುತ್ತದೆ ಹೊರತು ಆಸ್ತಿ ಒಟ್ಟು ಕುಟುಂಬಕ್ಕೆ ಸೇರಿದ್ದು ಎಂಬ ಪರಿಬಾವನೆ ಇರುವುದಿಲ್ಲ. ಇದನ್ನು ಪ್ರತಿಪಾದಿಸುವವನು ಸಾಕ್ಷಿಯೊಂದಿಗೆ ರುಜುವಾತು ಪಡಿಸಬೇಕಿರುತ್ತದೆ.[1]

ಮದ್ರಾಸ್ ಮತ್ತು ಒರಿಸ್ಸಾ ಹೈಕೋರ್ಟ್ ಹೇಳಿರುವಂತೆ ಕರ್ತನಾಗಲು ಆತನಿಗೆ ಕೋಪಾರ್ಸನರ್ ಎಂಬ ಅವಶ್ಯ ಅರ್ಹತೆಯು

---

[1] ಹರಿಹರ ಸೇಥಿ ವಿರುದ್ಧ ಲಡುಕಿಶೋರ್ ಎ.ಐ.ಆರ್ 2002 ಒರಿಸ್ಸಾ 110

ಹಿಂದು ಅವಿಭಕ್ತ ಕುಟುಂಬದಲ್ಲಿ ಇರಬೇಕಾಗುತ್ತದೆ. ಕೋಪಾರ್ಸನರ್ ಮಾತ್ರ (ಕರ್ತ) ವ್ಯವಸ್ಥಾಪಕನಾಗಬಲ್ಲನು, ಮಹಿಳೆ ಕೋಪಾರ್ಸನರ್ ಅಲ್ಲದ್ದರಿಂದ[1] ಕರ್ತನಾಗಲು ಬರುವುದಿಲ್ಲ. .... ಒಟ್ಟು ಕುಟುಂಬವು ಒಂದು ಪಾಲಿದಾರಿಕೆ ಸಂಸ್ಥೆಯಲ್ಲಿ ಪಾಲುದಾರತ್ವವನ್ನು ಪಡೆಯಲು ಬರುವುದಿಲ್ಲ. ಆದರೆ ಕರ್ತನ ಮುಖಾಂತರ ಅದು ಇತರೆ ಕುಟುಂಬದ ಕರ್ತನ ಜೊತೆ ಪಾಲುದಾರತ್ವವನ್ನು ನಡೆಸಬಹುದು.[2] ಹಿಂದು ಕೋಪಾರ್ಸನರಿಯ ಕರ್ತನು ಎರಡು ಸಮಯದಲ್ಲಿ ದಾನ ನೀಡಲು ಅರ್ಹನಾಗಿದ್ದಾನೆ ಒಂದು ಅಂತಹ ದಾನ ಕೋಪಾರ್ಸನರಿ ಸ್ವತ್ತಿನಲ್ಲಿನ ಹೆಚ್ಚಲ್ಲದ ಸ್ವತ್ತಾಗಿರಬೇಕು ಇನ್ನೊಂದು ಅದು ಧಾರ್ಮಿಕ ಶ್ರದ್ದೆಯ ಕರ್ತವ್ಯಕ್ಕಾಗಿ ಮಾಡಿದ್ದಾಗಿರಬೇಕು.[3] – ಇದೇ ಕೇಸಿನಲ್ಲಿ ಇನ್ನೊಂದು ತೀರ್ಪು[4] ಉಲ್ಲೇಕಿಸಿದ ವಿಷಯದಲ್ಲಿ – "ಪೂರ್ವಜರ ಚರ ಆಸ್ತಿಗಳಲ್ಲಿ ಹೆಚ್ಚಲ್ಲದ ಸ್ವಲ್ಪವನ್ನು ಹೆಂಡತಿಗೆ, ಮಗಳಿಗೆ, ಮಗನಿಗೆ ಪ್ರೀತಿಯಿಂದ ದಾನ ನೀಡಬಹುದು. ಅಂತಹ ಪೂರ್ಣ ಪೂರ್ವಜರ ಸ್ವತ್ತನ್ನು ಹಾಗೆ ದಾನವಾಗಿ ನೀಡಲು ಬರುವುದಿಲ್ಲ. ಹಾಗೆಯೇ ಹಿಂದು ತಂದೆಯು ಪೂರ್ವಜರ ಸ್ಥಿರ ಆಸ್ತಿಗಳಲ್ಲಿ ಹೆಚ್ಚಲ್ಲದ ಸ್ವಲ್ಪವನ್ನು ಧಾರ್ಮಿಕ ಶ್ರದ್ದೆಯ ಕರ್ತವ್ಯಕ್ಕೆ ದಾನ ನೀಡಬಹುದು. ಧಾರ್ಮಿಕ ಶ್ರದ್ದೆಯ ಉದ್ದೇಶದಲ್ಲಿ ಔದಾರ್ಯದಿಂದ (ಚಾರಿಟೆಬಲ್) ಮತ್ತು ಧಾರ್ಮಿಕತೆಗಾಗಿ (ರಿಲಿಜಿಯಸ್) ನೀಡುವುದು ಸೇರಿರುತ್ತದೆ." ಇದರಲ್ಲಿ ತಂದೆಯು ತನ್ನ ಮಗಳ ಮದುವೆ ಸಮಯದಲ್ಲಿ ಒಪ್ಪಂದದಂತೆ ಪೂರ್ವಜರ ಸ್ಥಿರ ಆಸ್ತಿಗಳಲ್ಲಿ ಹೆಚ್ಚಲ್ಲದ ಸ್ವಲ್ಪವನ್ನು

---

[1] 2005 ತಿದ್ದುಪಡಿ ನಂತರ ಮಗಳು ಕೋಪಾರ್ಸನರ್ ಆಗಬಹುದು, ಕೋಪಾರ್ಸನರ್ ವಿದವೆ ತಾಯಿ ಅಥವ ಸೊಸೆ ಆಗಲು ಬರುವುದಿಲ್ಲ.

[2] ಕ.ಆ.ಇನ್ಕಮ್ ಟ್ಯಾಕ್ಸ್ ವಿರುದ್ಧ ಸೇತ್ ಗೋವಿಂದ್ರಾಮ್ ಎ.ಐ.ಆರ್ 1966 ಎಸ್.ಸಿ 24

[3] ತಿಮ್ಮಯ್ಯ ವಿರುದ್ದ ನಿಂಗಮ್ಮ 2000 (7) ಎಸ್.ಸಿ.ಸಿ 409

[4] 1967 (1) ಎಸ್.ಸಿ.ಆರ್ 353

ಕೊಡುವುದಾಗಿ ಕೊಟ್ಟಿರುವ ಮಾತಿನಂತೆ ದಾನ ನೀಡುವುದನ್ನು ಧಾರ್ಮಿಕ ಶ್ರದ್ದೆಯ ಉದ್ದೇಶದಲ್ಲಿ ಸೇರಿಸಿದೆ ಸುಪ್ರೀಮ್ ಕೋರ್ಟ್[1]

ತಂದೆಯಾದವನು ತನ್ನ ಕರ್ತ ಸ್ಥಾನದಲ್ಲಿ ನಿಂತು ಹಿಂದು ಅವಿಭಕ್ತ ಕುಟುಂಬವನ್ನು ವಿಭಾಗಿಸ ಬಹುದಾಗಿರುತ್ತದೆ. ಇದು ಎಲ್ಲರೂ ಒಪ್ಪಿಕೊಂಡಾಗ ಸಂಪೂರ್ಣ ಜಾರಿಯಾಗುತ್ತದೆ. ಕೋಪಾರ್ಸನರ್ ರವರು ತಮಗೆ ಬಂದಿರುವ ಅಂತಹ ಸಂಧರ್ಬಿಕ ಹಿಸ್ಸೆಯನ್ನು ಸಮಾನವಾಗಿ ಮಾಡಿಲ್ಲವೆಂದು ಪುನರ್ ವಿಭಾಗಕ್ಕೆ ದಾವೆ ಸಲ್ಲಿಸ ಬಹುದಾಗಿರುತ್ತದೆ. ಆದರೆ ಇಂತಹ ಅಧಿಕಾರವುಳ್ಳ ಕರ್ತ (ತಂದೆ) ರವರ ಅಧಿಕಾರ ವ್ಯಾಪ್ತಿ ವಿಭಾಗವನ್ನು ವಿಲ್ ಮಾದರಿಯಲ್ಲಿ ಮುಂದೆ ಹೀಗೆ ವಿಭಾಗವಾಗಬೇಕು ಎಂಬಂತೆ ಪತ್ರ ರಚಿಸಲು ಬರುವುದಿಲ್ಲ.[2]

ಹಿಂದು ಕರ್ತನ ವಿರುದ್ದ ದಾವೆ ಹೂಡಿರುವ ಪಕ್ಷಕಾರನು ಕರ್ತನು ಸದರಿ ಸ್ವತ್ತುಗಳನ್ನು ಮಾರಾಟ ಮಾಡದಂತೆ ಶಾಶ್ವತ ನಿರ್ಬಂದಕಾಜ್ಞೆಯನ್ನು ಕೋರಲು ಬರುವುದಿಲ್ಲ. ಆದರೆ ಸದರಿ ಸ್ವತ್ತು ಕಾನೂನು ಭಾಹಿರ ಕಾರ್ಯಗಳಿಗೆ ಪರಭಾರೆ ಮಾಡಲು ಪ್ರಯತ್ನ ನಡೆಯುತ್ತಿದೆ ಎಂದು ಮಧ್ಯಂತರ ನಿರ್ಬಂದಕಾಜ್ಞೆಯನ್ನು ಪಡೆಯ ಬಹುದಾಗಿರುತ್ತದೆ.[3]

ಹಿಂದೂ ಕಾನೂನಿನಡಿಯಲ್ಲಿ, ಮೈನರ್ ಕುಟುಂಬದ ಮ್ಯಾನೇಜರ್ ಅಥವಾ ಕರ್ತ ನ್ಯಾಯಾಲಯದ ಅನುಮತಿಯಿಲ್ಲದೆ ಜಂಟಿ ಕುಟುಂಬದ ಆಸ್ತಿಯಲ್ಲಿ ಮೈನರ್ನ ಅವಿಭಜಿತ ಆಸಕ್ತಿಯನ್ನು ಮಾರಾಟಮಾಡಬಹುದು, ಪರಬಾರೆಗೆ ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ 1956 ಕಾಯ್ದೆಯಡಿಯಲ್ಲಿ ಕೋರ್ಟ್ ಅನುಮತಿ ಅವಶ್ಯವಿಲ್ಲ ಕುಟುಂಬದ ವಯಸ್ಕ ಸದಸ್ಯರ ನಿರ್ವಹಣೆಯಡಿಯಲ್ಲಿ ಕುಟುಂಬ ಸದಸ್ಯರು ಇರುವಾಗ

---

[1] 1957 (1) ಎಸ್.ಸಿ.ಆರ್ 452.

[2] ಎ.ಐ.ಆರ್ 1980 ಎಸ್.ಸಿ 1173

[3] ಎ.ಐ.ಆರ್ 1988 ಎಸ್.ಸಿ 576

ಆ ಕಾಯ್ದೆ ಕಲಂ 12 ರಂತೆ ಕುಟುಂಬದ ಆಸ್ತಿಯಲ್ಲಿ ಮೈನರ್ನ ಅವಿಭಜಿತ ಆಸಕ್ತಿಗೆ ಯಾವುದೇ ಪೋಷಕರನ್ನು ನೇಮಕ ಮಾಡಬಾರದು ಸ್ಪಷ್ಟಪಡಿಸಲಾಗಿದೆ.

ಹಿಂದು ಅವಿಭಕ್ತ ಕುಟುಂಬದ ಲೆಕ್ಕ ಪತ್ರ ನಿರ್ವಹಣೆಯಲ್ಲಿ ಮತ್ತು ಪಾಲುದಾರಿಕೆ ಸಂಸ್ಥೆಯ ಲೆಕ್ಕಪತ್ರ ನಿರ್ವಹಣೆಯಲ್ಲಿ ವ್ಯತ್ಯಾಸವಿರುತ್ತದೆ. ಪ್ರತಿಯೊಬ್ಬ ಸದಸ್ಯನ ಬಾಗಾಂಶವು ಲಾಭ ಮತ್ತು ನಷ್ಟದ ರೀತ್ಯ ನಿರ್ದರಿಸಲು ಬರುವುದಿಲ್ಲ. ಆದರೆ ಪಾಲುದಾರಿಕೆ ಸಂಸ್ಥೆಯಲ್ಲಿ ಹಾಗೆ ನಿರ್ದರಿಸಬೇಕಿರುತ್ತದೆ. [1] ಇದೇ ಕೇಸಿನಲ್ಲಿ ಮುಂದುವರಿದು ಹೇಳಿರುವುದೇನೆಂದರೆ, ಸಾಲ ಪಡೆಯುವವನು ಕರ್ತನೆ ಅಲ್ಲವೆ ಇನ್ನು ಆ ಅಧಿಕಾರ ಉಳ್ಳವನೆ ಇಲ್ಲವೆ ಎಂದುದನ್ನು ನೀಡುವವರು ಖಾತ್ರಿ ಪಡಿಸಿಕೊಳ್ಳಬೇಕಿರುತ್ತದೆ. ಕಾಲಮಿತಿ ಮೀರಿದ ಸಾಲವನ್ನು ಅಂಗೀಕರಿಸುವ ವೇಳೆಯಲ್ಲಿ ಕೋಪಾರ್ಸನರಿ/ಒಟ್ಟು ಕುಟುಂಬ ವ್ಯವಸ್ಥೆ ಅಸ್ತಿತ್ವದಲ್ಲಿ ಇರುವುದೇ ಎಂದು ಖಾತ್ರಿ ಪಡಿಸಿಕೊಳ್ಳಬೇಕಿರುತ್ತದೆ. ಹಾಗೊಂದು ವೇಳೆ ನೋಟೀಸಿನಿಂದ ಅಥವ ಕೇಸು ಹಾಕುವುದರಿಂದ ಒಟ್ಟು ಕುಟುಂಬದ ವ್ಯವಸ್ಥೆ ಕೊನೆಯಾಗಿದ್ದರೆ, ಅಂತಹ ಕರ್ತನ ಸ್ಥಾನದಲ್ಲಿದ್ದವನು ಕೊನೆಯಾದ ಒಟ್ಟು ಕುಟುಂಬದ ಅಸ್ತಿತ್ವದಲ್ಲಿ ಇತರರಿಗೆ ಬಾದಿಸುವಂತೆ ಸಾಲವನ್ನು ಅಂಗೀಕರಿಸಲು ಬರುವುದಿಲ್ಲ. ಹಾಗಾಗಿ ಇತರರ ವಿಚಾರದಲ್ಲಿ ಕಾಲಮಿತಿ ಮುಂದುವರಿಸಲಾಗುವುದಿಲ್ಲ.

ಹಿಂದು ಕುಟುಂಬದ ಕರ್ತನು ಸದರಿ ಒಟ್ಟು ಕುಟುಂಬದ ಆಸ್ತಿಯನ್ನು ಕಾನೂನು ಬದ್ದ ಅವಶ್ಯಕತೆಗೆ, ಕುಟುಂಬದ ಅವಶ್ಯಕತೆಗೆ ಮತ್ತು ಆಸ್ತಿ ಅಭಿವೃದ್ದಿಗೆ ತನ್ನ ವ್ಯವಸ್ಥಾಪನಾ ಅಧಿಕಾರದಲ್ಲಿ ಮಾರಾಟಮಾಡಬಹುದು, ಅಂತಹ ಮಾರಾಟ ಎಲ್ಲಾ ಅವಿಭಕ್ತ ಕುಟುಂಬದ ಮೇಜರ್ ಮತ್ತು ಮೈನರ್ ಸದಸ್ಯರಿಗೆ ಬಾದಿತವಾಗುತ್ತದೆ.

---

[1] ಎ.ಐ.ಆರ್ 1976 ಎಸ್.ಸಿ 835

ಇಂತಹ ವಿಶೇಷ ಅಧಿಕಾರದಲ್ಲಿ ಸ್ವತ್ತನ್ನು ಮಾರಾಟ ಅಥವ ಅಡಮಾನಮಾಡಿ ಬಂದ ಹಣದಲ್ಲಿ ಹಿಂದಿನ ಸಾಲವನ್ನು (ಅನೈತಿಕತೆಯ ನಂಟಿಲ್ಲದ ಸಾಲ) ತೀರಿಸಬಹುದು. ಇಂತಹ ವ್ಯವಸ್ಥಾಪನಾ ಹಕ್ಕಿನ ಬಗ್ಗೆ ಮದ್ಯೆ ಪ್ರವೇಶಿಸುವ ಹಕ್ಕು ಕೋಪಾರ್ಸನರ್ಗೆ ಇಲ್ಲ, ಆತ ಅಂತಹ ವ್ಯವಸ್ಥಾಪನೆಯಲ್ಲಿ ಆದ ವರ್ಗಾವಣೆಯನ್ನು ಪ್ರಶ್ನಿಸಬಹುದು.[1] ತಂದೆಯ ಸಾಲವನ್ನು ತೀರಿಸುವುದು ಹಿಂದು ಕಾನೂನಿನಲ್ಲಿ ಮಗನ ಧಾರ್ಮಿಕ ಕರ್ತವ್ಯವಾಗಿರುವಾಗ ಅಂತಹ ಸಾಲ ತೀರುವಳಿಗೂ ಸದರಿ ಆಸ್ತಿಯನ್ನು ಮಾರಾಟ ಮಾಡಬಹುದಾಗಿರುತ್ತದೆ. ಆದರೆ ಈ ಬಗ್ಗೆ 2005 ರಲ್ಲಿ ಹಿಂದು ಉತ್ತರಾಧಿಕಾರಿತ್ವ ಕಾಯ್ದೆ ತಿದ್ದುಪಡಿಯಾಗಿದ್ದು ಕಲಂ 6(4) ರಂತೆ 09–09–2005 ರಿಂದ ತಂದೆಯು ಯಾವುದೇ ಸಾಲವನ್ನು ಮಾಡಿದ್ದರೂ ಆ ಸಾಲ ವಸೂಲಾತಿಗೆ ಅವನ ಮಗ, ಮೊಮ್ಮಗ ಮುಮ್ಮಗನ ಮೇಲೆ ಕೇಸು ಹಾಕಿ ವಸೂಲಿ ಮಾಡಿಕೊಳ್ಳುವ ಹಕ್ಕನ್ನು ಯಾವ ಕೋರ್ಟ್ ಪರಿಗಣಿಸಬಾರದು ಎಂದು ಕಾನೂನು ರಚಿತವಾಗಿದೆ. 09–09–2005 ರ ಹಿಂದೆ ಕೊಟ್ಟಿರುವ ಸಾಲಗಳನ್ನು ವಸೂಲಿ ಮಾಡಿಕೊಳ್ಳಲು ಅಂತಹ ಆಸ್ತಿ ಮಾರಾಟ ವಗ್ಯೆರೆ ಮಾಡುವುದಕ್ಕೆ ಯಾವ ನಿರ್ಬಂದವೂ ಇರುವುದಿಲ್ಲ. ಇಲ್ಲಿ ಸಾಲದ ವಿಚಾರದಲ್ಲಿ ಮಾತ್ರ ಬದ್ದತೆಯ ವಿಚಾರವನ್ನು ಕಡೆಗಾಣಿಸಲಾಗಿದೆ. ಕುಟುಂಬದ ಹಿಂದಿನ ಸಾಲ ತೀರುವಳಿ ತೋರಿಸಿ ಕರ್ತನು ಆಸ್ತಿಯನ್ನು ಮಾರಲು ಇರುವ ಅಧಿಕಾರವನ್ನು ಕಳೆದುಕೊಳ್ಳುತ್ತಾನೆ.

ತಂದೆ ಮತ್ತು ಮಗನ ನಡುವೆ ಇಬ್ಬರೆ ಕೋಪಾರ್ಸನರ್ ವಿಭಾಗವಾಗಿರುತ್ತದೆ. ಸದರಿ ವಿಭಾಗವಾದ ಮೇಲೆ ಮಗ ತನಗೆ ಬಂದ ಬಾಗದಲ್ಲಿ ತನ್ನ ಮಕ್ಕಳ ಜೊತೆಯಲ್ಲಿ ಕರ್ತನಾಗುತ್ತಾನೆ. ಅದೇ ವಿಭಾಗವಾದ ತಂದೆ ಮತ್ತು ಮಗ ವಿಭಾಗದ ನಂತರವೂ ಒಂದು

---

[1] ಸುಶಿಲ್ ಕುಮಾರ್ ವಿರುದ್ದ ರಾಮ್ ಪ್ರಕಾಶ್ ಎ.ಐ.ಆರ್ 1988 ಎಸ್.ಸಿ 576.

ಪಾಲುದಾರಿಕೆ ಸಂಸ್ಥೆಯಲ್ಲಿ ಪಾಲುದಾರರಾಗಿರುತ್ತಾರೆ. ತಂದೆ ತನ್ನ ಪಾಲುದಾರಿಕೆ ಹಿಸ್ಸೆಯನ್ನು ಬಿಟ್ಟು ಸಾಯುತ್ತಾನೆ. ಆಗ ಏಕಮಾತ್ರ ವಾರಸ್ಸು ಮಗ ಆ ಆಸ್ತಿಯನ್ನು ತನ್ನ ಸ್ವಯಾರ್ಜಿತವಾಗಿ ಆರ್ಜಿಸುತ್ತಾನೆ. ಅದು ತನ್ನ ಮಕ್ಕಳ ಜೊತೆಯಲ್ಲಿ ಕರ್ತನಾಗಿ ಆರ್ಜಿಸಿರುವುದು ಆಗುವುದಿಲ್ಲ.[1]

ತಾಯಿ ಹಿಂದು ಕಾನೂನಿನಲ್ಲಿ ಕರ್ತ ಆಗಬಹುದೆ, ಈ ಬಗ್ಗೆ ಕರ್ನಾಟಕ ಹೈಕೋರ್ಟಿನ ಮುಂದೆ ಬಂದಂತಹ ಕೇಸಿನಲ್ಲಿ ತಾಯಿಯನ್ನು ಮತ್ತು ಆಕೆಯ ಹಿರೆ ಮಗನನ್ನು ಕರ್ತ ಅನ್ನುವ ರೀತಿಯಲ್ಲಿ ನೋಡಲಾಗಿದೆ ಅಲ್ಲಿ ಆಕೆ ಮತ್ತು ಆಕೆಯ ಮಗ ಸ್ವತ್ತಿನ ಅನುಕೂಲಕ್ಕಾಗಿ ಮತ್ತು ಕಾನೂನು ಬದ್ದ ಅವಶ್ಯಕತೆಗಾಗಿ ಮಾರಾಟ ಮಾಡಿರುತ್ತಾಳೆ. ಅಲ್ಲಿ ಮಗನಿಗೆ ಐಡ್ಸ್ ಇರುತ್ತದೆ ಅದಕ್ಕಾಗಿ ಸಾಲ ಮಾಡಿರುತ್ತಾನೆ, ಕುಟುಂಬದ ಸಾಲ ಇರುತ್ತದೆ ಅವುಗಳನ್ನು ತೀರಿಸಲು ಮಾರಾಟವಾಗಿರುತ್ತದೆ. ಆದರೆ ಕೇಸಿನಲ್ಲಿ ಆಕೆಯ ಕರ್ತ ಸ್ಥಾನ ನಿರ್ವಿವಾದ ಮತ್ತು ಸಾಲ ಅನೈತಿಕತೆಗೆ ಅನ್ನುವ ವಾದವಿರುವುದಿಲ್ಲ.[2]

ತಂದೆ ಅನುಪಸ್ಥಿತಿಯಲ್ಲಿ, ತಾಯಿಯು ಜಂಟಿ ಕುಟುಂಬದ ಆಸ್ತಿಯಲ್ಲಿ ಪುರುಷ ಮತ್ತು ಸ್ತ್ರೀ ಮೈನರ್ ಆಸಕ್ತಿ ಸೇರಿದಂತೆ ಅಂತಹ ಆಸ್ತಿಯನ್ನು ನಿರ್ವಹಿಸಬಹುದು. [3] ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ ಕಲಂ 12 ರಲ್ಲಿ ಕೋರ್ಟ್ ಗಾರ್ಡಿಯನ್ ನೇಮಕಾತಿಗೆ ಅಧಿಕಾರವಿಲ್ಲ. ತಾಯಿಯು ಕುಟುಂಬ ಆಸ್ತಿ ವ್ಯವಸ್ಥಾಪಕಳಾಗಿ ನೈಸರ್ಗಿಕ ಗಾರ್ಡಿಯನ್ ಆಗಿರುತ್ತಾಳೆ. ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ ಕಲಂ 11 ಆಕರ್ಷಿಸಲ್ಪಡುವುದಿಲ್ಲ, ಮತ್ತು ನ್ಯಾಯಾಲಯದ ಅನುಮತಿಯಿಲ್ಲದೆ ಕುಟುಂಬದ ಅಗತ್ಯತೆಗಾಗಿ ಕಿರಿಯರಿಗೆ ಸೇರಿದ

---

[1] ಎ.ಐ.ಆರ್ 1986 ಎಸ್.ಸಿ 1753

[2] ಛೀಮಾಶಂಕರ್ ವಿರುದ್ದ ಸುರೇಶ್ –ಮನು/ಕೆ.ಎ/0947/2015

[3] ಗಂಗೋಜಿರಾವ್ ವಿರುದ್ದ ಚನ್ನಪ್ಪ – ಮನು/ಕೆ.ಎ/0159/1983

ಆಸ್ತಿಯನ್ನು ಸಿಂದುವಾಗಿ ಪರಭಾರೆ ಮಾಡಬಹುದು. ಶಾಸನಸಭೆಯು ತನ್ನ ಬುದ್ಧಿವಂತಿಕೆಯಲ್ಲಿ 'ಜಾಯಿಂಟ್ ಫ್ಯಾಮಿಲಿ' (ಒಟ್ಟು ಕುಟುಂಬ) ಎಂಬ ಪದವನ್ನು ಕಲಂ 6 ಮತ್ತು 12 ರಲ್ಲಿ ಬಳಸಿದೆ. ಹೀಗಾಗಿ ಇದು ಕೋಪಾರ್ಸನರಿಯಿಂದ (ಸಹ–ಸಮಾನಾದಿಕಾರಿತ್ವ) ಭಿನ್ನವಾಗಿದೆ. ಕಲಂ 6 ರಲ್ಲಿ ಮೈನರ್ ಒಟ್ಟು ಕುಟುಂಬದ ಆಸ್ತಿಯ ಬಗ್ಗೆ ಹೇಳುವಾಗ ಆತನ ಅಥವ ಆಕೆಯ ಅವಿಭಜಿತ ಒಟ್ಟುಕುಟುಂಬದ ಸ್ವತ್ತು ಬರುವುದಿಲ್ಲ ಎಂಬ ಅರ್ಥ ನೀಡಲಾಗಿದ್ದು. ಇಲ್ಲಿ ಒಟ್ಟು ಕುಟುಂಬದಲ್ಲಿ ಅವಳೂ ಸದಸ್ಯಳು ಅನ್ನುವ ಅರ್ಥ ನೀಡಲಾಗಿದೆ. ಕಲಂ 12 ರಲ್ಲಿ ಒಟ್ಟು ಕುಟುಂಬದ ಆಸ್ತಿಯನ್ನು ಕುಟುಂಬದ ವಯಸ್ಕ ಸದಸ್ಯರ ನಿರ್ವಹಣೆಗೆ ಸಂಬಂಧಿಸಿರುತ್ತದೆ. ಜಂಟಿ ಕುಟುಂಬದಲ್ಲಿ ಅದರಲ್ಲಿ ತಾಯಿ, ಮಗ ಮತ್ತು ಅವಿವಾಹಿತ ಹೆಣ್ಣುಮಕ್ಕಳು ಮತ್ತು ಜಂಟಿ ಕುಟುಂಬದ ಆಸ್ತಿ ಎಂಬ ಪದವನ್ನು ಈ ಸ್ತ್ರೀ ಸದಸ್ಯರ ಷೇರುಗಳು ಸೇರಿದಂತೆ ವ್ಯಾಪಕ ಅರ್ಥದಲ್ಲಿ ಬಳಸಲಾಗುತ್ತದೆ. ಹೀಗೆ ತಾಯಿ ತನ್ನ ಮೈನರ್ ಮಕ್ಕಳ ಪರವಾಗಿ ಒಟ್ಟು ಕುಟುಂಬದಲ್ಲಿ ಕರ್ತಳಾಗಬಹುದು ಅದುವೆ ಕೋಪಾರ್ಸನರಿಯಲ್ಲಿ ಆಕೆ ಕರ್ತಳಾಗಲು ಬರುವುದಿಲ್ಲ. ಒಟ್ಟು ಕುಟುಂಬದ ಕರ್ತಳಾದ ತಾಯಿಗೆ ಅದೇ ರೀತಿಯಲ್ಲಿ ಕರ್ತಳ ಹಕ್ಕು ಇರುತ್ತದೆ.

ಹಿಂದೂ ವಿಧವೆ ತನ್ನ ಗಂಡನ ಹಿಂದು ಅವಿಭಕ್ತ ಕುಟುಂಬದ ಕೋಪಾರ್ಸೆನರ್ ಅಲ್ಲ ಮತ್ತು ಆದ್ದರಿಂದ, ಅವಳ ಗಂಡನ ಮರಣದ ನಂತರ ಹಿಂದು ಅವಿಭಕ್ತ ಕುಟುಂಬದ ಕರ್ತ ಆಗಿ ವರ್ತಿಸುವಂತಿಲ್ಲ. ಕರ್ತ ಮತ್ತು ಮ್ಯಾನೇಜರ್ (ವ್ಯವಸ್ಥಾಪಕ) ಅನ್ನು ಒಂದೇ ಅರ್ಥದಲ್ಲಿ ನೋಡಲು ಸಾಧ್ಯವಿಲ್ಲ ಎಂದು ತಿಳಿಯಬಹುದು. "ಮ್ಯಾನೇಜರ್" ಎಂಬ ಅಭಿವ್ಯಕ್ತಿ ಕರ್ತ ದ ವಿಶಿಷ್ಟವಾದ ಪಾತ್ರವನ್ನು ಸೂಚಿಸುತ್ತದೆ ಎಂದು ತಿಳಿಯಬಹುದು. ಕಲ್ಪಿತವಾಗಿ, ಪುರುಷ ವಯಸ್ಕರ ಕೋಪಾರ್ಸೆನರ್ ಮರಣಹೊಂದಿದಲ್ಲಿ ಮತ್ತು ಪುರುಷ ಕೋಪಾರ್ಸೆನರ್ ಉಳಿದಿರದ ಸಂಧರ್ಬದಲ್ಲಿ ಅಥವಾ

ಒಬ್ಬ ಪುರುಷ ಮೈನರ್ ಕೋಪಾರ್ಸೆನರ್ ಇದ್ದಾಗ. ಅಂತಹ ಪರಿಸ್ಥಿತಿಯಲ್ಲಿ ನಿಸ್ಸಂಶಯವಾಗಿ ಹಿಂದು ಅವಿಭಕ್ತ ಕುಟುಂಬದ ಅಂತ್ಯಗೊಳ್ಳುವುದಿಲ್ಲ. ಪುರುಷ ಕೋಪಾರ್ಸೆನರ್ನ ತಾಯಿ ಚಿಕ್ಕವರ ಕಾನೂನುಬದ್ಧ ರಕ್ಷಕಳಾಗಿ ವರ್ತಿಸಬಹುದು ಮತ್ತು ಅವರ (ಮೈನರ್ಸ್) ಕಾನೂನು ಪಾಲಕಳಾಗಿ ತನ್ನ ಸಾಮರ್ಥ್ಯದಲ್ಲಿ ಕರ್ತ ಪಾತ್ರವನ್ನು ನೋಡಿಕೊಳ್ಳಬಹುದು. .. 2005 ರಲ್ಲಿ ಹಿಂದೂ ಉತ್ತರಾಧಿಕಾರ ಕಾಯಿದೆಯನ್ನು ತಿದ್ದುಪಡಿ ಮಾಡಿದ ನಂತರವೂ ವಿಷಾದನೀಯವಾಗಿ ಸ್ಥಾನ ಬದಲಾಗದೆ ಉಳಿಯುತ್ತದೆ.[1]

ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ 1956 ಕಾಯ್ದೆ ಕಲಂ 8 ರ ಅಡಿಯಲ್ಲಿ ಹಿಂದು ಮೈನರ್ ಮಕ್ಕಳ ಆಸ್ತಿಯಲ್ಲಿ ನೈಸರ್ಗಿಕ ಗಾರ್ಡಿಯನ್ ಆಗಿದ್ದರೆ, ಅವರು ಯಾವುದೇ ಸ್ಥಿರ ಆಸ್ತಿಯನ್ನು ವರ್ಗಾಯಿಸುವ ಮೊದಲು, ನ್ಯಾಯಾಲಯದ ಅನುಮತಿಯನ್ನು ಪಡೆಯಬೇಕು. ಆದರೆ ಜಂಟಿ ಕುಟುಂಬದ ಆಸ್ತಿಯಲ್ಲಿ ಮೈನರ್ ಅವಿಭಜಿತ ಆಸಕ್ತಿಗೆ ನೈಸರ್ಗಿಕ ಗಾರ್ಡಿಯನ್ ಇರಬೇಕಾದ ಅವಶ್ಯಕತೆ ಇಲ್ಲ. ಕಾಯ್ದೆಯ 6 ಮತ್ತು 12 ನೇ ಕಲಂ ಅಡಿಯಲ್ಲಿ ಒದಗಿಸಿದಂತೆ, ಜಂಟಿ ಕುಟುಂಬದ ಆಸ್ತಿಯಲ್ಲಿ ಮೈನರ್ ವಿಭಜಿತ ಆಸಕ್ತಿಯ ವರ್ಗಾಯಿಸಲು ಹಿಂದಿನ ಅನುಮತಿ ಅಗತ್ಯವಿಲ್ಲ."[2]

ಮೈನರ್ ಆಸ್ತಿ ವಿಚಾರವಾಗಿ ಮೈನರ್ನ ನೈಸರ್ಗಿಕ ಗಾರ್ಡಿಯನ್ ಆಗಿ ಹುಡುಗ ಮತ್ತು ಮದುವೆಯಾಗದ ಹುಡುಗಿಯ ವಿಚಾರವಾಗಿ ಮೊದಲಿಗೆ ತಂದೆ ತಂದೆಯ ನಂತರ ತಾಯಿ. ಐದು ವರ್ಷದ ಒಳಗಿನ ಮಗುವಿನ ಸುಬರ್ದು ತಾಯಿಯಲ್ಲಿ ಮಾತ್ರ. ಅನೈತಿಕವಾಗಿ ಹುಟ್ಟಿದ ಹುಡುಗ ಅಥವ ಹುಡುಗಿಯ ಗಾರ್ಡಿಯನ್ ಮೊದಲಿಗೆ ತಾಯಿ ಆಕೆಯ ನಂತರ ತಂದೆ. ಮದುವೆಯಾದ ಮೈನರ್ ಹುಡುಗಿಯ ಗಾರ್ಡಿಯನ್

---

[1] ಶ್ರೇಯಾ ವಿದ್ಯಾರ್ಥಿ ವಿರುದ್ಧ ಅಶೋಕ್ ವಿದ್ಯಾರ್ಥಿ – ಎ.ಐ.ಆರ್ 2016 ಎಸ್.ಸಿ 139

[2] ನಾರಾಯಣ್ ಬಾಲ್ ವಿರುದ್ಧ ಶ್ರೀಧರ್ – 1996(1) ಎಸ್.ಸಿ.ಆರ್ 999.

ಗಂಡನಾಗುತ್ತಾನೆ. ಒಬ್ಬ ವ್ಯಕ್ತಿ ಹಿಂದು ಆಗಿರುವವ ಮತಾಂತರವಾದರೆ, ವಾನಪ್ರಸ್ತಾಶ್ರಮಕ್ಕೆ ಸೇರಿದರೆ, ಸನ್ಯಾಸಿ ಅಥವ ಯತಿ ಆದರೆ ನೈಸರ್ಗಿಕ ಮೈನರ್ ಗಾರ್ಡಿಯನ್ ಆಗಲು ಬರುವುದಿಲ್ಲ. ತಂದೆ ಮತ್ತು ತಾಯಿ ಪದಾರ್ಥದಲ್ಲಿ ಮಲತಂದೆ ಮಲತಾಯಿ ಬರುವುದಿಲ್ಲ.[1] ಕಾರ್ಯತಹ ಗಾರ್ಡಿಯನ್ ಆಗಿರುವವರು ಕಾಯ್ದೆ ಪ್ರಾರಂಬದ ನಂತರ ಮೈನರ್ ಆಸ್ತಿಯನ್ನು ಇತ್ಯರ್ಥ ಮಾಡಲಾಗಲೀ ವ್ಯವಹರಿಸುವುದಾಗಲೀ ಬರುವುದಿಲ್ಲ.[2] ಮೈನರ್ ಸಹೋದರಿ ಕಾರ್ಯತಹ ಗಾರ್ಡಿಯನ್ ಆಗುತ್ತಾಳೆ ಹೊರತು ಆಕೆ ಕಲಂ 6 ರಲ್ಲಿ ನೈಸರ್ಗಿಕ ಗಾರ್ಡಿಯನ್ ಅಲ್ಲ. ಕಲಂ 11 ರಲ್ಲಿ ಕಾರ್ಯತಹ ಗಾರ್ಡಿಯನ್ ಮೈನರ್ನ ಎಲ್ಲಾ ರೀತಿಯ ಆಸ್ತಿಗಳನ್ನು ಇತ್ಯರ್ಥ ಮಾಡಲಾಗಲೀ ವ್ಯವಹರಿಸುವುದಾಗಲೀ ಬರುವುದಿಲ್ಲ. ಇಲ್ಲಿ ಒಟ್ಟು ಕುಟುಂಬ ಆಸ್ತಿಗಳಿಗೆ ವಿನಾಯ್ತಿ ಇಲ್ಲ.[3]

ಮುಲ್ಲಾ ರವರ ಪ್ರಿನ್ಸಿಪಲ್ಸ್ ಆಫ್ ಹಿಂದು ಲಾ 12 ನೇ ಆವೃತ್ತಿ 354 ನೇ ಪೇಜಿನಲ್ಲಿ ಹಿಂದು ಕುಟುಂಬದ ವ್ಯವಸ್ಥಾಪಕನ ಅಧಿಕಾರದ ಬಗ್ಗೆ ಹೀಗೆಂದಿದ್ದಾರೆ "ಯಾವುದೇ ವ್ಯಕ್ತಿಯ ಸದಸ್ಯನಿಗೆ ಕುಟುಂಬದ ಆಸ್ತಿಯ ಭಾಗವನ್ನು ಅದರ ಆದಾಯದಿಂದ ಪೋಷಿಸಿಕೊಳ್ಳುವುದಕ್ಕೆ ಅನುವು ಮಾಡಿಕೊಡುವ ವ್ಯವಸ್ಥಾಪಕನಿಗೆ ಇದು ಸಮರ್ಥವಾಗಿರುತ್ತದೆ. ಆತನ ಉಳಿತಾಯದ ಆದಾಯ ಮತ್ತು ಹೂಡಿಕೆಯಿಂದ ಯಾವುದೇ ಉಳಿತಾಯವು ಸದಸ್ಯರ ಪ್ರತ್ಯೇಕ ಆಸ್ತಿಯಾಗಿರುತ್ತದೆ."[4]

ಕರ್ತನು ಎಲ್ಲಿ ರುಜುವಾತುಪಡಿಸಲು ಬಾದ್ಯನಿರುತ್ತಾನೆ, "ಯಾವುದೇ ಸ್ಥಿರ ಆಸ್ತಿ ತನ್ನದೇ ಆದ ಪ್ರತ್ಯೇಕ ನಿಧಿಗಳೊಂದಿಗೆ

---

[1] ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ 1956 ಕಾಯ್ದೆ ಕಲಂ 6

[2] ಹಿಂದು ಮೈನಾರಿಟಿ ಮತ್ತು ಗಾರ್ಡಿಯನ್ಶಿಪ್ 1956 ಕಾಯ್ದೆ ಕಲಂ 11

[3] ಗಾನಯ್ಯ ವಿರುದ್ದ ರಾಧಬಾಯಿ 1997(11) ಎಸ್.ಸಿ.ಸಿ 332.

[4] ವೆಂಕಟಸುಬ್ರಮಣಿ ಅಯ್ಯರ್ ವಿ. ಈಶ್ವರ ಐಯರ್ – ಎ.ಐ.ಆರ್ 1966 ಮದ್ರಾಸ್ 266

ಸ್ವಾಧೀನಪಡಿಸಿಕೊಂಡಿದ್ದರೆ ಮತ್ತು ಜಂಟಿ ಕುಟುಂಬದ ನಿಧಿಯ ಸಹಾಯದಿಂದ ಅಲ್ಲವಾದರೆ, ಅವರು ಹೊಂದಿರುವ ಮತ್ತು ಆ ಆಸ್ತಿಯ ಸಹಾಯದಿಂದ ಮಾಡಿಲ್ಲ ಎಂದು ನಿರ್ವಾಹಕನು (ಕರ್ತ) ಎಲ್ಲಿ ಹೇಳುತ್ತಾನೆ, ತನ್ನ ಪ್ರತ್ಯೇಕ ನಿಧಿಯಿಂದ ಖರೀದಿಸಿದಕ್ಕೆ ಸದರಿ ಹಣವು ಹರಿಯಿತು ಎಂದು ಅವರು ಮನವಿ ಮಾಡುತ್ತಾರೆ, ಅದು ಸ್ಪಷ್ಟ ಮತ್ತು ತೃಪ್ತಿಕರವಾದ ಪುರಾವೆಗಳ ಮೂಲಕ ಅದನ್ನು ಸಾಬೀತುಪಡಿಸುವುದು. ಪುರಾವೆಗಳ ಜವಾಬ್ದಾರಿ ಅಂತಹ ಸಂದರ್ಭದಲ್ಲಿ ವ್ಯವಸ್ಥಾಪಕರ ಮೇಲೆ ಇರಬೇಕು ಮತ್ತು ಅದು ಕೋಪಾರ್ಸನರ್ಗಳ ಮೇಲೆ ಇರಬಾರದು"[1]

## ದತ್ತು ಮಗ, ಸಾಕು ಮಗ, ಆಸ್ತಿ ಹಕ್ಕುಗಳು

ಸಾಮಾನ್ಯ ಮಾತಿನ ಅರ್ಥದಲ್ಲಿ "ಮಗ" ಎಂದರೆ ಮದುವೆಯ ನಂತರ ಒಬ್ಬ ವ್ಯಕ್ತಿಗೆ ಹುಟ್ಟಿದ ನೈಸರ್ಗಿಕ ಮಗ. ಇದು ನೇರ ರಕ್ತ ಸಂಬಂಧ, ಇದು "ಮಗ (ಪುತ್ರ)" ಸಾಮಾನ್ಯವಾಗಿ ಅರ್ಥೈಸಿಕೊಳ್ಳುವ ಪದದ ಸಾರ, ಧರ್ಮಸಂತಾನತೆಗೆ ಒತ್ತು ನೀಡುತ್ತದೆ. ಕಾನೂನು ಮಾತಿನಲ್ಲಿ ಹೇಳುವುದಾದರೆ, "ಮಗ" ಸ್ವಲ್ಪ ವಿಸ್ತಾರವಾದ ಅರ್ಥವನ್ನು ಹೊಂದಿದೆ. ಇದು ನೈಸರ್ಗಿಕ ಮಗನಲ್ಲದೆ, ಮಗನ ಮಗನಾಗಬಹುದು, ಅವುಗಳೆಂದರೆ ಮೊಮ್ಮಗ, ಮತ್ತು ವೈಯಕ್ತಿಕ ಕಾನೂನು ದತ್ತು ಸ್ವೀಕಾರಕ್ಕೆ ಅನುಮತಿ ನೀಡುವಲ್ಲಿ, ಇದು ದತ್ತುಪುತ್ರನನ್ನು ಸಹ ಒಳಗೊಂಡಿದೆ. ಜನರಲ್ ಕ್ಲಾಸಸ್ ಆಕ್ಟ್ನ ವಿಭಾಗ 3 (57) "ಮಗನನ್ನು" ಈ ಕೆಳಗಿನಂತೆ ವ್ಯಾಖ್ಯಾನಿಸುತ್ತದೆ "ಅವರ ವೈಯಕ್ತಿಕ ಕಾನೂನಿನ ಮಿತಿಯಲ್ಲಿ ಅನುಮತಿಸುವವರಲ್ಲಿ ಒಬ್ಬ ಮಗ, ದತ್ತುಪುತ್ರನನ್ನು ಒಳಗೊಂಡಿರಬೇಕು."

---

[1] ಮಲ್ಲೇಸಪ್ಪ ವಿ. ದೇಸಾಯ್ – ಎ.ಐ.ಆರ್ 1961 ಎಸ್.ಸಿ 1268

ಭಾರತೀಯ ಉತ್ತರಾಧಿಕಾರಿತ್ವ ಕಾಯ್ದೆ ಹಿಂದುಗಳಿಗೆ ಅನ್ವಯಿಸುವ ವಿಲ್ ಕಾನೂನು ಅಂಶಗಳಲ್ಲಿ ಷೆಡ್ಯೂಲ್ 3 ರಲ್ಲಿ ಕೆಲವು ಸೆಕ್ಷನ್ ನಲ್ಲಿನ ವ್ಯಾಖ್ಯಾನಕ್ಕೆ ಮಕ್ಕಳು ಎಂದರೆ ದತ್ತು ಮಕ್ಕಳು ಸೇರಿರುತ್ತಾರೆ ಎಂದಿರುತ್ತಾರೆ. ಇಲ್ಲಿ ಎಲ್ಲಿಯೂ ಸಾಕು ಮಕ್ಕಳನ್ನು ಸೇರಿಸಿರುವುದಿಲ್ಲ.

ಸಾಕು ಮಗ ಒಬ್ಬ ಮಗನಾಗಿದ್ದು ಆತ ನಿಜವಾದ ಮಗನಲ್ಲ ಅಥವ ಮದುವೆಯ ನಂತರ ಒಬ್ಬ ವ್ಯಕ್ತಿಯ ನೇರ ವಂಶಸ್ಥ ಎಂದು ಹೇಳಲು ಬರುವುದಿಲ್ಲ. ಆತನನ್ನು ಮಗನಂತೆ ಸಾಕಿದ್ದರೆ ಆತ ಕುಟುಂಬದ ಸದಸ್ಯನಾಗುತ್ತಾನೆ.[1] ಇಲ್ಲಿ ಕೋಪಾರ್ಸನರ್ ಆಗುವುದಾಗಿ ಹೇಳಿಲ್ಲ. ಕುಟುಂಬದ ಸದಸ್ಯನಿಗೂ ಕೋಪಾರ್ಸನರ್ಗೂ ವ್ಯತ್ಯಾಸವಿದೆ. ದತ್ತು ಪುತ್ರ ಕೋಪಾರ್ಸನರ್ ಆಗುತ್ತಾನೆ. ಇದೇ ಕೇಸಿನಲ್ಲಿ ಮುಂದುವರಿದು ಆಕ್ಸಫರ್ಡ್ ನಿಘಂಟುವಿನಿನ "ಫ್ಲಾಸ್ಟರ್ ಸನ್" (ಸಾಕು ಮಗ ಅರ್ಥವನ್ನು ಹೀಗೆ ಉಲ್ಲೇಕಿಸಿದ್ದಾರೆ. "ಜನ್ಮದಿಂದ ಮಗನಾಗಿಲ್ಲದಿದ್ದರೂ ಮಗನಾಗಿ ಬೆಳೆದವನು". ಅದೇ ಶಬ್ದಕೋಶದಲ್ಲಿ "ಫಾಸ್ಟರ್" ಎಂಬ ಪದವು ಆಹಾರದೊಂದಿಗೆ ಸರಬರಾಜು ಮಾಡಲು ಸೂಚಿಸುತ್ತದೆ; ಪೋಷಿಸಲು, ಆಹಾರ, ಬೆಂಬಲ; ಪೋಷಕರ ಆರೈಕೆಯನ್ನು ತರಲು; ಆರೈಕೆಮಾಡಲು, ಬೆಳೆಯಲು ಕಾಳಜಿ ವಹಿಸುತ್ತದೆ." ಎಂಬ ಅರ್ಥ ಕೊಡಲಾಗಿದೆ. ಕೋರ್ಟ್ ಹೇಳಿದಂತೆ ಈ ವ್ಯಾಖ್ಯಾನಗಳು ""ಫಾಸ್ಟರ್ ಚೈಲ್ಡ್" (ಸಾಕುಮಗ) ಆತನನ್ನು ಕರೆತರುವ ವ್ಯಕ್ತಿಯ ನಿಜವಾದ ಕಾನೂನುಬದ್ಧ ಮಗುವಲ್ಲ. ಅವನು ಮುಖ್ಯವಾಗಿ ಇನ್ನೊಬ್ಬ ವ್ಯಕ್ತಿಯ ಮಗುವಾಗಿದ್ದಾನೆ ಆದರೆ ತನ್ನ ಮಗನಂತೆ ಇನ್ನೊಬ್ಬ ವ್ಯಕ್ತಿಯಿಂದ ಆರೈಕೆಪಡೆಯುತ್ತಾನೆ, ಪೋಷಿಸಲ್ಪಡುತ್ತಾನೆ ಮತ್ತು ಬೆಳೆಯುತ್ತಾನೆ."

[1] ಕೆ.ವಿ.ಮುತ್ತು ವಿ. ಅಂಗಮುತ್ತು ಅಮ್ಮಾಳ್ – ಎ.ಐ.ಆರ್ 1997 ಎಸ್.ಸಿ 628

ಸುಪ್ರೀಂ ಕೋರ್ಟ್ ಹೇಳಿದಂತೆ[1] "ಆಧ್ಯಾತ್ಮಿಕ ಕಾರಣಗಳಿಗಾಗಿ ಮಗನನ್ನು ಬದಲಿಸುವುದು ದತ್ತುಮಾಡುವ ಮೂಲತತ್ವವಾಗಿದೆ, ಮತ್ತು ಅದರ ನಂತರದ ಆಸ್ತಿಯ ವಿತರಣೆಗೆ ಇದು ಕೇವಲ ಸಹಕಾರಿಯಾಗಿದೆ; ತಾತ್ಕಾಲಿಕ ಪರಿಗಣನೆಗಳ ಬದಲಾಗಿ ಆಧ್ಯಾತ್ಮದಿಂದ ನಿರ್ಣಯದ ಸಿಂಧುತ್ವವು ನಿರ್ಣಯಿಸಬೇಕಾಗಿದೆ; ಮತ್ತು, ಆಸ್ತಿಯ ವಿತರಣೆಯು ದ್ವಿತೀಯಕ ಪ್ರಾಮುಖ್ಯತೆಯನ್ನು ಮಾತ್ರ ಹೊಂದಿದೆ.

ಉತ್ತರಾಧಿಕಾರದ ಕ್ರಮವನ್ನು ಬದಲಿಸುವಲ್ಲಿ ದತ್ತು ಸ್ವೀಕಾರದ ಫಲಿತಾಂಶದಲ್ಲಿ, ಅವರ ಹೆಂಡತಿ ಮತ್ತು ಹೆಣ್ಣುಮಕ್ಕಳ ಹಕ್ಕುಗಳ ವಂಚಿತಗೊಳಿಸುತ್ತದೆ ಮತ್ತು ಆಸ್ತಿಗಳನ್ನು ತುಲನಾತ್ಮಕ ಅಪರಿಚಿತರಿಗೆ ಅಥವಾ ಹೆಚ್ಚು ದೂರಸ್ಥ ಸಂಬಂಧಗಳಿಗೆ ವರ್ಗಾವಣೆ ಮಾಡುವುದು.[2]

ಒಂದು ದಾವೆಯಲ್ಲಿನ ಲಿಖಿತ ಹೇಳಿಕೆಯಲ್ಲಿ ಸಾಕು ಮಗ ಎನ್ನುತ್ತಾನೆ, ಅಲ್ಲಿನ ಒಂದು ಕ್ರಯಪತ್ರದಲ್ಲೂ ಹಾಗೆ ಇರುತ್ತದೆ, ಬಹಳ ವಿಳಂಬವಾಗಿ ದತ್ತು ಮಗ ಎನ್ನಲಾಗದು, ಸಾಕುಮಗ ಸಾಕು ತಂದೆಯ/ತಾಯಿಯ ಆಸ್ತಿಯಲ್ಲಿ ಹಕ್ಕು ಸ್ಥಾಪಿಸಲಾಗದಾದ್ದರಿಂದ, ದಾವೆ ಸ್ವತ್ತುಗಳಲ್ಲಿ ಹಕ್ಕು ಇಲ್ಲ.[3]

ದತ್ತು ಸ್ವೀಕಾರವಾದ ಪುತ್ರನು ತನ್ನ ದತ್ತು ತಂದೆಯ ಕೋಪಾರ್ಸನರಿಯಲ್ಲಿ ಕೋಪಾರ್ಸನರ್ ಆಗುತ್ತಾನೆ.[4] ಕಲಂ 12 ಹಿಂದು ದತ್ತಕ ಮತ್ತು ಪೋಷಣಾ ಕಾಯ್ದೆ 1956 ರಲ್ಲಿ ದತ್ತು ಸ್ವೀಕಾರದ ಪರಿಣಾಮ ವಿವರಿಸಿದ್ದಾರೆ. ದತ್ತು ಸ್ವೀಕಾರ ದಿನಾಂಕದಿಂದ ಎಲ್ಲಾ ಉದ್ದೇಶಗಳಿಗೂ ಮಗನಾಗುತ್ತಾನೆ (ಅಥವ ಮಗಳು) ದತ್ತು ಸ್ವೀಕಾರಕ್ಕೆ ಮುಂಚೆ ಯಾವುದೇ

---

[1] ವಿ.ಟಿ.ಎಸ್. ಚಂದ್ರಶೇಖರ ಎಂ. ವಿ. ಕುಲಾಂಡೀವೆಲು ಎಂ. – ಎಐಆರ್ 1963 ಎಸ್ಸಿ 185

[2] ಕಿಶೋರಿ ಲಾಲ್ ವಿ. ಚಾಲ್ತಿಬಾಯಿ –ಎ.ಐ.ಆರ್ 1959 ಎಸ್.ಸಿ 504

[3] ನಾರಾಯಣಪ್ಪ ವಿ. ರಾಮಕ್ಕ – ಮನು/ಕೆ.ಎ/0266/2016

[4] ಎಸ್.ಟಿ.ಐ ವಿ. ಘಮಂಡಿ ರಾಮ್ – ಎ.ಐ.ಆರ್ 1969 ಎಸ್.ಸಿ 1333

ಆಸ್ತಿ ಆತ ಆರ್ಜಿಸಿದ್ದರೆ ಅದು ಯತಾ ಇರುವ ಹೊಣೆಗಾರಿಕೆಯೊಂದಿಗೆ ಮುಂದುವರಿಯುತ್ತೆ. ದತ್ತು ಸ್ವೀಕಾರಕ್ಕೆ ಮುಂಚೆ ಯಾರೇ ವ್ಯಕ್ತಿಯಲ್ಲಿ ಆಸ್ತಿ ಪ್ರಾಪ್ತವಾಗಿದ್ದರೆ ಅದನ್ನು ದತ್ತು ಪುತ್ರ ತಪ್ಪಿಸಲಾಗದು. ವಿಧವೆ ದತ್ತು ಸ್ವೀಕಾರ ಮಾಡಿದರೆ ತಂದೆಯ ಸತ್ತ ದಿನಾಂಕದಿಂದ ದತ್ತು ಮಗನಾಗುತ್ತಾನೆ ಎಂದು ಹಿಂದು ಕಾನೂನು ಹೇಳುತ್ತದೆ. ಆದರೆ ಈ ಬಗ್ಗೆ ಹಲವಾರು ತೀರ್ಪುಗಳನ್ನು ಅವಲೋಕಿಸಿದ ಸುಪ್ರೀಮ್ ಕೋರ್ಟ್ ಆರು ಸಿದ್ಧಾಂತಗಳನ್ನು ಹೊರಹಾಕಿದೆ.[1]

"1. ಒಂದು ವಿಧವೆ ದತ್ತು ಪಡೆಯುವುದರಿಂದ ಜಂಟಿ ಕುಟುಂಬದ ಈ ಹಿಂದಿನ ವಿಭಜನೆಯನ್ನು ಅನೂರ್ಜಿತಗೊಳಿಸಲಾಗದು ಮತ್ತು ದತ್ತುಪಡೆದ ಮಗನು ಹುಟ್ಟಿದವನಾಗಿ ಮತ್ತು ಬದುಕಿದ್ದ ತಂದೆ ತನ್ನ ಕೊನೆಯ ಉಸಿರು ಉರುಳಿಸಿದಾಗ ಜೀವಂತವಾಗಿದ್ದ ನೆಂದು ಹೇಳಬಹುದು, ದತ್ತಕ ಮಗನು ಬಾಗಾಂಶ ಕೇಳಬಹುದು.

2. ಅದೇನೆ ಇದ್ದರೂ, ವಿಭಜನೆಯ ಅಂಶವನ್ನು ನಂತರ ದತ್ತಕ ಅಳವಡಿಸಿಕೊಳ್ಳುವ ಮೂಲಕ ಅಳಿಸಿಹಾಕಲಾಗುವುದಿಲ್ಲ,

3. ದತ್ತು ಅಳವಡಿಸಿಕೊಳ್ಳುವುದಕ್ಕೆ ಮುಂಚೆ ಕಾನೂನುಬದ್ಧವಾಗಿ ಪೂರ್ವಭಾವಿಯಾಗಿ ಮಾಡಿದ ಯಾವುದೇ ಪುರಾವೆಯ ಇತ್ಯರ್ಥ (ಟೆಸ್ಟಮೆಂಟರಿ ಡಿಸ್ಪೊಸಿಷನ್ = ವಿಲ್) ಅಥವಾ ಜೀವಿತಾವದಿಯ ವರ್ಗಾವಣೆ/ ದಾನ ಇತ್ಯಾದ್ (ಇಂಟರ್ ವೈವಸ್) ಅದು ದತ್ತು ಪುತ್ರರಿಂದ ಸವಾಲು ಮಾಡಲಾಗದು.

4. ನ್ಯಾಯಸಮ್ಮತವಾದ ಪರಭಾರೆ, ಈ ಸನ್ನಿವೇಶದಲ್ಲಿ, ಕುಟುಂಬದ ಅಗತ್ಯತೆಗೆ ಅಗತ್ಯವಾಗಿಲ್ಲವೆಂದು ಅರ್ಥ ಆದರೆ ಕಾನೂನಿಗೆ ಅನುಗುಣವಾಗಿ ಪರಭಾರೆ ಮಾಡಲ್ಪಟ್ಟಿದೆ ಎಂಬರ್ಥ.

---

[1] ಶ್ರೀಪಾದ್ ಜಿ.ಎಸ್ ವಿ. ದತ್ತಾರಾಮ್ ಕೆ.ಎಸ್ – ಎ.ಐ.ಆರ್ 1974 ಎಸ್.ಸಿ 878

5. ಪರಭಾರೆಯ ಒಂದು ವಿಧವೆಯಲ್ಲಿನ ಶಕ್ತಿಯು ಸೀಮಿತವಾಗಿದೆ ಮತ್ತು ಒಂದು ವೇಳೆ ಹಿಂದೂ ಕಾನೂನಿನ ನಿಯಮಗಳನ್ನು ಪೂರ್ಣಗೊಳಿಸಿದರೆ ಮಾತ್ರ, ಪರಭಾರೆಯು ತರುವಾಯ ದತ್ತು ಪಡೆದ ಮಗನನ್ನು ಬಂಧಿಸುತ್ತದೆ. ...

6. ಒಮ್ಮೆ ವಿಭಜನೆಯಾದ ನಂತರ, ಒಂದು ಮಿತಾಕ್ಶರ ಹಿಂದೂ ಕುಟುಂಬದ ಸದಸ್ಯನೊಬ್ಬನು ತನ್ನ ಮಕ್ಕಳು ಜನ್ಮದಿಂದ ಯಾವುದೇ ಹಕ್ಕನ್ನು ಹೊಂದಿರದಿದ್ದರೆ ಅವನ ಇಚ್ಛೆಯಂತೆ ಮತ್ತು ವರ್ಗಾವಣೆಗಳ ಮೂಲಕ ಅದನ್ನು ವರ್ಗಾಯಿಸಬಹುದು, ಅವರು ವಿಲ್ ನಿಂದ, ಉಡುಗೊರೆ ಅಥವಾ ಮಾರಾಟದಿಂದ, ನಂತರ ದೃಶ್ಯದಲ್ಲಿ ಬರುವ ದತ್ತುಪುತ್ರನನ್ನು ಬಂಧಿಸುತ್ತಾರೆ. ಸಹಜವಾಗಿ, ಅಂತಹ ಪಾಲುದಾರನ ನಿರರ್ಥಕ ಅಥವಾ ಅನೂರ್ಜಿತ ವರ್ಗಾವಣೆಯ ಸ್ಥಾನವು ಪ್ರತ್ಯೇಕ ಹೆಜ್ಜೆಯ ಮೇಲೆ ನಿಲ್ಲುತ್ತದೆ ಆದರೆ ನಾವು ಅದನ್ನು ಇಲ್ಲಿ ಶೋಧಿಸಬೇಕಾಗಿಲ್ಲ."

ಸುಪ್ರೀಮ್ ಕೋರ್ಟಿನ ವಿವರಣೆಯಂತೆ [1] "ಒಂದು ಜಂಟಿ ಕುಟುಂಬಕ್ಕೆ ಜನ್ಮ ಅಥವಾ ದತ್ತು ಮೂಲಕ ಸದಸ್ಯರನ್ನು ಪರಿಚಯಿಸುವುದು ಜಂಟಿ ಕುಟುಂಬದ ಉಳಿದ ಸದಸ್ಯರ ಪಾಲನ್ನು ಕಡಿಮೆ ಮಾಡುವ ಪರಿಣಾಮವನ್ನು ಹೊಂದಿರಬಹುದು, ಆದರೆ ಇದು ಯಾವುದೇ ಆಸ್ತಿಯಲ್ಲಿ ಯಾವುದೇ ವ್ಯಕ್ತಿಯನ್ನು ಪದಚ್ಯುತಗೊಳಿಸುವ ಯಾವುದೇ ಪ್ರಶ್ನೆಯನ್ನು ಒಳಗೊಂಡಿರುವುದಿಲ್ಲ. ಆದರೆ ಜಂಟಿ ಕುಟುಂಬವು ಆಸ್ತಿಯನ್ನು ಹಿಡಿದಿಟ್ಟುಕೊಂಡು, ಮೊದಲಿಗಿಂತಲೂ ಹೆಚ್ಚಿನ ಸದಸ್ಯರೊಂದಿಗೆ ಮುಂದುವರಿಯುತ್ತೆ, ಆಸ್ತಿಯನ್ನ ಯಾವುದೇ ಹೊಸ ವಹಿಸಿಕೊಡುವಿಕೆ ಅಥವ ಪದಚ್ಯುತಗೊಳಿಸುವಿಕೆ ಮಾಡುವುದಿಲ್ಲ. ಒಂದು ಜಂಟಿ ಕುಟುಂಬದ ಸದಸ್ಯನ ಮರಣದ ಮೇಲೆ ಬದುಕುಳಿದಿರುವಿಕೆಯಿಂದ ಉಳಿದಿರುವ

[1] ವಸಂತ್ ವಿ. ದತ್ತು – ಎ.ಐ.ಆರ್ 1987 ಎಸ್.ಸಿ 398

ಸದಸ್ಯರಲ್ಲಿ ನಿಯೋಜಿತವಾಗಿರುವಂತೆ ಪರಿಗಣಿಸಲಾಗದು. ಆಸ್ತಿ, ನಿಸ್ಸಂದೇಹವಾಗಿ, ಬದುಕುಳಿಯುವಿಕೆಯ ಮೂಲಕ ಹಾದುಹೋಗುತ್ತದೆ, ಆದರೆ ಕಾಯ್ದೆಯ ಕಲಂ 12 ರ ಪರಿಕಲ್ಪನೆಯ ಅರ್ಥದಲ್ಲಿ ಯಾವುದೇ ವಹಿಸಿಕೊಡುವಿಕೆ ಅಥವ ಪದಚ್ಯುತಗೊಳಿಸುವಿಕೆ ಪ್ರಶ್ನೆಯಿಲ್ಲ. ಕಲಂ 12 ವ್ಯಾಖ್ಯಾನವು ಜಂಟಿ ಕುಟುಂಬದ ಸದಸ್ಯರ ಮರಣದ ಮೇಲೆ ಬದುಕುಳಿದವರು ಆರ್ಜಿಸಿದ ಪ್ರಕರಣಗಳು ಸೇರಿವೆ ಎಂಬುದಾದರೆ, ಜಂಟಿ ಕುಟುಂಬದ ಸದಸ್ಯನ ವಿಧವೆಗೆ ಯಾವುದೇ ಪ್ರಾಯೋಗಿಕ ದತ್ತು ಪಡೆಯುವ ಪರಿಣಾಮವನ್ನು ನಿರಾಕರಿಸಿದಂತಾಗುವುದು. ಇಂತಹ ಫಲಿತಾಂಶವು ಸಂಸತ್ತಿನ ಅವಲೋಕನದಲ್ಲಿ ಇರಲಿಲ್ಲ. ಆದ್ದರಿಂದ ಸತ್ತ ಕೋಪಾರ್ಸನರ್ ಒಂದು ವಿಧವೆ ದತ್ತು ಮಗುವನ್ನು ಪಡೆದಾಗ ಅಲ್ಲಿ ಕಲಂ 12 ಪ್ರಾವಿಶೋ (ಸಿ) ಜಂಟಿ ಕುಟುಂಬದ ಆಸ್ತಿಗಳಲ್ಲಿ ತನ್ನ ಪಾಲು ಹಕ್ಕು ಕೇಳುವುದಕ್ಕೆ ದತ್ತು ಮಕ್ಕಳನ್ನು ತಡೆಗಟ್ಟುವುದಿಲ್ಲ; ದತ್ತು ಪಡೆದ ಮಗುವಿಗೆ ಪಾಲನ್ನು ನೀಡಿದರೆ, ದತ್ತು ತೆಗೆದುಕೊಳ್ಳುವ ಮೊದಲು ಯಾವುದೇ ವ್ಯಕ್ತಿಗೆ ವಹಿಸಿಕೊಟ್ಟಿರುವ ಯಾವುದೇ ಆಸ್ತಿಯನ್ನು ಆ ವ್ಯಕ್ತಿಯಿಂದ "ಪದಚ್ಯುತಗೊಳಿಸುತ್ತೆ" ಎಂಬ ಪ್ರಶ್ನೆಯಿಲ್ಲ."[1]

ದತ್ತು ಕೊಡುವವರು ಕಲಂ 9 ರ ಪ್ರಕಾರ ತಂದೆ ಅಥವ ತಾಯಿ ಅಥವ ಗಾರ್ಡಿಯನ್ (ರಕ್ಷಕ) ಆಗಿರಬೇಕು. ಇಂತಹ ವ್ಯಕ್ತಿಗಳಲ್ಲಿ ಮಲತಾಯಿ ಬರುವುದಿಲ್ಲ ಎಂದು ಸುಪ್ರೀಮ್ ಕೋರ್ಟ್ ತೀರ್ಪಿತ್ತಿದೆ.[2] ದತ್ತು ಸಾಮಾನ್ಯ ಮತ್ತು ನೈಸರ್ಗಿಕ ಉತ್ತರಾಧಿಕಾರತ್ವದ ಮಾರ್ಗವನ್ನು ತಿರುಗಿಸುತ್ತದೆ. ಆದ್ದರಿಂದ ಆಸ್ತಿಯ ದುರಾಸೆಯಿಂದ ನಿರ್ಲಜ್ಜ ಅಭ್ಯಾಸಗಳಲ್ಲಿ ಪಾಲ್ಗೊಳ್ಳುವ ಸಂಚು ರೂಪಿಸುವವರಿಂದ ಕಬಳಿಕೆಗೆ ಒಳಗಾಗುವುದನ್ನು ತಡೆಯಲು ನ್ಯಾಯಾಲಯವು ಎಚ್ಚರವಾಗಿರಬೇಕು

---

[1] ಗೋಪಾಲಯ್ಯ ವಿ. ಉಷಾ – ಎ.ಐ.ಆರ್ 2002 ಕರ್ನಾಟಕ 73 ಇಲ್ಲಿ ಉಲ್ಲೇಕಿತ

[2] ಧನ್ರಾಜ್ ವಿ. ಸೂರಜ್ ಬಾಯ್ – ಎ.ಐ.ಆರ್ 1975 ಎಸ್.ಸಿ 1103

ಮತ್ತು ಜಾಗರೂಕವಾಗಿರಬೇಕು. ಸಂದೇಹಾಸ್ಪದ ಸಂದರ್ಭಗಳಲ್ಲಿ ಯಾವುದಾದರೂ ಸಂಶಯಾಸ್ಪದ ಪರಿಸ್ಥಿತಿ ಇದ್ದಲ್ಲಿ, ಅನುಮಾನದ ಮೇಘವನ್ನು ಹೊರಹಾಕಲು ಹೇಗೆ ವಿಲ್ ನ ಪ್ರವರ್ತಕನು ನಿರ್ಬಂಧಿಸಲ್ಪಟ್ಟಿರುವಂತೆ, ಅದೇ ರೀತಿ ಸಮಂಜಸವಾದ ಅನುಮಾನಕ್ಕೆ ಮೀರಿ ಅದನ್ನು ನಿವಾರಿಸಲು ದತ್ತು ಪಡೆದಿರುವುದಾಗಿ ಪ್ರತಿಪಾದಿಸುವವನು ರುಜುವಾತು ಪಡಿಸಬೇಕು. ಮೌಖಿಕ ಸಾಕ್ಷ್ಯದ ಆಧಾರದ ಮೇಲೆ ದತ್ತು ಹಕ್ಕು ಪಡೆಯಲೆತ್ನಿಸುವವರು ಮತ್ತು ಒಂದು ನೋಂದಾಯಿತ ದಾಖಲೆ ಅಥವಾ ಮುಕ್ತಾಯಗೊಳಿಸುವ ಸ್ವಭಾವದ ಯಾವುದೇ ಇತರ ಸಾಕ್ಷ್ಯಾಧಾರಗಳಿಂದ ಬೆಂಬಲಿತವಾಗಿಲ್ಲವಾದಲ್ಲಿ, ಅನುಮಾನಾಸ್ಪದ ಸಂದರ್ಭಗಳು ಅಸ್ತಿತ್ವದಲ್ಲಿದ್ದರೆ, ಅಂತಹ ಸಂಧರ್ಬಗಳಲ್ಲಿ ದತ್ತು ಇತ್ತು ಎಂದು ವಾದಿಸಿದ ಪಾರ್ಟಿಗಳು ನ್ಯಾಯಾಲಯದ ಮನಸ್ಸಾಕ್ಷಿಯ ತೃಪ್ತಿಗೆ ವಿವರಿಸಬೇಕು."[1]

ಸಿಂದುವಾಗಿ ದತ್ತು ನೀಡುವದರಲ್ಲಿ ದೈಹಿಕ ಕ್ರಿಯೆಯಲ್ಲಿ ಕೊಡುವ ಮತ್ತು ತೆಗೆದುಕೊಳ್ಳುವ ಅಗತ್ಯತೆ ಅತ್ಯಗತ್ಯ, ಜಾತಿ ಯಾವುದಾದರೂ ಒಂದು ಸಮಾರಂಭವು ಎಲ್ಲಾ ದತ್ತಕಗಳಲ್ಲಿ ಕಡ್ಡಾಯ. ಮತ್ತು ಒಪ್ಪಿಗೆಯ ಭಾವ ಅಥವಾ ಅಳವಡಿಸಿಕೊಂಡಿರುವ ಒಂದು ಕಾರ್ಯರೂಪದ ಪತ್ರ ಇದ್ದರೂ ಸಹ, ಇಂತಹ ಅವಶ್ಯಕತೆಯು ಮೂಲತೆಯಲ್ಲಿ ತೃಪ್ತರಾಗಿ ನಿಜವಾದ ಕೊಡುವಿಕೆಯಿಂದ ಮತ್ತು ಅದರ ಬಾಲಕನನ್ನು ಒಪ್ಪಿಗೆಯಾಗಿ ಪಡೆಯುವಿಕೆಯಿಂದ ಮಾತ್ರ ಅಸ್ತಿತ್ವವಿದೆ. ಕೆಲವು ಸಂದರ್ಭಗಳಲ್ಲಿ ದತ್ತು ಪೂರ್ಣಗೊಳಿಸಲು "ದತ್ತಕ ಹೋಮ" ಅವಶ್ಯಕವೆಂದು ಪರಿಗಣಿಸಲಾಗುತ್ತದೆ ಆದರೆ ಎರಡು ಬಾರಿ ಜನಿಸಿದವರಲ್ಲಿ (ಹಿಂದುಗಳಲ್ಲಿ ಮೊದಲನೇ ಬಾರಿ ಜನನ ತಾಯಿಯ ಹೊಟ್ಟೆಯಲ್ಲಾಗುತ್ತದೆ, ಎರಡನೇ ಬಾರಿ ಜನನ ವಿಧ್ಯಾಬ್ಯಾಸಕ್ಕೆ ತೆರಳುವಾಗ ಉಪನಯನದಿಂದ ಆಗುತ್ತೆ-

---

[1] ರಹಸ ಪಂಡಿಯಾನಿ ವಿ. ಗೋಖುಲಾನಂದ ಪಂಡ – 1987 (2) ಎಸ್.ಸಿ.ಸಿ 338

ಇಂತಹ ಸಂಸ್ಕಾರಕ್ಕೆ ಒಳಗಾಗುವವರನ್ನು ಎರಡು ಬಾರಿ ಜನಿಸಿದವರು ಎನ್ನುತ್ತಾರೆ.) ದತ್ತು ಪಡೆದ ಹುಡುಗನಾಗಿದ್ದರೆ, ದತ್ತು ತಂದೆ ಅದೇ ಗೋತ್ರಕ್ಕೆ ಸೇರಿದ್ದರೆ, ಅಂತಹ ಸಮಾರಂಭದ ಅಗತ್ಯವಿಲ್ಲ.[1]

ಕಾಯ್ದೆ ಜಾರಿಗೆ ಮುಂಚಿತವಾಗಿ ಗಂಡು ಸಂತಾನದ ಜೀವಿತಾವಧಿಯಲ್ಲಿ ಮಗನ ದತ್ತು ಸಹ ನಿಷೇಧಿಸಲ್ಪಟ್ಟಿದೆ ಮತ್ತು ಆ ಕಾಯಿದೆಯನ್ನು ಜಾರಿಗೊಳಿಸಿದ ನಂತರ ಸ್ಥಿತಿಯು ಮುಂದುವರಿದಿದೆ. ಮಗುವು ಜಾತಿತೊರೆದರೆ ಅಥವಾ ಹಿಂದೂ ಧರ್ಮವನ್ನು ತೊರೆದ ನಂತರ, ಅವರ ತಂದೆ ಇನ್ನೊಬ್ಬನನ್ನು ದತ್ತು ತೆಗೆದುಕೊಳ್ಳಲು ಅರ್ಹನಾಗುತ್ತಾನೆ. ಜಾತಿ ವಿಕಲಾಂಗತೆಗಳ ತೆಗೆದುಹಾಕುವ ಕಾಯಿದೆ 1850 ರ ಜಾರಿಗೆ ಬಂದ ನಂತರ ಈ ಸ್ಥಿತಿಯು ಬದಲಾಗಿಲ್ಲ. ಪಾರ್ಟಿಗಳು ಮಿತಾಕ್ಷರ ನಿಯಮದಿಂದ ನಿರ್ವಹಿಸಲ್ಪಡುತ್ತಿದ್ದರೆ, ನೈಸರ್ಗಿಕ ಮಗ ಜನ್ಮಜಾತವಾದ ಹುಚ್ಚನಾಗಿದ್ದರೆ ಅಥವಾ ಈಡಿಯಟ್ (ಮಂದಬುದ್ಧಿ, ಅವಿವೇಕಿ) ಆಗಿದ್ದರೆ ಹೆಚ್ಚುವರಿಯಾಗಿ ದತ್ತು ಪಡೆಯಬಹುದು.[2] ದತ್ತಕ ದಾಖಲೆಯಲ್ಲಿ ದತ್ತು ಪಡೆದವರು ನಿಜವಾಗಿಯೂ ದತ್ತು ಪಡೆದ ಬಗ್ಗೆ ಉಲ್ಲೇಕವಿದೆಯೇ ಅಥವ ಕೇವಲ ವಾರಸ್ಸುದಾರನ ನೇಮಕ ರೀತಿಯಲ್ಲಿ ಬರೆಯಲಾಗಿದೆಯೇ ಎನ್ನುವುದು ಮುಖ್ಯವಾಗುತ್ತದೆ. [3] ಕಲಂ 16 ಭಾರತೀಯ ಸಾಕ್ಷ್ಯ ಕಾಯ್ದೆ 1872 ರಲ್ಲಿ ನೊಂದಾಯಿತ ದಾಖಲೆಯನ್ನು ಕೋರ್ಟಿನಲ್ಲಿ ಹಾಜರುಪಡಿಸಿದಾಗ ಅದು ಕಾನೂನು ರೀತಿಯಲ್ಲಿ ಆಗಿದೆ ಎನ್ನುವುದನ್ನು ಕೋರ್ಟ್ ಪರಿಗಣಿಸುತ್ತದೆ. ಅದರ ವಿರುದ್ದವಾಗಿರುವ ಪ್ರತಿಪಾದಕನು ಅವರ ಪ್ರತಿಪಾದನೆಯನ್ನು ರುಜುವಾತು

---

[1] ಮಧುಸೂದನ್ ದಾಸ್ ವಿ. ನಾರಾಯಣ್ ಬಾಯ್ – ಎ.ಐ.ಆರ್ 1983 ಎಸ್.ಸಿ 114

[2] ಛೀಮಶ್ಯ ವಿ. ಜನಾಬಿ – 2006(13) ಎಸ್.ಸಿ.ಸಿ 627

[3] ಕೃಷ್ಣಪ್ಪ ವಿ. ಶಿವಕುಮಾರ್ 2007 (10) ಎಸ್.ಸಿ.ಸಿ 761

ಪಡಿಸಬೇಕಿರುತ್ತದೆ.[1] ದತ್ತು ಪಡೆದವರು ಮತ್ತು ದತ್ತು ಕೊಟ್ಟವರು ಇಬ್ಬರೂ ಒಂದು ದತ್ತಕ ಕರಾರಿನಲ್ಲಿ ದತ್ತುವಾಗಿ ಕೊಡಲ್ಪಡುವ ಮಗನು ಇಬ್ಬರಿಗೂ ಮಗನಾಗಿ ಇರತಕ್ಕಂತದ್ದು ಎಂದು ಏರ್ಪಾಡು ಮಾಡಿಕೊಳ್ಳಬಹುದು ಇದಕ್ಕೆ ದ್ವಯಮುಶ್ಯಾಯನ ದತ್ತಕ ಎಂದು ಹೆಸರು.[2]

ತುಂಬಾ ಹಿಂದೆ ನಡೆದಿರುವ ವಿಧ್ಯಮಾನಗಳ ರುಜುವಾತು ಬಗ್ಗೆ ಆತಂಕ ಬೇಡ ಸುಪ್ರೀಮ್ ಕೋರ್ಟ್ ಅಂತಹ ಪ್ರಕರಣಗಳಲ್ಲಿ ಅನುಸರಿಸಬೇಕಾದ ವಿಧಾನ ಹೇಳಿದೆ.[3] "ಎಲ್ಲಾ ಪ್ರಾಚೀನ ವಿಧ್ಯಮಾನಗಳ ವಿಷಯದಲ್ಲಿ, ಖಚಿತ ಮೌಖಿಕ ಸಾಕ್ಷ್ಯಾಧಾರಗಳ ಕೊರತೆಯಿರುವುದು ನೈಸರ್ಗಿಕವಾಗಿರುತ್ತವೆ, ಸಮಯದ ಹಾದುಹೋಗುವಿಕೆಯು ಕ್ರಮೇಣ ಇಂತಹ ಸಾಕ್ಷ್ಯವನ್ನು ಅಳಿಸಿಹಾಕುತ್ತದೆ. ಮಾನವ ಸಂಗತಿಗಳನ್ನು ಸಾಮಾನ್ಯವಾಗಿ ಸಂಭವನೀಯತೆಗಳ ಆಧಾರದ ಮೇಲೆ ನಿರ್ಣಯಿಸಬೇಕು. ಎಲ್ಲಾ ಸಂದರ್ಭಗಳಲ್ಲಿಯೂ ನಿರ್ದಿಷ್ಟವಾದ ಪುರಾವೆಗಳು ಒತ್ತಾಯಿಸಲ್ಪಟ್ಟರೆ ನ್ಯಾಯ ನಿರೂಪಣೆ ಅಸಾದ್ಯವಾಗುತ್ತದೆ. ಒಂದು ದತ್ತು ಸ್ವೀಕಾರವು ತೃಪ್ತಿಕರವಾಗಿ ಸಾಬೀತಾಗಿದೆ ಅಥವಾ ಇಲ್ಲವೇ ಎಂದು ತೀರ್ಮಾನಿಸುವುದರಲ್ಲಿ, ದತ್ತು ಸ್ವೀಕಾರ ಆದ ದಿನಾಂಕ ಮತ್ತು ಸಂಬಂಧಪಟ್ಟ ಪಾರ್ಟಿ ಪುರಾವೆಯನ್ನು ಒದಗಿಸುವ ದಿನಾಂಕದ ನಡುವಿನ ವ್ಯತ್ಯಾಸದ ಸಮಯವನ್ನು ನಾವು ಮನಸ್ಸಿನಲ್ಲಿಟ್ಟುಕೊಳ್ಳಬೇಕಾದ ಅಗತ್ಯವಿದೆ. ಒಂದು ದತ್ತಕದ ಸಂದರ್ಭದಲ್ಲಿ ಪ್ರಶ್ನಾರ್ಹವಾಗಿ ಅದೇ ವರ್ಷಗಳ ಮೊದಲು ನಡೆದಿದೆ ಎಂದು ಹೇಳಲಾಗಿದ್ದರೆ, ಪ್ರಮುಖ ಸಾಕ್ಷ್ಯವು ದತ್ತು ಪಡೆದ ತಂದೆ ತನ್ನ ಮಗನಾಗಿ ಅಳವಡಿಸಿಕೊಂಡಿದ್ದಾನೆಂದು ಹೇಳಿಕೊಳ್ಳುವ ವ್ಯಕ್ತಿಯನ್ನು ಬಹಿರಂಗ ಹಿಡಿದ ಎಂದು ಹೇಳಬಹುದು; ಆ

---

[1] ಡ್ಯು ವಿ. ಲಕ್ಷ್ಮೀ ನಾರಾಯಣ್ – 1998 (8) ಎಸ್.ಸಿ.ಸಿ 701

[2] ರಾಜಗೋಪಾಲ್ ವಿ. ಕೃಷ್ಣಗೋಪಾಲ್ – ಎ.ಐ.ಆರ್ 2003 ಎಸ್.ಸಿ 4319

[3] ದೇಬಿ ಪ್ರಸಾದ್ ವಿ. ತ್ರಿವೇಣಿ ದೇವಿ – ಎ.ಐ.ಆರ್ 1970 ಎಸ್.ಸಿ 1286

ದತ್ತಕ ಮಗನು ತಮ್ಮ ತಂದೆ ಎಂದು ನಡೆದುಕೊಂಡ ಮತ್ತು ಅವರ ಸಂಬಂದಿಕರು ಮತ್ತು ಸ್ನೇಹಿತರು ಅವರನ್ನು ತಂದೆ ಮತ್ತು ಮಗ ಎಂದು ಪರಿಗಣಿಸಿ ನಡೆದುಕೊಂಡಿದ್ದರು. ಯಾವುದೇ ಸತ್ಯವನ್ನು ಸಾಬೀತುಪಡಿಸಲು ಪೂರ್ವನಿರ್ಧರಿತ ಮಾರ್ಗವಿಲ್ಲ. ಒಂದು ವಾಸ್ತವಿಕತೆಯು ಎಲ್ಲಿ ಸಾಬೀತಾಯಿತು ಎಂದು ಹೇಳಲಾಗುವ ಮುಂಚೆ, ಒಂದು ವಿವೇಕಯುತ ವ್ಯಕ್ತಿಯು, ನಿರ್ದಿಷ್ಟ ಪ್ರಕರಣದ ಸಂದರ್ಭಗಳಲ್ಲಿ, ಅಸ್ತಿತ್ವದಲ್ಲಿದೆ ಎಂಬ ಭಾವನೆಯ ಮೇಲೆ ವರ್ತಿಸಬೇಕು ಎಂಬ ಸಂಭವನೀಯ ರೀತಿಯಲ್ಲಿಯೇ, ನ್ಯಾಯಾಲಯವು ಅದರ ಮುಂದಿರುವ ವಿಷಯಗಳನ್ನು ಪರಿಗಣಿಸಿದ ನಂತರ, ಅದರ ಅಸ್ತಿತ್ವವನ್ನು ಅಥವಾ ಪರಿಗಣಿಸುವುದನ್ನು ಅಸ್ತಿತ್ವದಲ್ಲಿದೆ ಎಂದು ನಂಬುತ್ತದೆ. ಹಾಗಾಗಿ ಈ ಪ್ರಕರಣದಲ್ಲಿ ಸಾಕ್ಷಿಗಳ ಒಟ್ಟಾರೆ ದೃಷ್ಟಿಕೋನವನ್ನು ತೆಗೆದುಕೊಂಡ ನಂತರ, ನಾವು ದತ್ತು ಸ್ವೀಕರಿಸಿರುವುದು ನಿಜವೆಂದು ನಾವು ತೃಪ್ತಿ ಹೊಂದಿದ್ದೇವೆ, ಇದಕ್ಕೆ ವಿರುದ್ಧವಾಗಿ ಯಾವುದೇ ಪುರಾವೆಯ ಅನುಪಸ್ಥಿತಿಯಲ್ಲಿ ನಾವು ಅಗತ್ಯವಾಗಿ ಅದು ಸಿಂಧುವಾದ ಸರಿಯಾದ ದತ್ತು ಎಂದು ಮುಂದುವರಿಯಬೇಕು." ಇದೇ ರೀತಿಯಲ್ಲಿ "ಪ್ರಾಚೀನ ದತ್ತಕದ ವಿಷಯದಲ್ಲಿ, ದೀರ್ಘಾವಧಿಯ ಅವಧಿಯ ನಂತರ ಮತ್ತು ದತ್ತು ಸ್ವೀಕಾರವು ಒಂದು ಮಾನ್ಯ ಕಾರ್ಯವೆಂಬ ಹೆಜ್ಜೆಯ ಮೇಲೆ ತೆರೆದ ಜೀವನ ಮತ್ತು ನಡವಳಿಕೆಯ ವಿವಿಧ ವಹಿವಾಟುಗಳ ನಂತರ, ಅದರ ಸಿಂಧುತ್ವ ಸವಾಲು ಮಾಡುವವರ ಮೇಲೆ ಭಾರಿ ರುಜುವಾತು ಪಡಿಸುವ ಜವಾಬ್ದಾರಿ ಇರಬೇಕು.[1]

ಸುಪ್ರೀಮ್ ಕೋರ್ಟಿನ ಮುಂದೆ ದತ್ತಕದ ವಿವಾದವಿರುವ ಒಂದು ವಿಶೇಷ ವಾಸ್ತವಿಕತೆ ಇರುವ ಪ್ರಕರಣ ಬರುತ್ತೆ ಅದರಲ್ಲಿ ಕೋರ್ಟ್

---

[1] ಓಳೇಟಿ ವೆಂಕಟ ವಿ. ಕೇಸಪರಗದ ಭಾಸರರಾವ್ – ಎ.ಐ.ಆರ್ 1969 ಎಸ್.ಸಿ 1359

ವಾಸ್ತವಗಳ ಮೌಲ್ಯಮಾಪನ ಮಾಡಿರುವ ವಿಧಾನವನ್ನು ಗಮನಿಸಿ.[1] "ಯಾವುದೇ ದತ್ತು ಸ್ವೀಕಾರದ ದಿನಾಂಕವನ್ನು ಅಥವಾ ಸಮಾರಂಭದ ಸ್ಥಳವನ್ನು ವಾದ ಪತ್ರದಲ್ಲಿ ನೀಡಲಾಗಿಲ್ಲ. ಯಾವುದೇ ವಿಶೇಷವಾದ ಪದ್ಧತಿಯನ್ನು ಮನವಿಯಲ್ಲಿ ಹೇಳಲಾಗಿಲ್ಲ ಮತ್ತು ತೆಂಗಿನಕಾಯಿ ನೀಡುವಿಕೆಯು ಸಮಾರಂಭದ ಭಾಗವಾಗಿದೆ ಎಂದು ಸಹ ಹೇಳಲಾಗಿಲ್ಲ. ಸೀತಾರತ್ನಮ್ ಸಹ ದತ್ತು ನಡೆದ ಸ್ಥಳ ಅಥವಾ ವರ್ಷವನ್ನು ನೀಡಲಿಲ್ಲ. ಆಕೆಯ ವಯಸ್ಸು ಅಥವಾ ದತ್ತು ನಡೆಯುವ ವರ್ಷವನ್ನು ಅವಳ ನೆನಪಿನಲ್ಲಿ ಇಲ್ಲ ಎಂದು ಅವಳು ಮಾತ್ರ ಹೇಳುತ್ತಾಳೆ. ಆಕೆ ಯಾವುದೇ ಮುಹೂರ್ತವನ್ನು ನಿಗದಿಪಡಿಸಲಾಗಿಲ್ಲ ಎಂದೂ ಹೇಳುತ್ತಾರೆ. ಹಿಂದೂಗಳಿಗೆ, ಮುಹೂರ್ತವು ಅಥವಾ ಮಂಗಳಕರ ಸಮಯವನ್ನು ನಿಗದಿಪಡಿಸುವುದು ಚಿಕ್ಕ ಕಾರ್ಯಗಳಲ್ಲಿಯೂ ಕೂಡಾ ಅತ್ಯಂತ ಒಂದು ಪ್ರಮುಖ ಘಟನೆಯಾಗಿದ್ದು, ಯಾವುದೇ ಮುಹೂರ್ತ ನಿಗದಿಯಾಗಿಲ್ಲ ಎಂದು ನಂಬಲಾಗುವುದಿಲ್ಲ. ದತ್ತು ರುಜುವಾತನ್ನು ಸಾಬೀತುಮಾಡುವುದಕ್ಕೆ ಅವಶ್ಯಕವಾದ ವಿವರಗಳು ದಾವೆ ಪತ್ರದಲ್ಲಿ ಇಲ್ಲ. ವಾದಿ ಸಾಕ್ಷಿ 6 ಅವರಿಗೆ ದತ್ತು ಆದ ದಿನಾಂಕ ಅಥವಾ ವರ್ಷ ನೆನಪಿರುವುದಿಲ್ಲ ಎಂದು ಹೇಳಿದರು. ಇಂತಹ ಪ್ರಮುಖ ಘಟನೆಗಾಗಿ ಯಾವುದೇ ದತ್ತು ಪತ್ರವನ್ನು ಕಾರ್ಯಗತಗೊಳಿಸಲಾಗಿಲ್ಲ. ಪ್ರತಿವಾದಿ ಸಾಕ್ಷಿ 2 ಹೇಳುವಂತೆ, ಸುಮಾರು 100 ಜನರು ಸಮಾರಂಭದಲ್ಲಿ ಹಾಜರಿದ್ದರು, ಆದರೆ ಪ್ರತಿವಾದಿ ಸಾಕ್ಷಿ 3 ಹೇಳುವಂತೆ 400–500 ಮಂದಿ ಭಾಗವಹಿಸಿದ್ದರು ಎಂದು ಹೇಳುತ್ತಾರೆ. ಅಂತಹ ಒಂದು ದೊಡ್ಡ ಸಮಾರಂಭದಲ್ಲಿ ಯಾವುದೇ ಆಮಂತ್ರಣ ಪತ್ರಗಳನ್ನು ಮುದ್ರಿಸಲಾಗುವುದಿಲ್ಲ ಎಂಬುದು ಆಶ್ಚರ್ಯಕರವಾಗಿದೆ. ಸೀತಾರತ್ನಮ್

---

[1] ಪೆಂಟಕೋಟ ಸತ್ಯನಾರಾಯಣ ವಿ. ಪೆಂ... ಸೀತಾರತ್ನಮ್ – ಎ.ಐ.ಆರ್ 2005 ಎಸ್.ಸಿ 4362

ತಾನೇ ಸಲ್ಲಿಸಿದ ದಾವೆಯಲ್ಲಿ ಮತ್ತು ಅದರಲ್ಲಿನ ಹೇಳಿಕೆಯಲ್ಲಿ ಅವರು 1977–78 ರಲ್ಲಿ ತನ್ನ ಗಂಡನ ಮನೋಭಾವವನ್ನು ಪ್ರತಿಭಟಿಸಿದರು ಮತ್ತು ಪೋಷಣಾಂಶದ ವಿವಾದವನ್ನು ಮಾಡಿದ್ದರು, ಮತ್ತು 4–5 ಜನ ಹಿರಿಯರ ಹಸ್ತಕ್ಷೇಪದ ನಂತರ ಆಕೆಯ ಪತಿ ಅವಳು ಕೇಳಿದಂತೆ ತನ್ನ ಪೋಷಣಾಂಶ ಪಾವತಿಸಲು ಒಪ್ಪಿಕೊಂಡರು. ಆದರೂ ಅಂದು ಆಕೆ ತನ್ನ ದತ್ತು ಮಗನ ನಿರ್ವಹಣೆಗೆ ಪೋಷಣಾಂಶ ಕೇಳಿರುವುದಿಲ್ಲ. ಇದಲ್ಲದೆ, ದತ್ತುಪುತ್ರ ತನ್ನೊಂದಿಗೆ ವಾಸಿಸುತ್ತಿದ್ದಾನೆ ಎಂದು ಅವಳು ಹೇಳಿರಲಿಲ್ಲ. ಕೃಷ್ಣ ಭಗವಾನ್ ಅವರ ಸಾಕ್ಷ್ಯದಲ್ಲಿ, 1978 ರಲ್ಲಿ ಅವರು 10 ನೇ ತರಗತಿಯಲ್ಲಿದ್ದರು ಮತ್ತು ಅವರ ತಂದೆಯು ಅವನನ್ನು ನಿರ್ಲಕ್ಷಿಸಿದ್ದರು ಮತ್ತು ಅವರ ಅಧ್ಯಯನದ ಅಗತ್ಯ ನಿಧಿಯನ್ನು ಒದಗಿಸುತ್ತಿರಲಿಲ್ಲ ಎಂದು ತಿಳಿಸಿದ್ದಾರೆ. ಈ ದತ್ತು ಮಗ ಸಿತಾರತ್ನಮ್ ಜೊತೆಯಲ್ಲಿ ವಾಸಿಸುತ್ತಿದ್ದರೆ ಮತ್ತು ಈ ದತ್ತು ನಿಜವಾಗಿದ್ದರೆ, ಅವರು ಸ್ವಾಭಾವಿಕವಾಗಿ ತಮ್ಮ ದತ್ತು ಪುತ್ರರ ನಿರ್ವಹಣೆಗಾಗಿ ಪೋಷಣಾಂಶ ಪಡೆದುಕೊಳ್ಳಲು ಮುಂದಾಗುತ್ತಿದ್ದರು ಅಥವಾ ದಾವೆ ಹೂಡುತ್ತಿದ್ದರು. ಪ್ರತಿಪಾದಿತ ದತ್ತು ಕಾರ್ಯದ ದಿನಾಂಕವನ್ನು ಸಾಕ್ಷಿಗಳು ಯಾವುದೇ ರೀತಿಯಲ್ಲಿ ಹೇಳಿಲ್ಲ. ಎಲ್ಲಾ ಸಾಕ್ಷಿಗಳೂ ಒಂದು ಗಿಳಿಯಂತೆ ಸಾಕ್ಷಿ ಹೇಳುವ ಮೂಲಕ ಪಾರ್ಟಿಗಳು ಒಂದು ಹಲಗೆಯಲ್ಲಿ ಕುಳಿತು ಪೆಂಟಕೋಟ ಶ್ರೀರಾಮಮೂರ್ತಿ ಮತ್ತು ಸಿತಾರತ್ನಮ್ಗೆ ಒಂದು ತೆಂಗಿನಕಾಯಿ ಜೊತೆ ಮಗುವನ್ನು ನೀಡಲಾಯಿತು, ಎಂದಿದ್ದಾರೆ. .. ದತ್ತಕದಲ್ಲಿ ಬಾಗವಹಿಸಿದರೆಂದು ಹೇಳಿಕೊಳ್ಳಲಾದ ಕೆಲವು ಜೀವಂತವಿರುವ ಇಬ್ಬರು ಸಾಕ್ಷಿಗಳನ್ನು ವಿಚಾರಣೆ ಮಾಡಿಲ್ಲ. ... ಈ ಹಿಂದೆ 1982 ರ ಒಂದು ದಾವೆಯಲ್ಲಿ ಕೃಷ್ಣಭಗವಾನ್ ರವರನ್ನು ಪರಮೇಶು ಎನ್ನುವವರ ಪುತ್ರರೆಂದು ತೋರಿಸಲಾಗಿದೆ .. ಈ ಬಗ್ಗೆ ಕೃಷ್ಣಭಗವಾನ್ ರವರನ್ನು ಸಾಕ್ಷಿ ವಿಚಾರಣೆಯಲ್ಲಿ ಕೇಳಲಾಗಿ ಆತ ನಿರಾಕರಿಸಿಲ್ಲ, ಕೇವಲ ಗೊತ್ತಿಲ್ಲ

ಎಂದಿದ್ದಾನೆ... ಭೂಪರಿಮಿತಿ ಕಾಯ್ದೆಯ ಘೋಷಣೆಯಲ್ಲಿ ಆತನನ್ನು ಪರಮೇಶು ಕುಟುಂಬದಲ್ಲಿ ತೋರಲಾಗಿದೆ... ವಾದಿಗಳ ಪರವಾಗಿ ದಾಖಲೆ ಹಾಜರು ಪಡಿಸಿ, ಕೃಷ್ಣಭಗವಾನ್ ಸ್ಕೂಲ್ ಭರ್ತಿ ಅರ್ಜಿಯಲ್ಲಿ ಶ್ರೀರಾಮಮೂರ್ತಿ ತಂದೆ ಅಥವ ರಕ್ಷಕ ಜಾಗದಲ್ಲಿ ಸಹಿ ಹಾಕಿದ್ದಾರೆ ಆದ್ದರಿಂದ ದತ್ತಕದ ರುಜುವಾತಾಗಿ ಪಡೆಯಲು ಆಗಿರುವ ಪ್ರತಿಪಾದನೆಯನ್ನು ನಿರಾಕರಿಸಿ ಇದು ದತ್ತಕದ ಸಾಕ್ಷಿಯಾಗುವುದಿಲ್ಲ ಎಂದಿದೆ. .. ಹಲವು ಬೇರೆ ಅಂತಹದ್ದೇ ಇತರರ ಅರ್ಜಿಯಲ್ಲಿ ಗಾರ್ಡಿಯನ್ (ರಕ್ಷಕ) ಆಗಿ ಸಹಿ ಮಾಡಿರುವ ಬಗ್ಗೆ ಉಲ್ಲೇಕಿಸುತ್ತ ಕೋರ್ಟ್ ಸದರಿ ದತ್ತಕವು ಸತ್ಯವಲ್ಲ, ದಾವ ಆಸ್ತಿಯಲ್ಲಿ ದತ್ತು ಪುತ್ರನಿಗೆ ಹಕ್ಕು ಇಲ್ಲ ಎಂದು ತೀರ್ಪಿತ್ತಿದೆ."

ದತ್ತು ವಿಚಾರವನ್ನು ಪ್ರತಿಪಾದಿಸುವವರು ರುಜುವಾತು ಪಡಿಸುವಾಗ ಕಲಂ 10 ಮತ್ತು 11 ಹಿಂದು ದತ್ತಕ ಮತ್ತು ಪೋಷಣಾಂಶ ಕಾಯ್ದೆ ಅಂಶಗಳನ್ನು ಕಡ್ಡಾಯವಾಗಿ ಪಾಲನೆ ಆಗಿದೆಯೇ ಅನ್ನುವುದನ್ನು ರುಜುವಾತು ಪಡಿಸಬೇಕಿರುತ್ತದೆ.[1] 1956 ರ ಹಿಂದು ದತ್ತಕ ಮತ್ತು ಪೋಷಣಾಂಶ ಕಾಯ್ದೆ ಕಲಂ 10 ಈ ಕೆಳಕಂಡಂತೆ ಉಲ್ಲೇಖಿಸಬೇಕಾಗಿದೆ: – "10. ದತ್ತು ತೆಗೆದುಕೊಳ್ಳಬಹುದಾದ ವ್ಯಕ್ತಿಗಳು – ಈ ಕೆಳಗಿನ ಷರತ್ತುಗಳು ಪೂರ್ಣಗೊಳ್ಳದ ಹೊರತು ಯಾವುದೇ ವ್ಯಕ್ತಿಯು ದತ್ತು ತೆಗೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ: – (1) ಅವನು ಅಥವಾ ಅವಳು ಹಿಂದೂ; (2) ಅವನು ಅಥವಾ ಅವಳು ಈಗಾಗಲೇ ದತ್ತು ಪಡೆಯಲಾಗಿಲ್ಲ; (3) ಅವನು ಅಥವಾ ಅವಳು ಮದುವೆಯಾಗಿಲ್ಲ, ಆದರೆ ದತ್ತು ತೆಗೆದುಕೊಳ್ಳುವ ವ್ಯಕ್ತಿಗಳಿಗೆ ಅನ್ವಯವಾಗುವ ಪದ್ಧತಿ ಅಥವಾ ಬಳಕೆ ವಿವಾಹಿತರಾಗಿರುವ ವ್ಯಕ್ತಿಗಳನ್ನು ಪಡೆಯಬಹುದೆಂದಿದ್ದರೆ ಪಡೆಯಬಹುದು; (4) ಅವನು ಅಥವಾ ಅವಳು ಹದಿನೈದು ವರ್ಷಗಳ

---

[1] ಹರ್ನೆಕ್ ಸಿಂಗ್ ವಿ. ಪ್ರಿತಮ್ ಸಿಂಗ್ – 2013 (4) ಎಸ್.ಸಿ.ಸಿ 458

ವಯಸ್ಸನ್ನು ಪೂರ್ಣಗೊಳಿಸಿಲ್ಲ, ಆದರೆ ಹದಿನೈದು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ ವ್ಯಕ್ತಿಗಳನ್ನು ಪಡೆಯಲು ದತ್ತು ತೆಗೆದುಕೊಳ್ಳುವ ವ್ಯಕ್ತಿಗಳಿಗೆ ಅನ್ವಯವಾಗುವ ಪದ್ಧತಿ ಅಥವಾ ಬಳಕೆ ಇದ್ದರೆ, ಪಡೆಯಬಹುದು." ದತ್ತು ಸಿಂಧುವಾಗಬೇಕಾದರೆ ಇತರ ಷರತ್ತನ್ನು ಕಲಂ 11 ರಲ್ಲಿ ನೀಡಲಾಗಿದೆ. ಇದು ಕೆಳಗಿನಂತೆ ಇದೆ: – "11. ದತ್ತು ಸಿಂಧುವಾಗಲು ಇತರ ಷರತ್ತು – ಪ್ರತಿ ದತ್ತು ಸ್ಥಿತಿಗಳಲ್ಲಿ, ಕೆಳಗಿನ ಪರಿಸ್ಥಿತಿಗಳು ಅನುಸರಿಸಬೇಕು: – (1) ದತ್ತುವನ್ನು ಮಗನಾಗಿ ಪಡೆದಿದ್ದರೆ, ದತ್ತು ಪಡೆದ ತಂದೆ ಅಥವಾ ತಾಯಿಗೆ ಹಿಂದು ಮಗನನ್ನು, ಮಗನ ಮಗನನ್ನು, ಮಗನ ಮಗನ ಮಗನನ್ನು, ದತ್ತಕ ಸಮಯದಲ್ಲಿ ಜೀವಂತದಿಂದ ಹೊಂದಿಲ್ಲವಾಗಬೇಕು (ಕಾನೂನುಬದ್ಧ ರಕ್ತ ಸಂಬಂಧದಿಂದ ಅಥವಾ ದತ್ತಕದ ಮೂಲಕ); (2) ದತ್ತುವನ್ನು ಮಗಳಾಗಿ ಪಡೆದಿದ್ದರೆ, ದತ್ತು ಪಡೆದವರಲ್ಲಿ ದತ್ತು ಪಡೆದ ತಂದೆ ಅಥವಾ ತಾಯಿಗೆ ಹಿಂದೂ ಮಗಳು ಅಥವಾ ಮಗನ ಮಗಳು ಇರಬಾರದು (ಕಾನೂನುಬದ್ಧ ರಕ್ತ ಸಂಬಂಧದಿಂದ ಅಥವಾ ದತ್ತು ಪಡೆಯುವುದರ ಮೂಲಕ) ದತ್ತು ನೀಡುವ ಸಮಯದಲ್ಲಿ ಜೀವಂತವಿರಬಾರದು; (3) ದತ್ತು ತೆಗೆದುಕೊಳ್ಳುವುದು ಪುರುಷನಿಂದಾಗಿದ್ದರೆ ಮತ್ತು ದತ್ತು ತೆಗೆದುಕೊಳ್ಳಬೇಕಾದ ವ್ಯಕ್ತಿಯು ಹೆಣ್ಣುಮಕ್ಕಳಾಗಿದ್ದರೆ, ದತ್ತು ಪಡೆಯುವ ತಂದೆ ದತ್ತು ತೆಗೆದುಕೊಳ್ಳುವ ವ್ಯಕ್ತಿಗಿಂತ ಕನಿಷ್ಠ ಇಪ್ಪತ್ತೊಂದು ವರ್ಷ ವಯಸ್ಸಾಗಿರಬೇಕು; (4) ದತ್ತು ಸ್ತ್ರೀಯಿಂದ ಪಡೆದಿರುವುದಾದರೆ ಮತ್ತು ದತ್ತು ತೆಗೆದುಕೊಳ್ಳಬೇಕಾದ ವ್ಯಕ್ತಿಯು ಒಬ್ಬ ಪುರುಷನಾಗಿದ್ದರೆ, ದತ್ತು ಪಡೆದ ತಾಯಿಯು ದತ್ತು ತೆಗೆದುಕೊಳ್ಳುವ ವ್ಯಕ್ತಿಗಿಂತ ಕನಿಷ್ಠ ಇಪ್ಪತ್ತೊಂದು ವರ್ಷ ವಯಸ್ಸಾಗಿರಬೇಕು; (5) ಒಂದೇ ಮಗುವನ್ನು ಏಕಕಾಲದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಅಳವಡಿಸಿಕೊಳ್ಳುವುದಿಲ್ಲ; (6) ದತ್ತು ಪಡೆಯುವ ಮಗುವನ್ನು ವಾಸ್ತವವಾಗಿ ಮಗುವಿನ

ಕುಟುಂಬದಿಂದ ಮಗುವನ್ನು ವರ್ಗಾಯಿಸುವ ಉದ್ದೇಶದಿಂದ ಕೊಡುವುದು ಮತ್ತು ಪಡೆಯುವುದು ದತ್ತಕದಲ್ಲಿ ಮಗುವಿಗೆ ಸಂಬಂದಿಸಿದ ಹೆತ್ತವರು ಅಥವ ರಕ್ಷಕರು ಅಥವ ಅವರಿಂದ ಅಧಿಕಾರ ಪಡೆದವರು ಮಾಡಬೇಕು, ಅನಾಥವಾಗಿ ಬಿಟ್ಟ ಮಕ್ಕಳ ವಿಚಾರದಲ್ಲಿ ಅಥವ ಮಗುವಿನ ಹೆತ್ತವರು ಯಾರೆಂದು ತಿಳಿಯದ ವಿಚಾರದಲ್ಲಿ, ಮಗು ಎಲ್ಲಿಂದ ಯಾವ ಕುಟುಂಬದಿಂದ ತರಲ್ಪಟ್ಟಿದೆ ದತ್ತಕಕ್ಕಾಗಿ ಕುಟುಂಬಕ್ಕೆ ಎಂದು ತಿಳಿಯದ ಪರಿಸ್ಥಿತಿಯಲ್ಲಿಯೂ ಈ ಕಾರ್ಯ ಜರುಗಬೇಕು: ದತ್ತ ಹೋಮ ದತ್ತು ಸ್ವೀಕಾರಕ್ಕೆ ಮತ್ತು ಸಿಂದುತ್ವಕ್ಕೆ ಅವಶ್ಯಕವಲ್ಲ ಎಂದು ಒದಗಿಸಿದೆ."

1956 ರ ಹಿಂದು ದತ್ತಕ ಮತ್ತು ಪೋಷಣಾಂಶ ಕಾಯ್ದೆ ಕಲಂ 16 ರಲ್ಲಿ "ಜಾರಿಯಲ್ಲಿರುವ ಯಾವುದೇ ಕಾನೂನಿನಡಿಯಲ್ಲಿ ನೋಂದಾಯಿಸಿದ ಯಾವುದೇ ದಾಖಲೆಯು ದತ್ತು ಪಡೆಯುವುದನ್ನು ರೆಕಾರ್ಡ್ ಮಾಡಲು ಯಾವುದೇ ನ್ಯಾಯಾಲಯದ ಮುಂದೆ ಹಾಜರುಪಡಿಸಿದರೆ ಮತ್ತು ದತ್ತು ನೀಡುತ್ತಿರುವ ವ್ಯಕ್ತಿ ಮತ್ತು ದತ್ತು ತೆಗೆದುಕೊಳ್ಳುವ ವ್ಯಕ್ತಿಯಿಂದ ಸಹಿ ಹಾಕಲ್ಪಟ್ಟಿದ್ದಾಗ, ದತ್ತು ತೆಗೆದುಕೊಳ್ಳಲಾಗಿದೆ ಎಂದು ನ್ಯಾಯಾಲಯವು ಪರಿಬಾವಿಸುತ್ತದೆ. ಈ ಅಧಿನಿಯಮದ ನಿಬಂಧನೆಗಳ ಅನುಸಾರವಾಗಿ ಅದನ್ನು ನಿರಾಕರಿಸಿ ರುಜುವಾತು ಪಡಿಸುವವರೆಗೆ ಸದರಿ ಪರಿಭಾವನೆ ಇರುತ್ತದೆ." ಈ ಕಲಂ ವ್ಯಾಖ್ಯಾನಿಸಿರುವ ಕರ್ನಾಟಕ ಹೈಕೋರ್ಟ್ [1] ಮೂರು ಕಂಡೀಷನ್ ತೆರೆದಿಡುತ್ತದೆ. (1) ನೋಂದಾಯಿತ ದಾಖಲೆಯನ್ನು ದತ್ತಕಕ್ಕೆ ಸಾಕ್ಷ್ಯಾಧಾರವಾಗಿ ನ್ಯಾಯಾಲಯದ ಮುಂದೆ ಹಾಜರು ಪಡಿಸಲಾಗಿದೆ. (2) ಮಗುವನ್ನು ದತ್ತು ಕೊಡುವ ವ್ಯಕ್ತಿಯಿಂದ ಈ ದಾಖಲೆಯಲ್ಲಿ ಸಹಿ ಮಾಡಲಾಗಿದೆ ಎಂದು ತೋರಿಸಬೇಕು. (3). ಮಗುವನ್ನು ದತ್ತು

---

[1] ಗಂಗವ್ವ ವಿ. ನಿಂಗವ್ವ – ಐ.ಎಲ್.ಆರ್ ೨೦೦೮ ಕರ್ನಾಟಕ 1667

ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳಲು ಅಗತ್ಯವಾದ ಹಣವನ್ನು ಒದಗಿಸಬಹುದಾಗಿದ್ದರೆ ಮಾತ್ರ ಊಹೆಯು ಉಂಟಾಗುತ್ತದೆ".

14. ಜಂಟಿ ಕುಟುಂಬದ ಅಸ್ತಿತ್ವದ ಪುರಾವೆ ಕುಟುಂಬದ ಯಾವುದೇ ಸದಸ್ಯರ ಬಳಿ ಇರುವ ಆಸ್ತಿ ಜಂಟಿ ಎಂಬ ಊಹೆಗೆ ಕಾರಣವಾಗುವುದಿಲ್ಲ.

15. ಯಾವುದೇ ಆಸ್ತಿಯು ಜಂಟಿ ಎಂದು ಪ್ರತಿಪಾದಿಸುವವರ ಮೇಲೆ ಹೊರೆ ಇರುತ್ತದೆ. ಆ ವಿಷಯವನ್ನು ಸ್ಥಾಪಿಸಲು ಯಾವುದೇ ಆಸ್ತಿ ಒಟ್ಟುಕುಟುಂಬದ ಆಸ್ತಿಯಾಗಿದೆ ಎಂದು ಪ್ರತಿಪಾದಿಸುವವರ ಮೇಲೆ ಹೊರೆ ಇರುತ್ತದೆ. ಆದರೆ, ಕುಟುಂಬವು ಕೆಲವು ಜಂಟಿ ಆಸ್ತಿಯನ್ನು ಹೊಂದಿದ್ದು, ಅದರ ಸ್ವರೂಪ ಮತ್ತು ಸಾಪೇಕ್ಷ ಮೌಲ್ಯದಿಂದ ನ್ಯೂಕ್ಲಿಯಸ್ ಅನ್ನು ಆರ್ಜಿಸಿರಬಹುದು / ಪ್ರಶ್ನಿತ ಆಸ್ತಿಯನ್ನು ಅದರಿಂದ ಖರೀದಿಸಿರಬಹುದು ಎಲ್ಲಿ ಸ್ಥಾಪಿಸಲಾಗುತ್ತದೋ, ಅಲ್ಲಿ ಹೊರೆ ಪಾರ್ಟಿಯಿಂದ ಬದಲಾಗುತ್ತದೆ, ಸ್ವಯಂ ಸ್ವಾಧೀನ ಎಂದು ಪ್ರತಿಪಾದಿಸುವ ಪಾರ್ಟಿಯೂ ಜಂಟಿ ಕುಟುಂಬದ ಆಸ್ತಿಯ ಸಹಾಯವಿಲ್ಲದೆ ಆಸ್ತಿಯನ್ನು ಸ್ವಾಧೀನಪಡಿಸಿಕೊಂಡಿದ್ದಾಗಿ, ದೃಢವಾಗಿ ಅದನ್ನು ಸ್ಥಾಪಿಸಬೇಕಾಗುತ್ತದೆ.

16. ಜಂಟಿ ಕುಟುಂಬದ ಸದಸ್ಯರ ಪ್ರತ್ಯೇಕ ಅಥವಾ ಸ್ವಯಂ ಸ್ವಾಧೀನಪಡಿಸಿಕೊಂಡಿರುವ ಆಸ್ತಿಯನ್ನು ಮಾಲೀಕರು ಕುಟುಂಬದ ಜಂಟಿ ದಾಸ್ತಾನಿಗೆ ಎಸೆದರೆ ಅದು ಜಂಟಿ ಕುಟುಂಬ ಆಸ್ತಿಯಾಗಬಹುದು. ಅದರ ಮೇಲೆ ಎಲ್ಲಾ ಪ್ರತ್ಯೇಕ ಹಕ್ಕುಗಳನ್ನು ತ್ಯಜಿಸುವ ಉದ್ದೇಶಗಳು ಸ್ಪಷ್ಟ ಮತ್ತು ನಿಸ್ಸಂದಿಗ್ಧವಾಗಿರಬೇಕು.

17. ಮೂಲತಃ ಜಂಟಿ ಕುಟುಂಬದ ಸದಸ್ಯರ ಪ್ರತ್ಯೇಕ ಅಥವಾ ಸ್ವಯಂ ಸ್ವಾಧೀನಪಡಿಸಿಕೊಂಡ ಆಸ್ತಿಯು ಮಾಲೀಕರಿಂದ ಕುಟುಂಬದ ಜಂಟಿ ದಾಸ್ತಾನಿಗೆ ಎಸೆಯಲ್ಪಟ್ಟಿದ್ದರೆ ಅದು ಜಂಟಿ ಕುಟುಂಬ ಆಸ್ತಿಯಾಗಬಹುದು, ಆದರೆ ಒಂದು ಪ್ರತ್ಯೇಕ ಅಥವಾ ಸ್ವಯಂ ಸ್ವಾಧೀನಪಡಿಸಿಕೊಂಡ ಆಸ್ತಿಯನ್ನು ಜಂಟಿ ಕುಟುಂಬ ಆಸ್ತಿಯೆಂದು ಪರಿಗಣಿಸುವ ಮೊದಲು,

ಕೋಪಾರ್ಸೆನರ್ ಮಾಲೀಕರು ಆಸ್ತಿಯನ್ನು ಸಾಮಾನ್ಯ ಷೇರುಗಳಲ್ಲಿ ಎಸೆದಿದ್ದಾರೆ ಮತ್ತು ಅದನ್ನು ಸ್ವಯಂಪ್ರೇರಣೆಯಿಂದ ಮತ್ತು ಎಲ್ಲಾ ಪ್ರತ್ಯೇಕ ಹಕ್ಕುಗಳನ್ನು ತ್ಯಜಿಸುವ ಉದ್ದೇಶದಿಂದ ಎಂದು ಸಾಬೀತುಪಡಿಸಬೇಕು, "ಉದ್ದೇಶವು ಸ್ಪಷ್ಟ ಮತ್ತು ನಿಸ್ಸಂದಿಗ್ಧವಾಗಿರಬೇಕು. ಸ್ಪಷ್ಟ ಅವನ ಪ್ರತ್ಯೇಕ ಹಕ್ಕುಗಳನ್ನು ಮನ್ನಾ ಮಾಡುವ ಉದ್ದೇಶವನ್ನು ಸ್ಥಾಪಿಸಬೇಕು ಮತ್ತು (i) ಕೇವಲ ಕುಟುಂಬದ ಇತರ ಸದಸ್ಯರು ಅಂತಹ ಆಸ್ತಿಯ ಬಳಕೆಯನ್ನು ಹೊಂದಿದ್ದಾರೆ ಅಥವಾ (ii) ಕೇವಲ ದಯೆ ಅಥವಾ ಪ್ರೀತಿಯಿಂದ ಮಾಡಬಹುದಾದ ಕೃತ್ಯಗಳ ಸಂಧರ್ಬಗಳಲ್ಲಿ ಊಹಿಸಲಾಗುವುದಿಲ್ಲ".

18. ಮಿಶ್ರಣ ಮಾಡುವ ಮನವಿಯನ್ನು ಆಧರಿಸಿದ ನಡವಳಿಕೆಯು ಪ್ರತ್ಯೇಕ ಆಸ್ತಿಯ ಮಾಲೀಕರು ತನ್ನ ಆಸ್ತಿಯನ್ನು ಜಂಟಿ ಕುಟುಂಬ ಆಸ್ತಿಯನ್ನಾಗಿ ಪರಿವರ್ತಿಸುವ ಉದ್ದೇಶವನ್ನು ಸ್ಪಷ್ಟವಾಗಿ ಮತ್ತು ನಿಸ್ಸಂದಿಗ್ಧವಾಗಿ ತೋರಿಸಬೇಕು. ಕೇವಲ ಈ ಆಸ್ತಿಯಿಂದ ಬರುವ ಆದಾಯದ ಬಳಕೆಯನ್ನು ಅನುಮತಿಸುವ ಮೂಲಕ ಕುಟುಂಬದ ಸದಸ್ಯರಿಗೆ ಪ್ರಯೋಜನವನ್ನು ನೀಡುವ ಉದ್ದೇಶವು ಮಿಶ್ರಣದ ಅನುಮಾನವನ್ನು ಸಮರ್ಥಿಸಲು ಸಾಕಾಗುವುದಿಲ್ಲ.

19. ಕೋಪಾರ್ಸೆನರ್ ತನ್ನ ಪ್ರತ್ಯೇಕ ಹಕ್ಕನ್ನು ಮನ್ನಾ ಮಾಡುವ ಉದ್ದೇಶವನ್ನು ದಯೆ ಅಥವಾ ವಾತ್ಸಲ್ಯದಿಂದ ಮಾಡಬಹುದಾದ ಕೃತ್ಯಗಳಿಂದ ಊಹಿಸಲಾಗುವುದಿಲ್ಲ. ಇದು ಕೇವಲ ಜಂಟಿ ಕುಟುಂಬ ಆಸ್ತಿಯೊಂದಿಗೆ ಭೌತಿಕವಾಗಿ ಬೆರೆಯುವ ಕ್ರಿಯೆಯಲ್ಲ ಆದರೆ ಅದರಲ್ಲಿ ವಿಶೇಷ ಹಕ್ಕನ್ನು ಪ್ರತ್ಯೇಕ ಆಸ್ತಿಯಾಗಿ ಮನ್ನಾ ಮಾಡುವ ಇಚ್ಛೆ ಮತ್ತು ಉದ್ದೇಶ ಇರುತ್ತದೆ.

# ಅಧ್ಯಾಯ-6 (ಕೋಪಾರ್ಸನರಿ)

## ಕೋಪಾರ್ಸನರಿ ಮತ್ತು ಅವಿಭಕ್ತ ಕುಟುಂಬ

ಕೋಪಾರ್ಸನರಿ ಎಂದರೇನು ? ಈ ಹಿಂದೆಯೇ ತಿಳಿಸಿದಂತೆ ಕೋಪಾರ್ಸನರಿ (ಸಹ-ಸಮಾನಾಧಿಕಾರತೆ) ಎಂಬುದು ಹಿಂದು ಅವಿಭಕ್ತ ಕುಟುಂಬದ ಒಂದು ಬಾಗ, ಅವಿಭಕ್ತ ಕುಟುಂಬದಲ್ಲಿ ಎಲ್ಲರೂ ಸದಸ್ಯರೇ ಹೆಂಡತಿ, ಸೊಸೆ ಎಲ್ಲರೂ ಸದಸ್ಯರೇ ಆದರೆ ಆಸ್ತಿಯಲ್ಲಿನ ಹಕ್ಕು ಕೋಪಾರ್ಸನರ್ (ಸಹ-ಸಮಾನಾಧಿಕಾರಿ) ಗಳಿಗೆ ಮಾತ್ರ. ಕೋಪಾರ್ಸನರಿಯಲ್ಲಿ ಎಲ್ಲರಿಗೂ ಸಮಾನ ಹಕ್ಕು ಇರುವುದು ಒಂದು ಕೋಪಾರ್ಸನರಿ ಆಗುತ್ತದೆ. ಹೆಂಡತಿ ಮತ್ತು ಸೊಸೆಯರಿಗೆ ಕೋಪಾರ್ಸನರಿ ಆಸ್ತಿಯ ಮೇಲೆ ಪೋಷಣಾರ್ಥ ಹಕ್ಕು ಮಾತ್ರ ಇರುತ್ತದೆ. ಈ ವಿಚಾರವಾಗಿ ಕೋಪಾರ್ಸನರಿ ಎಂಬುದು ಹಿಂದು ಕಾನೂನು ರಚಿತ ವ್ಯವಸ್ಥೆಯೇ ಹೊರತು ಅದು ಪರಸ್ಪರ ಒಪ್ಪಂದದಿಂದ ರಚಿಸಲು ಬರುವುದಿಲ್ಲ ಎನ್ನುತ್ತದೆ ಮಾನ್ಯ ಸುಪ್ರೀಮ್ ಕೋರ್ಟ್ (ಎ.ಐ.ಆರ್ 1962 ಎಸ್.ಸಿ 287). ಸದರಿ ಕೋಪಾರ್ಸನರಿಯಲ್ಲಿ ಹೆಂಡತಿ ಮತ್ತು ಸೊಸೆಯಂದಿರನ್ನು ಸೇರಿಸಿ ಯಾವುದೇ ದಾಖಲಾತಿ ರಚಿತವಾಗಿದ್ದರೂ ಕೂಡ ಅದು ಕೋಪಾರ್ಸನರ್ ಅಸ್ತಿತ್ವವನ್ನು ಕೊಡುವುದಿಲ್ಲ. ಅಂತಹ ಕೋಪಾರ್ಸನರ್ ಅಸ್ತಿತ್ವವನ್ನು ಪಡೆಯಲು ಕಾನೂನು ರಚನೆಯಿಂದ ಮಾತ್ರ ಸಾಧ್ಯವಾಗುತ್ತದೆ.

## ವಿವಿದ ಕಾಯ್ದೆಯಲ್ಲಿ ಕುಟುಂಬ

ಮೂಲವಾಗಿ ಮತ್ತು ಸಾಮಾನ್ಯವಾಗಿ ಕುಟುಂಬದ ಪದಾರ್ಥದಲ್ಲಿ ಒಟ್ಟು ವ್ಯಕ್ತಿಗಳು ಒಂದು ಮನೆಯಲ್ಲಿನ ವಾಸ ಅಥವ ಒಂದು ಸೂರಿನಡಿ ಅಥವ ವ್ಯವಸ್ಥಾಪನೆಯಡಿ ಅಥವ ಒಂದು ಕೌಟುಂಬಿಕ ಸರ್ಕಾರದಡಿ ಎಂದಾಗುತ್ತದೆ. ಸೀಮಿತ ಅರ್ಥದಲ್ಲಿ ಕುಟುಂಬ ಎಂದರೆ ತಂದೆತಾಯಿ

ಮತ್ತು ಅವರ ಮಕ್ಕಳು ಸೇರಿರುತ್ತಾರೆ. ಮೊಮ್ಮಕ್ಕಳು ಮತ್ತು ಒಂದೇ ರಕ್ತದವರು ಒಟ್ಟಿಗೆ ವಾಸಿಸುವವರು ಸೇರಿರಬಹುದು. ವಿಶಾಲವಾದ ಅರ್ಥದಲ್ಲಿ ಅದು ರಕ್ತ ಸಂಬಂದವೇ ಇಲ್ಲದ ವ್ಯಕ್ತಿಗಳನ್ನೂ, ಯಾವ ಸಂಧರ್ಬಗಳಲ್ಲಿ ಬಳಸಲಾಗಿದೆ ಎನ್ನುವುದನ್ನಾದರಿಸಿ, ಹೊಂದಿರಬಹುದು.[1]

2005 ರ ನಂತರ ಬದಲಾದ ರೀತಿ ನೋಡಿ ಕಾಯ್ದೆ ಕಲಂ 6 ಪ್ರಾರಂಬದಲ್ಲೇ ಒಟ್ಟು ಕುಟುಂಬ ಮತ್ತು ಕೋಪಾರ್ಸನರಿ ವ್ಯತ್ಯಾಸವನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ "ಕಾಯ್ದೆ ತಿದ್ದುಪಡಿ 2005 ಪ್ರಾರಂಬವಾದ ದಿನಾಂಕದಿಂದ ಮತ್ತು ಅಂದಿನಿಂದ ಮಿತಾಕ್ಷರ ಕಾನೂನಿನಂತೆ ನಿರ್ವಹಿಸಲ್ಪಡುವ ಹಿಂದು ಅವಿಭಕ್ತ ಕುಟುಂಬದಲ್ಲಿ, ಕೋಪಾರ್ಸನರ್ ಮಗಳು, ಜನ್ಮತಹ ಆಕೆಯ ಸ್ವಂತ ಹಕ್ಕಿನಲ್ಲಿ ಮಗನ ರೀತಿಯಲ್ಲೇ ಕೋಪಾರ್ಸನರ್ ಆಗುತ್ತಾಳೆ, ಆಕೆ ಮಗನಾಗಿದ್ದರೆ ಯಾವ ಹಕ್ಕುಗಳು ಮತ್ತು ಭಾದ್ಯತೆಗಳು ಕೋಪಾರ್ಸನರಿ ಸ್ವತ್ತಿನಲ್ಲಿ ಪ್ರಾಪ್ತವಾಗುತ್ತಿತ್ತೋ ಅದೇ ಹಕ್ಕು ಪ್ರಾಪ್ತವಾಗುತ್ತದೆ; ಹಿಂದು ಮಿತಾಕ್ಷರ ಕೋಪಾರ್ಸನರ್ ಎಂಬ ಉಲ್ಲೇಕಗಳಲ್ಲಿ ಕೋಪಾರ್ಸನರ್ ಮಗಳು ಸೇರಿರುತ್ತಾಳೆ ಎಂದು ಬಾವಿಸುವುದು; ......... ಇಲ್ಲಿ ಮಗಳಿಗೆ ಆಸ್ತಿಯಲ್ಲಿ ಹಕ್ಕು ನೀಡುವ ಸಮಯದಲ್ಲಿ ಹಿಂದು ಅವಿಭಕ್ತಕುಟುಂಬದಲ್ಲಿನ ಕೋಪಾರ್ಸನರ್ ಮತ್ತು ಕೋಪಾರ್ಸನರಿ ಸ್ವತ್ತು ಎಂದು ಉಲ್ಲೇಕಿಸಲಾಗಿದೆ. ಹಿಂದು ಅವಿಭಕ್ತ ಕುಟುಂಬ ಮಾತ್ರ ಇದ್ದರೆ ಸಾಲದು ಅಲ್ಲಿ ಕೋಪಾರ್ಸನರಿಯು ಅಸ್ತಿತ್ವದಲ್ಲಿ ಇರಬೇಕಿರುತ್ತದೆ. ಅಸ್ತಿತ್ವದಲ್ಲಿರುವ ಮಿತಾಕ್ಷರ ಕೋಪಾರ್ಸನರಿಯಲ್ಲಿ ಕೋಪಾರ್ಸನರ್ ಮಗಳು, ಮಗನಂತೆ ಆಸ್ತಿಗೆ ಹುಟ್ಟಿನಿಂದ ಕೋಪಾರ್ಸನರ್ ಆಗುತ್ತಾಳೆ. ಅಲ್ಲಿಗೆ ಕೋಪಾರ್ಸನರಿ 2005 ರ ನಂತರವೂ ಮಗಳನ್ನು ಸೇರಿಸಿಕೊಂಡು ಮುಂದುವರಿಯುತ್ತದೆ. ಅದು ವಿಭಾಗವಾಗುವವರೆಗೆ ಮುಂದುವರಿಯುತ್ತದೆ. 2005 ರ ನಂತರ ಒಬ್ಬ

---

[1] ಕೆ.ವಿ.ಮುತ್ತು ವಿ. ಅಂಗಮುತ್ತು ಅಮ್ಮಾಳ್ – 1997 (2) ಎಸ್.ಸಿ.ಸಿ 53

ಕೋಪಾರ್ಸನರ್ ಸತ್ತರೆ ಅವನ ಕೋಪಾರ್ಸನರ್ ಹಿಸ್ಸೆ ವಿಲ್ ಮುಖಾಂತರವಾಗಲೀ, ವಿಲ್ ಇಲ್ಲದೆ ಕಲಂ 8 ರಲ್ಲಿ ಆಗಲೀ ಹಂಚಿಕೆಯಾಗುತ್ತೆ. ಯಾವುದೇ ಕಾರಣಕ್ಕೆ ಬಾಕಿ ಕೋಪಾರ್ಸನರ್ಗಳಿಗೆ ಲೀನವಾಗುವುದಿಲ್ಲ. ಇಲ್ಲಿ ಒಟ್ಟು ಕುಟುಂಬವೂ ಜೀವಂತವಿರುತ್ತೆ, ಸ್ವಯಾರ್ಜಿತ ಹಿತಾಸಕ್ತಿಗಳ ಸಾಮಾನ್ಯ ಹಿಡುವಳಿಗಳ ಆಸ್ತಿಯ ಒಟ್ಟು ಕುಟುಂಬವೂ ಇರುತ್ತೆ. ಜಂಟಿ ಹಿಡುವಳಿಗಳ ಕೋಪಾರ್ಸನರಿ ಆಸ್ತಿಯ ಕೋಪಾರ್ಸನರಿಯೂ ಜೀವಂತ ಇರುತ್ತೆ. ಅದು ವಿಭಾಗವಾಗುವವರೆಗೆ ಮುಂದುವರಿಯುತ್ತದೆ. ಒಮ್ಮೆ ಕಾನೂನು ರೀತ್ಯ ಬಾಗಾಂಶಗಳು ನಿರ್ಧಾರವಾದ ಮೇಲೆ, ಅದನ್ನು ಪಡೆಯುವ ಹಕ್ಕುಳ್ಳವನು ಪಡೆಯುವವರೆಗೆ ಒಟ್ಟು ಕುಟುಂಬದಲ್ಲಿ ಅಥವ ಕೋಪಾರ್ಸನರಿಯಲ್ಲಿ ಲೀನವಾಗಿರುತ್ತೆ.

ಸುಪ್ರೀಮ್ ಕೋರ್ಟಿನ ತೀರ್ಪಿನಲ್ಲಿ [1] 09–09–2005 ರಲ್ಲಿ ಬದುಕಿರುವ ಕೋಪಾರ್ಸನರ್ ಮತ್ತು ಬದುಕಿರುವ ಕೋಪಾರ್ಸನರ್ ಮಗಳಿಗೆ ಮಾತ್ರ ಈ ತಿದ್ದುಪಡಿ ಅನ್ವಯಿಸುತ್ತದೆ ಎಂದು ತೀರ್ಪಿತ್ತಿದೆ.

2005 ರಲ್ಲಿ ತಂದ ಬದಲಾವಣೆ ಏನು? ಕಲಂ 6 ಅನ್ನು ಬದಲಿಸಲಾಯಿತು, ಬದಲಾದುದ್ದು ಜಾರಿಯಾದ ದಿನಾಂಕ 09–09–2005, ಅದರಂತೆ ಬದಲಾದ ತಾರೀಖಿನಂದಿನಿಂದ ಹಿಂದು ಅವಿಭಕ್ತ ಕುಟುಂಬ ಯಾವುದು ಮಿತಾಕ್ಷರ ಕಾನೂನಿಂದ ಆಡಳಿತಾವಾಗಿದೆಯೋ, ಅದರಲ್ಲಿ ಕಲಂ 6(1) ರ ಪ್ರಕಾರ ಕೋಪಾರ್ಸನರ್ ಮಗಳು ಹುಟ್ಟಿನಿಂದ ಆಕೆಯ ಸ್ವಂತ ಹಕ್ಕಿನಲ್ಲಿ ಮಗನ ರೀತಿಯಲ್ಲಿಯೇ ಕೋಪಾರ್ಸನರ್ ಆಗುತ್ತಾಳೆ; ಆಕೆ ಮಗ ಆಗಿದ್ದರೆ ಯಾವ ಹಕ್ಕು ಕೋಪಾರ್ಸನರಿ ಸ್ವತ್ತಿನಲ್ಲಿ ಇರುತಿತ್ತೋ ಅದೇ ಹಕ್ಕು ಇರುತ್ತೆ; ಕೋಪಾರ್ಸೆನರಿ ಆಸ್ತಿಯಲ್ಲಿ ಮಗನಂತೆ ಅದೇ ಹೊಣೆಗಾರಿಕೆಗಳಿಗೆ ಒಳಪಟ್ಟಿರುತ್ತದೆ, ಮತ್ತು ಹಿಂದೂ ಮಿತಾಕ್ಷರ

---

[1] ಮಂಗಮ್ಮಾಳ್ ವಿ. ಟಿ.ಬಿ. ರಾಜು – ಎ.ಐ.ಆರ್ 2016 ಎಸ್.ಸಿ 769

ಕೋಪಾರ್ಸನರ್ ಬಗ್ಗೆ ಯಾವುದೇ ಉಲ್ಲೇಖವು ಒಂದು ಕೋಪಾರ್ಸನರ್ನ ಮಗಳ ಬಗ್ಗೆ ಉಲ್ಲೇಖ ಒಳಗೊಂಡಿರುತ್ತದೆ:

ಈ ಉಪವಿಭಾಗದಲ್ಲಿ (ಕಲಂ 6(1) ರಲ್ಲಿ) ಹೇಳಲಾಗಿರುವುದು 20-12-2004 ನೇ ದಿನಕ್ಕೆ ಮುಂಚಿತವಾಗಿ ಯಾವುದೇ ಡಿಸ್ಪೊಸಿಷನ್ (ವ್ಯವಸ್ಥೆಯ) ಅಥವ ಅಲಿನೇಷನ್ (ಹಸ್ತಾಂತರ) ಇವುಗಳನ್ನು ಸೇರಿಸಿಕೊಂಡು ಯಾವುದೇ ವಿಭಜನೆ ಅಥವ ಟೆಸ್ಟಮೆಂಟರಿ ಡಿಸ್ಪೊಸಿಷನ್ (ರುಜುವಾತು ವ್ಯವಸ್ಥೆಯ) ಮುಖಾಂತರ ವ್ಯವಸ್ಥೆಗೊಳಿಸಲ್ಪಟ್ಟಿರುವುದಕ್ಕೆ ಅನ್ವಯಿಸುವುದಿಲ್ಲ.

ಕಲಂ 6(1) ರಲ್ಲಿ ಹಿಂದು ಮಹಿಳೆಗೆ ಒದಗಿ ಬರುವ ಆಸ್ತಿಯನ್ನು ಕೋಪಾರ್ಸನರ್ಗಳ ಮಾಲೀಕತ್ವಕ್ಕೆ ವ್ಯಾಪ್ತಿಯಾಗಿ/ ಪರಿಣಾಮವಾಗಿ/ ಹೊರೆಯಾಗಿ (ಇನ್ಸಿಡೆನ್ಸಾಗಿ) ಆಕೆಯು ಹಿಡಿದಿಟ್ಟುಕೊಳ್ಳಬೇಕು. ಆಕೆಯು ಸದರಿ ಆಸ್ತಿಯನ್ನು ತನ್ನ ಟೆಸ್ಟಮೆಂಟರಿ ಡಿಸ್ಪೊಸಿಷನ್ (ರುಜುವಾತು ವ್ಯವಸ್ಥೆಯ) ಮೂಲಕ ಡಿಸ್ಪೋಸ್ (ವಿಲೇವಾರಿ) ಮಾಡಬಹುದು. ಹಾಲಿ ಜಾರಿಯಲ್ಲಿರುವ ಕಾನೂನು ಅಥವ ಈ ಕಾಯ್ದೆ ಅಂತಹ ಹಕ್ಕನ್ನು ಬಾದಿಸುವುದಿಲ್ಲ.

## ಕೋಪಾರ್ಸನರಿಯ ಕಾನೂನು ವ್ಯಾಪ್ತಿ ಮತ್ತು ಇತಿಮಿತಿಗಳು

ಕೆಲವು ತೀರ್ಪುಗಳಿಂದ/ ಕಾಯ್ದೆಗಳಿಂದ ಉದ್ಭವಿಸಿರುವ ಮಿತಾಕ್ಷರ ಕೋಪಾರ್ಸನರಿ, ಅವಿಭಕ್ತ ಕುಟುಂಬ ಮತ್ತು ಅದರ ಆಸ್ತಿಗಳ ಬಗೆಗಿನ ಸಿದ್ದಾಂತಗಳು, ಅದರ ಕಾನೂನು ಇತಿಮಿತಿಗಳು, ಅದರ ಕಾನೂನು ವ್ಯಾಪ್ತಿ

(1) ಹಿಂದು ಕುಟುಂಬ ಜಂಟಿಯಾಗಿದೆ ಎಂಬ ಪೂರ್ವಕಲ್ಪನೆ ಇರುತ್ತದೆ. – ಮುಲ್ಲಾ ರವರ ಹಿಂದು ಲಾ ಪುಸ್ತಕ 21 ನೇ ಆವೃತ್ತಿಯ ಪುಟ 352, ಪ್ಯಾರಾ 231(1) ರಲ್ಲಿ ಹೇಳಿರುವಂತೆ "ಸಾಮಾನ್ಯವಾಗಿ ಹೇಳುವುದಾದರೆ,

ಪ್ರತಿಯೊಂದು ಹಿಂದೂ ಕುಟುಂಬದ ಸಾಮಾನ್ಯ ಸ್ಥಿತಿಯು ಜಂಟಿಯಾಗಿದೆ. ಬಹುಶಃ ಪ್ರತಿಯೊಂದು ಕುಟುಂಬವೂ ಆಹಾರ, ಪೂಜೆ ಮತ್ತು ಎಸ್ಟೇಟ್ನಲ್ಲಿ ಜಂಟಿಯಾಗಿರುತ್ತದೆ. ವಿಭಜನೆಯ ರುಜುವಾತುಗಳ ಅನುಪಸ್ಥಿತಿಯಲ್ಲಿ, ಇದು ಕಾನೂನಿನ ಊಹೆಯಾಗಿದೆ."

(2) ಒಟ್ಟು ಕುಟುಂಬ ಇರುವ ಮಾತ್ರಕ್ಕೆ ಕುಟುಂಬದ ಸದಸ್ಯರು ಹೊಂದಿರುವ ಆಸ್ತಿಗಳು ಒಟ್ಟು ಕುಟುಂಬದ ಆಸ್ತಿಗಳು ಎಂಬ ಪೂರ್ವಕಲ್ಪನೆ ಇರುವುದಿಲ್ಲ. <– ಎ.ಐ.ಆರ್ 1969 ಎಸ್.ಸಿ 1076 –> ಯಾರು ಒಟ್ಟು ಕುಟುಂಬದ ಆಸ್ತಿಗಳು ಎಂದು ಪ್ರತಿಪಾದನೆ ಮಾಡುತ್ತಾರೋ ಅವರು ಅದು ಒಟ್ಟು ಕುಟುಂಬ ಆಸ್ತಿ ಎಂದು ರುಜುವಾತು ಪಡಿಸಬೇಕಿರುತ್ತದೆ. –> ಮನು/ ಎಸ್.ಸಿ/ 7260/2007. ಮುಲ್ಲಾ ರವರ ಹಿಂದು ಲಾ ಪುಸ್ತಕ 21 ನೇ ಆವೃತ್ತಿಯ ಪುಟ 352, ಪ್ಯಾರಾ 231(2) ರಲ್ಲಿ ಹೇಳಿರುವಂತೆ "ಒಂದು ಕುಟುಂಬವು ಜಂಟಿಯಾಗಿರುವುದರಿಂದ, ಜಂಟಿ ಆಸ್ತಿ ಹೊಂದಿದೆ ಎಂಬ ಊಹೆ ಇರುವುದಿಲ್ಲ, ಅದು ವಿಭಜನೆಗಾಗಿ ಒಂದು ಮೊಕದ್ದಮೆಯಾದಾಗ, ಆಸ್ತಿಯ ಯಾವುದೇ ನಿರ್ದಿಷ್ಟ ಐಟಂ ಜಂಟಿ ಕುಟುಂಬದ ಆಸ್ತಿ ಅಥವಾ ಒಂದು ಅಡಮಾನಕ್ಕಾಗಿ ಮೊಕದ್ದಮೆ ಹೂಡಿದಾಗ, ಒಂದು ಪಾರ್ಟಿ ಜಂಟಿ ಕುಟುಂಬ ಆಸ್ತಿ ಎಂದು ಪ್ರತಿಪಾದನೆ ಮಾಡಿದರೆ, ಅಂತಹ ಪಾರ್ಟಿಯು ಅದನ್ನು ಸಮರ್ಥಿಸುವಂತೆ ಸಾಬೀತುಪಡಿಸುವ ಹೊರೆ ಇರುತ್ತದೆ.

(3) ಯಾರು ಒಟ್ಟು ಕುಟುಂಬಕ್ಕೆ ಆರ್ಜಿಸಿದ ಸ್ವತ್ತು ಎಂದು ಪ್ರತಿಪಾದಿಸುತ್ತಾರೋ ಅಂತವರು ಸದರಿ ಆರ್ಜಿಸುವುದಕ್ಕೆ ನ್ಯೂಕ್ಲಿಯಸ್ (ಇಡಿಗಂಟು) ಇತ್ತು ಅದರಿಂದ ಬಂದಂತಾ ವರಮಾನದಿಂದ ಆರ್ಜಿಸಲಾಗಿದೆ ಎಂದು ರುಜುವಾತು ಪಡಿಸಬೇಕು.

(4) ಇಡಿಗಂಟು ಏನಿರಬೇಕು ಎಂಬುದು ಸ್ವತ್ತಿನ ಮೌಲ್ಯ ಮತ್ತು ಸ್ವಭಾವದ ಮೇಲೆ ಅವಲಂಬಿಸಿದೆ.

(5) ಅಂತಹ ಇಡಿಗಂಟು ಇದೆ ಎಂಬ ಮಾತ್ರಕ್ಕೆ ಹೊಸ ಆಸ್ತಿಗಳು ಕುಟುಂಬ ಸದಸ್ಯನು ಆರ್ಜಿಸಿದ್ದಾನೆಂಬುದನ್ನು ಒಟ್ಟು ಕುಟುಂಬದ ಆಸ್ತಿ ಎಂದು ಹೇಳಲಾಗುವುದಿಲ್ಲ. –> ಮನು/ಕೆ.ಎ/ 7395/2007

(6) ಅಂತಹ ಒಟ್ಟು ಕುಟುಂಬದ ಸದಸ್ಯನು ಒಟ್ಟು ಕುಟುಂಬದ ಆಸ್ತಿಗಳ ಬಳಸಿಕೊಳ್ಳುವ ಸ್ಥಾನ, ಅಥವ ನಿಯಂತ್ರಣ ಅಥವ ಉಸ್ತುವಾರಿ ಹೊಂದಿ ಇನ್ನು ಹೆಚ್ಚಿನ ಆಸ್ತಿಗಳನ್ನು ಆರ್ಜಿಸಿದ್ದರೆ ಅಂತಹ ಆಸ್ತಿಗಳು ಒಟ್ಟುಕುಟುಂಬದ ಸ್ವತ್ತುಗಳು ಆಗುತ್ತವೆ. (7) ಸದರಿ ಹೊಸ ಆಸ್ತಿ ಆರ್ಜಿಸಲು ಬೇಕಾಗುವ ಇಡಿಗಂಟು ಸೇರಿಸಲು ಜಂಟಿ ಕುಟುಂಬದ ಆಸ್ತಿಗಳು ಸಾಕಾಗುತ್ತದೆಯೇ ಎಂಬ ವಿಚಾರವು ವಾಸ್ತವಾಂಶದ ಪ್ರಶ್ನೆಯಾಗಿರುತ್ತದೆ.

(8) ಅಂತಹ ವಾಸ್ತವಾಂಶವನ್ನು ನೇರ ಸಾಕ್ಷ್ಯಾಧಾರದಿಂದ ಅಥವ ಸಾಂಧರ್ಬಿಕ ಸಾಕ್ಷ್ಯಾಧಾರದಿಂದ ರುಜುವಾತುಪಡಿಸಬೇಕಿರುತ್ತದೆ, ಅಂತಹ ಸಾಕ್ಷಿಯು ಸ್ಪಷ್ಟವಾಗಿರಬೇಕು ಮತ್ತು ಮುಕ್ತಾಯಗೊಳಿಸುವಂತಿರಬೇಕು. (ಹಾಗೆ ರುಜುವಾತು ಪಡಿಸಿದ ನಂತರ ಯಾರು ಅದನ್ನು ಸ್ವಯಾರ್ಜಿತ ಅಂತ ಪ್ರತಿಪಾದಿಸುತ್ತಾರೋ ಅವರು ಅದು ಸ್ವಯಾರ್ಜಿತವೇ ಎಂದು ರುಜುವಾತು ಪಡಿಸಬೇಕಿರುತ್ತದೆ –> ಎ.ಐ.ಆರ್ 2003 ಎಸ್.ಸಿ 3800)

(9) 1956 ರಿಂದ 2005 ರವರೆಗೆ ಕೋಪಾರ್ಸನರಿ ಸ್ವತ್ತಿನಲ್ಲಿನ ಬಾಗವನ್ನು ಬಿಟ್ಟು ಸತ್ತಾಗ ಆತನಿಗೆ 1ನೇ ದರ್ಜೆ ಮಹಿಳಾ ವಾರಸ್ಸು ಅಥವ ಅವಳ ಮುಖೇನ ಹಕ್ಕು ಸಾದಿಸುವ ಪುರುಷ ಇದ್ದಲ್ಲಿ, ಸತ್ತ ದಿನಾಂಕಕ್ಕೆ ಮುಂಚೆ ಕಾಲ್ಪನಿಕ ವಿಭಾಗ (ನೋಷನಲ್ ಪಾರ್ಟೀಷನ್) ಆಗುತ್ತಿತ್ತು. ಅಂದಿಗೆ ಆ ವ್ಯಕ್ತಿಯ ಗಂಡು ಮಕ್ಕಳು ತಮ್ಮ ಕೋಪಾರ್ಸನರಿ ಭಾಗಾಂಶದ ಜೊತೆಯಲ್ಲಿ ಅಪ್ಪನ ಬಾಗಾಂಶದಲ್ಲಿಯೂ ಇತರೆ ಮಹಿಳಾ 1ನೇ ದರ್ಜೆ ವಾರಸ್ಸಿನ ಜೊತೆಯಲ್ಲಿ ಆಸ್ತಿ ಪಡೆಯುತ್ತಿದ್ದರು.

(10) 09–09–2005 ರ ನಂತರ ಅಂತಹ ಕೋಪಾರ್ಸನರ್ ಸತ್ತಾಗ ಹೊಸ ಕಲಂ 6(3) ರಲ್ಲಿ ತೀರ್ಮಾನಿಸುವ (ಡೀಮ್ಡ್) ವಿಭಾಗ ಆಗುತ್ತದೆ. ಇಲ್ಲಿ ಮಗಳು ಮತ್ತು ಮಗ ಇತರೆ 1ನೇ ದರ್ಜೆ ವಾರಸ್ಸಿನೊಂದಿಗೆ ತಮ್ಮ ಕೋಪಾರ್ಸನರಿ ಭಾಗದೊಂದಿಗೆ ಅಪ್ಪನ ಬಾಗದಲ್ಲೂ ಆಸ್ತಿ ಬಾಗ ಪಡೆಯುವ ಹಕ್ಕು ಪಡೆಯುತ್ತಾರೆ.

(11) ಒಮ್ಮೆ ಇಂತಹ ಕಾಲ್ಪನಿಕ ವಿಭಾಗ ಮತ್ತು ತೀರ್ಮಾನಿಸುವ ವಿಭಾಗ ಅಥವ ನೋಟೀಸಿನ ಮುಖಾಂತರ ವಿಭಜಿಸಲು ವ್ಯಕ್ತಪಡಿಸುವ ವಿಭಾಗದ ಘಟಣೆಗಳು ನಡೆದರೆ ಅಂತಹ ತಾರೀಖಿನಿಂದ ಈಚೆಗೆ ಹಿಂದು ಅವಿಭಕ್ತ ಕುಟುಂಬ ಅಸ್ತಿತ್ವದಲ್ಲಿ ಇರುವುದಿಲ್ಲ. ಇತರೆ ಭಾಗಸ್ತರು ಸದರಿ ಆಸ್ತಿಯನ್ನು ಎಲ್ಲರನ್ನೊಳಗೊಂಡ ನಂಬಿಕೆ ರೀತಿಯಲ್ಲಿ ವಿನಿಯೋಗಿಸಬೇಕು ಎಂಬುದು ಇರುವುದಿಲ್ಲ. ಅಲ್ಲಿಂದ ಈಚೆಗೆ ಆರ್ಜಿಸಿದ ಸ್ವತ್ತು ಒಟ್ಟು ಕುಟುಂಬಕ್ಕೆ ಸೇರಿದ್ದು ಎನ್ನಲು ಬರುವುದಿಲ್ಲ. ಅಲ್ಲಿಂದ ಈಚೆಗೆ ಬಾಗವನ್ನು ಕೇಳುವವರು ಸ್ವತ್ತಿನಲ್ಲಿನ ಫಸಲಿನ/ಆಧಾಯದ ಲೆಕ್ಕ ಕೇಳಿ ಅದರಲ್ಲಿ ಬಾಗ ಪಡೆಯಬಹುದೇ ಹೊರತು ಬೇರೆ ಹಕ್ಕುಗಳು ಲಭ್ಯವಾಗುವುದಿಲ್ಲ. ಸುಪ್ರೀಮ್ ಕೋರ್ಟ್ ಈ ಬಗ್ಗೆ ಮತ್ತೊಂದು ವ್ಯಾಖ್ಯಾನ ಕೊಟ್ಟಿದೆ "ಯಾವುದೇ ಜಂಟಿ ಕುಟುಂಬದ ಆಸ್ತಿಯ ಪಾತ್ರವು ಜಂಟಿ ಕುಟುಂಬದ ಸ್ಥಾನಮಾನವನ್ನು ಬೇರ್ಪಡಿಸುವುದರೊಂದಿಗೆ ಬದಲಾಗುವುದಿಲ್ಲ ಮತ್ತು ಜಂಟಿ ಕುಟುಂಬದ ಆಸ್ತಿ ಅಸ್ತಿತ್ವದಲ್ಲಿದ್ದರೆ ಮತ್ತು ಸಹ–ಪಾಲುದಾರರಲ್ಲಿ ವಿಭಜನೆಯಾಗದವರೆಗೂ ಜಂಟಿ ಕುಟುಂಬ ಆಸ್ತಿಯು ಅದರ ಜಂಟಿ ಕುಟುಂಬ ಪಾತ್ರವನ್ನು ಉಳಿಸಿಕೊಳ್ಳುತ್ತಲೇ ಇರುತ್ತದೆ."[1]

(12) ಹಿಂದು ವ್ಯಕ್ತಿ ಸತ್ತಾಗ ಆತನ ವಾರಸ್ಸುದಾರರಾಗಿ ಆತನ ಹೆಂಡತಿ ಮಕ್ಕಳು ಮತ್ತು ತಾಯಿ ಬರುತ್ತಾರೆ ಹೊರತು ಮಗ ಬದುಕಿದ್ದಂಗೆ ಆತನ ಮೊಮ್ಮಗ ಆಸ್ತಿಯಲ್ಲಿ ಹಕ್ಕು ಪಡೆಯುವುದಿಲ್ಲ.

---

[1] ಭಗವಂತ್ ವಿ. ದಿಗಂಬರ್ – ಎ.ಐ.ಆರ್ 1986 ಎಸ್.ಸಿ 79

(13) ಹಿಂದುಗಳಲ್ಲಿ ಹುಟ್ಟುತ್ತಲೇ ಆಸ್ತಿಯಲ್ಲಿ ಹಕ್ಕು ಪಡೆಯುತ್ತಾರೆ ಎಂದರೆ ಆತ/ಆಕೆಯ ತಂದೆಯ ಕೋಪಾರ್ಸನರಿ ಆಸ್ತಿ ಹಕ್ಕಿನಲ್ಲಿ ಬಾಗಾಂಶ ಉಳ್ಳವರಾಗಿ ಜನಿಸುತ್ತಾರೆ, ಹುಟ್ಟುವಾಗಲೇ ತಾತನ ಆಸ್ತಿಯಲ್ಲಿ ಹಕ್ಕುಳ್ಳವರಾಗಿ ಅಲ್ಲ.

(14) ಹಿಂದು ಮಹಿಳೆಗೆ ಆಸ್ತಿ ಕೊಟ್ಟ ನಂತರ ಆಕೆಯ ಮಕ್ಕಳು ಆಸ್ತಿಯಲ್ಲಿ ಹುಟ್ಟುತ್ತಲೇ ಆಸ್ತಿ ಹಕ್ಕನ್ನು ಪಡೆಯುತ್ತಾರೆಯೇ? ಎಂಬ ವಿಚಾರದಲ್ಲಿ ಕಲಂ 6(1) ರಲ್ಲಿ "ಆಕೆಯ ಸ್ವಂತ ಹಕ್ಕಿನಲ್ಲಿ" ಹಕ್ಕು ಪಡೆಯುತ್ತಾಳೆ ಎಂದು ಬರೆದಿದ್ದರೂ ಮಗನಂತೆ ಕೋಪಾರ್ಸನರಿ ಹಕ್ಕು ಬಾದ್ಯತೆ ಇರುತ್ತೆ ಎಂದಿರುವುದರಿಂದ 1ನೇ ದರ್ಜೆ ವಾರಸ್ಸುದಾರರಲ್ಲಿ ಸತ್ತ ಮಗಳ ಮಕ್ಕಳು ಮತ್ತು ಆ ಮಕ್ಕಳಲ್ಲಿ ಸತ್ತವರ ಮಕ್ಕಳನ್ನು ಸೇರಿಸಿರುವುದರಿಂದ ಮಗಳ ಮಕ್ಕಳೂ ಹುಟ್ಟುತ್ತಲೇ ಅಂತಹ ಆಸ್ತಿಯಲ್ಲಿ ತಮ್ಮ ತಾಯಿಯ ಬಾಗಾಂಶದಲ್ಲಿ ಬಾಗಾಂಶ ಹೊಂದಿ ಹುಟ್ಟುತ್ತಾರೆ, ಆದರೆ ಇದರ ವಿರುದ್ದವಾಗ ಒಂದು ಅಂಶ ಇದೆ ಹಿಂದು ಉತ್ತರಾಧಿಕಾರಿತ್ವ ಕಾಯ್ದೆ ಕಲಂ 14, 15, 16 ನೋಡಬೇಕಿರುತ್ತದೆ. ಕಲಂ 14 ರಲ್ಲಿ ಸದರಿ ಮಹಿಳೆ ವಿಭಾಗದಿಂದ ಪಡೆದದ್ದು, ಪಿತ್ರಾರ್ಜಿತವಾಗಿ ಪಡೆದದ್ದು, ಇನ್ನಿತರೆ ವಿಧಾನದಲ್ಲಿ ಪಡೆದಿರುವುದು ಆಕೆಯ ಸಂಪೂರ್ಣ ಹಕ್ಕಿಗೆ ಒಳಪಡುತ್ತದೆ. ಕಲಂ 15 ಮತ್ತು 16 ರಲ್ಲಿ ಅಲ್ಲಿ ಹೇಳಿರುವುದೇ ಆದ ರೀತಿಯಲ್ಲಿ ವಿಲ್ ಬರೆಯದೆ ಸತ್ತ ಮಹಿಳೆಯ ಆಸ್ತಿ ವಿತರಣೆ ಆಗುತ್ತದೆ. ಕಲಂ 30 ರಲ್ಲಿ ಆಕೆ ತನ್ನ ಪಿತ್ರಾರ್ಜಿತ ಆಸ್ತಿಯ ಹಕ್ಕನ್ನು ವಿಲೇವಾರಿ ಮಾಡುವ ಹಕ್ಕು ಹೊಂದಿದ್ದಾರೆ, ವಿಲ್ ಮುಖೇನ ಆಗಲಿ ಅಥವ ಇತರೆ ರುಜುವಾತುಪಡಿಸುವ ಇತ್ಯರ್ಥದಿಂದಾಗಲೀ ವಿಲೇವಾರಿ ಮಾಡಬಹುದಾಗಿರುತ್ತದೆ. 2005 ರ ತಿದ್ದುಪಡಿಯಲ್ಲಿ ಸದರಿ ತಿದ್ದುಪಡಿ ಮಾಡಿದ ಅಂಶಗಳಿಗೆ ವಿರುದ್ದವಾಗಿ ಯಾವುದೇ ನಿಯಮವಿದ್ದರೆ ಅದನ್ನು ಅನೂರ್ಜಿತಗೊಳಿಸಿ ಕಲಂ 6(2) ರಲ್ಲಿ ಇರುವುದರಿಂದ, ಸದರಿ ಮಹಿಳಾ

ಕೋಪಾರ್ಸನರ್ ಮಕ್ಕಳು ಆಕೆಯ ಜೊತೆಯಲ್ಲಿ 2005 ರ ನಂತರ ಹುಟ್ಟುತ್ತಲೇ ಹಕ್ಕುಳ್ಳವರಾಗಿರುತ್ತಾರೆ. ಆಕೆಗೆ ವಿಲ್ ಬರೆದು ವಿಲೇ ಮಾಡುವ ಹಕ್ಕು ನೀಡಲಾಗಿರುವುದರಿಂದ ಆಕೆಗೆ ಸಂಪೂರ್ಣ ಮಾಲೀಕತ್ವ ನೀಡಲಾಗಿರುವುದರಿಂದ ಆಕೆ ಒಮ್ಮೆ ಬಾಗಾಂಶವನ್ನು ಪಡೆಯುತ್ತಲೇ ಅದು ಆಕೆಯ ಸಂಪೂರ್ಣ ಮಾಲೀಕತ್ವದ ಸ್ವತ್ತು ಆಗುತ್ತದೆ ಎನ್ನಲು ಬರುವುದಿಲ್ಲ. ಅದನ್ನು ಆಕೆ ತನ್ನ ಮಕ್ಕಳ ಜೊತೆಯಲ್ಲಿ ಕೋಪಾರ್ಸನರ್ ಆಗಿ ಉಪಯೋಗಿಸಬೇಕು, ಕೋಪಾರ್ಸನರಿ ಮತ್ತು ಒಟ್ಟುಕುಟುಂಬದ ಸಿದ್ಧಾಂತಗಳಂತೆ ಆಕೆ ತನ್ನ ಸ್ವಯಾರ್ಜಿತವನ್ನು ಬೇಕಾದರೂ ಒಟ್ಟುಕುಟುಂಬದ ಸ್ವತ್ತಿಗೆ ಎಸೆದು ಉಪಯೋಗಿಸಬಹುದು, ಸಂಪೂರ್ಣ ಮಾಲೀಕತ್ವದಲ್ಲಾದರೂ ಉಪಯೋಗಿಸಬಹುದು, ಅದುದರಿಂದ ಮಗಳ ಮಕ್ಕಳು ಆಕೆಯ ಪಿತ್ರಾರ್ಜಿತ ಆಸ್ತಿಯಲ್ಲಿ ಹುಟ್ಟುತ್ತಲೇ ಹಕ್ಕುದಾರರಾಗಿರುತ್ತಾರೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕಲಂ 6(2) ರಲ್ಲಿ ಆಕೆ ತನಗೆ ಪಿತ್ರಾರ್ಜಿತವಾಗಿ ಬರಬಹುದಾದ ಆಸ್ತಿಗಳನ್ನು ಕೋಪಾರ್ಸನರ್ ಮಾಲೀಕತ್ವದ ಸಂಗತಿಗಳಿಗೆ (ಇನ್ಸಿಡೆಂಟ್ಸ್) ಪೂರಕವಾಗಿ ಹೊಂದಿರಬೇಕಿರುತ್ತದೆ ಮತ್ತು ಯಾವುದೇ ಕಾನೂನು ಈ ಕಾಯ್ದೆಯಲ್ಲಿದ್ದರೂ ಬೇರೆ ಜಾರಿಯಲ್ಲಿರುವ ಕಾನೂನು ಇದ್ದರೂ ಅಂತಹ ಸಂಗತಿಗಳಿಗೆ ಪೂರಕವಾಗಿ ರುಜುವಾತು ಪಡಿಸುವ ಇತ್ಯರ್ಥದ ಮೂಲಕ ವರ್ಗಾವಣೆ ಮಾಡಬಹುದಾಗಿರುತ್ತದೆ.

(15) ಹಿಂದು ವ್ಯಕ್ತಿ ತನ್ನ ಸತ್ತ ತಂದೆಯಿಂದ ಏಕ ವಾರಸ್ಸುದಾರನಾಗಿ ಆಸ್ತಿ ಆರ್ಜಿಸಿದಾಗ ಆತನಿಗೆ ಮಕ್ಕಳಿಲ್ಲವಾದರೆ ಅದು ಸ್ವಯಾರ್ಜಿತವಾಗಿ ಆರ್ಜಿಸಿದ ಸ್ವತ್ತು ಆಗುತ್ತದೆ. ಅದೇ ಮಗಳು ತನ್ನ ಸತ್ತ ತಂದೆಯಿಂದ ಏಕವಾರಸ್ಸುದಾರಳಾಗಿ ಆಸ್ತಿಯನ್ನು ಆರ್ಜಿಸಿದಾಗ ಅದು ಆಕೆಯ ಸ್ವಯಾರ್ಜಿತವಾಗುತ್ತದೆ, ಅಲ್ಲಿ ಮಕ್ಕಳಿರಲಿ ಬಿಡಲಿ ಕಲಂ 14 ರ ರೀತ್ಯ ಲೆಕ್ಕಕ್ಕೆ ಬರುವುದಿಲ್ಲ

(16) ಹಿಂದು ವ್ಯಕ್ತಿ ತನ್ನ ತಂದೆಯ ಸ್ವಯಾರ್ಜಿತ ಆಸ್ತಿ/ ವಿಭಜಿತ ತಂದೆಯ ಭಾಗ/ ತಾಯಿಯ ಆಸ್ತಿ/ ಇತರೆ ಬೇರೆಯವರಿಂದ ಆರ್ಜಿಸಿದ ಅಂತಹ ಆಸ್ತಿಗಳು ತನ್ನ ಸ್ವಯಾರ್ಜಿತವಾಗಿಯೇ ಪಡೆಯುತ್ತಾನೆ. ಇದರಲ್ಲಿ ತನ್ನ ಮಕ್ಕಳು ಹುಟ್ಟುತ್ತಲೇ ಹಕ್ಕು ಪಡೆಯುವುದಿಲ್ಲ.

(17) ಈಗ ಹಿಂದು ಮಹಿಳೆಗೆ ಆಸ್ತಿ ಹಕ್ಕು ಕೊಟ್ಟಿರುವುದರಿಂದ ಪಿತ್ರಾರ್ಜಿತ ಸ್ವತ್ತು ಎನ್ನುವ ಗ್ರಹಿಕೆ ಮಾಯವಾಗುತ್ತದೆ, ಮಾತ್ರಾರ್ಜಿತದಲ್ಲೂ 09–09–2005 ರ ನಂತರ ಮಹಿಳೆಯ ಮಕ್ಕಳು ಆಕೆಯ ಕೋಪಾರ್ಸನರಿ ಸ್ವತ್ತಿನಲ್ಲಿ ಸೀಮಿತವಾಗಿ ಸಮಾನ ಬಾಗಾಂಶ ಉಳ್ಳವರಾಗುತ್ತಾರೆ.

(18) ಪೂರ್ವಿಕರ ಸ್ವತ್ತು (ಎನ್ಸಿಸ್ಟ್ರಲ್ ಪ್ರಾಪರ್ಟೀಸ್) ಎಲ್ಲಾ ಕೋಪಾರ್ಸನರ್ಗಳಿಗೆ ಪ್ರಾಪ್ತವಾಗುತ್ತದೆ. ಅಲ್ಲಿ ಎಲ್ಲಾ ಕೋಪಾರ್ಸನರ್ಗಳು ಅವಿಭಜಿತ ಸ್ವತ್ತುಗಳಿಗೆ ಮಾಲೀಕರಿರುತ್ತಾರೆ. 09–09–2005 ರಲ್ಲಿ ಜೀವಂತ ಇರುವ ಮಗಳು ಮತ್ತು ಆಕೆಯ ತಂದೆ ಕೋಪಾರ್ಸನರ್ ಆಗಿದ್ದಲ್ಲಿ ಅಂತಹ ಕೋಪಾರ್ಸನರಿಗೆ ಹುಟ್ಟಿನಿಂದಲೇ ಮಗಳು ಕೋಪಾರ್ಸನರ್ ಆಗುತ್ತಾಳೆ. – ಅನೇಕ ತೀರ್ಪುಗಳಲ್ಲಿ ಉಲ್ಲೇಕಿಸಿದಂತೆ ಮುಲ್ಲಾ ರವರ ಹಿಂದು ಲಾ ಪುಸ್ತಕ 15ನೇ ಆವೃತ್ತಿಯ ಪುಟ 288, ಪ್ಯಾರಾ 223 ರಲ್ಲಿ ಹೇಳಿರುವಂತೆ "223. ಪೂರ್ವಿಕರ ಸ್ವತ್ತು – (1) ತಂದೆ ತಂದೆಯ ಪೂರ್ವಜರಿಂದ ಆರ್ಜಿಸಿದ ಆನುವಂಶಿಕ ಆಸ್ತಿ – ತಂದೆ ತಂದೆ, ತಂದೆಯ ತಂದೆ ಅಥವಾ ತಂದೆ ತಂದೆಯ ತಂದೆ, ನಿಂದ ಪುರುಷ[1] ಹಿಂದೂ ಆನುವಂಶಿಕವಾಗಿ ಆರ್ಜಿಸಿದ ಎಲ್ಲಾ ಆಸ್ತಿ ಪೂರ್ವಿಕರ ಆಸ್ತಿ (ಏನ್ಸಿಸ್ಟ್ರಲ್ ಪ್ರಾಪರ್ಟಿ) ಆಗುತ್ತದೆ. ಮಿತಾಕ್ಷರ ಕಾನೂನು ಮಕ್ಕಳು, ಮೊಮ್ಮಕ್ಕಳು ಮತ್ತು ಮರಿ ಮೊಮ್ಮಕ್ಕಳು, ಅದನ್ನು ಪಡೆದವರು, ಹುಟ್ಟಿನಿಂದ ಅದರಲ್ಲಿ ಆಸಕ್ತಿಯನ್ನು ಪಡೆದುಕೊಳ್ಳುತ್ತಾರೆ, ಅವರ ಜನ್ಮದ ಸಮಯದಲ್ಲಿ ಅವರ ಹಕ್ಕುಗಳು ಪ್ರಾರಂಬವಾಗುತ್ತವೆ ..........." – 223. ಪೂರ್ವಿಕರ

---

[1] ೨೦೦೫ ರ ತಿದ್ದುಪಡಿಯ ನಂತರ ಇದರಲ್ಲಿ ಮಹಿಳೆಯನ್ನೂ ಸೇರಿಸಲಾಗಿದೆ

ಸ್ವತ್ತು – (4) ವಿಭಾಗದಲ್ಲಿ ಬಾಗಾಂಶವು ಕೊಟ್ಟಿರುವುದು –– ಪೂರ್ವಿಕರ ಆಸ್ತಿಯ ವಿಭಜನೆಯ ಮೇಲೆ ಕೋಪಾರ್ಸನರ್ ಪಡೆಯುವ ಪಾಲು ತನ್ನ ಪುರುಷ ಮಕ್ಕಳಿಗೆ ಸಂಬಂಧಿಸಿದಂತೆ ಪೂರ್ವಜ ಆಸ್ತಿ ಆಗುತ್ತದೆ. ಅವರು ಜನನದ ಮೂಲಕ ಆಸಕ್ತಿ ವಹಿಸುತ್ತಾರೆ, ಅವರು ವಿಭಜನೆಯ ಸಮಯದಲ್ಲಿ ಅಸ್ತಿತ್ವದಲ್ಲಿದ್ದರೆ ಅಥವಾ ತರುವಾಯ ಹುಟ್ಟಿದ್ದರೆ. ಆದಾಗ್ಯೂ, ಅಂತಹ ಪಾಲು, ಅವನ ಪುರುಷ ಮಕ್ಕಳಿಗೆ ಸಂಬಂಧಿಸಿದಂತೆ ಪೂರ್ವಿಕ ಆಸ್ತಿಯಾಗಿದೆ. ಇತರ ಸಂಬಂಧಗಳ ಬಗ್ಗೆ, ಅದು ಪ್ರತ್ಯೇಕ ಆಸ್ತಿಯಾಗಿದೆ ಮತ್ತು ಕೊಪಾರ್ಸೆನರ್ ಪುರುಷ ವಾರಸ್ಸು ಉಳಿಸದೆ ಮರಣಿಸಿದರೆ, ಉತ್ತರಾಧಿಕಾರದಿಂದ ಅವನ ಉತ್ತರಾಧಿಕಾರಿಗಳಿಗೆ ಹಾದುಹೋಗುತ್ತದೆ.

(19) 09–09–2005 ರ ನಂತರ ಒಬ್ಬ ಹಿಂದು ವ್ಯಕ್ತಿ ತನ್ನ ಸಹೋದರ/ ಸಹೋದರಿ ಮತ್ತು ತಂದೆ ಜೊತೆ ಕೋಪಾರ್ಸನರ್ ಆಗಿ ಸಮಭಾಗವನ್ನು ಅಂತಹ ಕೋಪಾರ್ಸನರಿ ಸ್ವತ್ತುಗಳಲ್ಲಿ ಹೊಂದಿದ್ದರೆ. ಅದೇ ವ್ಯಕ್ತಿ ತನ್ನ ಮಕ್ಕಳ ಜೊತೆಯಲ್ಲಿ ಆತನ ಕೋಪಾರ್ಸನರಿ ಸ್ವತ್ತಿನ ಬಾಗದಲ್ಲಿ ಸಮಾನ ಹಕ್ಕುಳವನಾಗಿ ಇನ್ನೊಂದು ಕೋಪಾರ್ಸನರಿ ಹೊಂದಿರುತ್ತಾನೆ. ಒಂದರೊಳಗೆ ಒಂದು ತನ್ನದೇ ಆದ ವಿಶಿಷ್ಟ ಹಕ್ಕು ಬಾದ್ಯತೆಗಳಿಂದ ಕೂಡಿರುತ್ತದೆ.

(20) ಒಟ್ಟು ಕುಟುಂಬದ ಸ್ವತ್ತಿನಲ್ಲಿ ಪೂರ್ವಜರ ಸ್ವತ್ತು, ಅದರಿಂದ ಪುನರ್ ಆರ್ಜಿಸಿದ ಸ್ವತ್ತುಗಳು ಸೇರಿರುತ್ತವೆ. ಸ್ವಯಾರ್ಜಿತ ಸ್ವತ್ತುಗಳು ಒಟ್ಟುಕುಟೂಂಬಕ್ಕೆ ಬಿಟ್ಟುಕೊಟ್ಟ ಸ್ವತ್ತುಗಳು ಸೇರಿರುತ್ತವೆ.

(21) ಕೋಪಾರ್ಸನರಿ ವಿಭಜನೆ ಆದರೆ ತನ್ನ ಅಸ್ತಿತ್ವವನ್ನು ಒಂದು ನಿರ್ದಿಷ್ಟ ಹಂತಕ್ಕೆ ಕಳೆದುಕೊಳ್ಳುತ್ತದೆ. 20–12–2004 ರಿಂದ ಮುಂಚೆ ಅಂತಹ ನೊಂದಾಯಿತ ವಿಭಜನೆ ಆದ ಕೋಪಾರ್ಸನರಿ ಕಾನೂನು ರೀತ್ಯ ಮುಕ್ತಾಯವಾಗುತ್ತದೆ. ಅಂತಹ ಮುಕ್ತಾಯವಾದ ಕೋಪಾರ್ಸನರಿಯಲ್ಲಿ ತಾನು ಕೋಪಾರ್ಸನರ್ ಎಂದು ಹಕ್ಕು ಪ್ರತಿಪಾದಿಸಲು ಬರುವುದಿಲ್ಲ.

(22) 1956 ರ ಕಾಯ್ದೆ ಕಲಂ 6 ರಲ್ಲಿ ಹಿಂದು ಒಟ್ಟು ಕುಟುಂಬ ಎಂಬ ಪದ ಇರಲಿಲ್ಲ ಹಿಂದು ಮಿತಾಕ್ಷರ ಕೋಪಾರ್ಸನರ್ ಅಂತ ಮಾತ್ರ ಇತ್ತು 2005 ರ ತಿದ್ದುಪಡಿಯಲ್ಲಿ ಪ್ರಥಮ ಬಾರಿಗೆ ಮಿತಾಕ್ಷರ ಕಾನೂನಿನಿಂದ ಆಡಳಿತವಾಗುವ ಹಿಂದು ಒಟ್ಟು ಕುಟುಂಬದಲ್ಲಿ, ಕೋಪಾರ್ಸನರ್ ಮಗಳಿಗೆ ಹಕ್ಕು ನೀಡಲಾಗಿದೆ ಎಂದು ಹೇಳುತ್ತೆ.

(23) ಕೋಪಾರ್ಸೆನರ್ಗಳ ಪೈಕಿ ಒಬ್ಬರು ಜಂಟಿ ಆಸ್ತಿಯ ಸ್ವಾಧೀನದಲ್ಲಿ ಇಲ್ಲ ಎಂಬ ಅಂಶವು ಆತ ಹೊರಹಾಕಲ್ಪಟ್ಟಿದ್ದಾನೆ ಎಂಬ ಅರ್ಥವಲ್ಲ. ಕುಟುಂಬದ ಸದಸ್ಯರೊಬ್ಬರು ಕುಟುಂಬದ ಆಸ್ತಿಯ ಸ್ವಾಧೀನವನ್ನು ಹೊಂದಿರುವರು ಎಂಬ ಮಾತ್ರಕ್ಕೆ ಅದು ಇತರ ಸದಸ್ಯರಿಗೆ ವ್ಯತಿರಿಕ್ತವಾಗುವುದಿಲ್ಲ ಆದರೆ ಸ್ವತಃ ಮತ್ತು ಇತರ ಸದಸ್ಯರ ಪರವಾಗಿ ಸ್ವಾಧೀನ ಇರಬೇಕು. ಆದ್ದರಿಂದ, ಒಬ್ಬರ ಸ್ವಾಧೀನವು ಎಲ್ಲರ ಸ್ವಾಧೀನವಾಗಿದೆ. (ಎ.ಐ.ಆರ್ 1995 ಎಸ್.ಸಿ 895)

(24) ಕೇವಲ ಹಿರಿಯ ಸದಸ್ಯರೊಬ್ಬರ ಹೆಸರಿನಲ್ಲಿ ಮುಟೇಷನ್ ಆಗಿದೆ ಎಂಬ ಮಾತ್ರಕ್ಕೆ ಅದು ಕಂದಾಯ ಕಟ್ಟಲು ಮಾತ್ರವಿರುತ್ತದೆ ಹೊರತು ಅದುವೇ ವ್ಯತಿರಿಕ್ತ ಸ್ವಾಧೀನತೆಗೆ ತಳಹದಿ ಆಗಲಾರದು. ಸ್ವಾಧೀನವನ್ನು ಮಾಲೀಕತ್ವಕ್ಕೆ ಉಲ್ಲೇಖಿಸಲಾಗುತ್ತಾದರೂ ಅದು ವ್ಯತಿರಿಕ್ತ ಎಂದು ಪರಿಗಣಿಸಲಾಗದು (ಎ.ಐ.ಆರ್ 1995 ಎಸ್.ಸಿ 895)

(25) ಎಲ್ಲಿವರೆಗೆ ವಿಭಾಗವಾಗಿರುವುದಿಲ್ಲವೋ ಅಲ್ಲಿವರೆಗೆ ವ್ಯತಿರಿಕ್ತ ಸ್ವಾಧೀನ ಕೇಳಲಾಗುವುದಿಲ್ಲ (2001(10) ಎಸ್.ಸಿ.ಸಿ 434)

(26) ಕೋಪಾರ್ಸನರಿ ಎಂಬುದು ಹಿಂದು ಕಾನೂನಿನಿಂದ ರಚಿತವಾಗಿರುವುದೇ ಹೊರತು ಅದು ಕರಾರಿನಿಂದ ಮಾಡುವುದಕ್ಕೆ ಬರುವುದಿಲ್ಲ (ಎ.ಐ.ಆರ್ 1962 ಎಸ್.ಸಿ 287)

(27) ಎನ್.ಆರ್. ರಾಘವಾಚಾರಿಯಾರ್ ರವರು ತಮ್ಮ ಹಿಂದು ಲಾ ಪುಸ್ತಕದಲ್ಲಿ ಕೋಪಾರ್ಸನರಿ ಸ್ವತ್ತನ್ನು ನಾಲ್ಕು ವಿದವಾಗಿ ವಿಂಗಡಿಸಿದ್ದಾರೆ

ಒಂದು ಪೂರ್ವಜರ ಸ್ವತ್ತು ಎರಡನೆಯದು ಪೂರ್ವಜರ ಸ್ವತ್ತಿನ ಸಹಾಯದಿಂದ ಕೋಪಾರ್ಸನರ್ ರವರುಗಳು ಆರ್ಜಿಸಿರುವ ಸ್ವತ್ತುಗಳು, ಮೂರನೆಯದು ಕೋಪಾರ್ಸನರ್ಗಳು ಯಾವುದೇ ಸಹಾಯವಿಲ್ಲದೆ ಜಂಟಿಯಾಗಿ ಆರ್ಜಿಸಿರುವ ಸ್ವತ್ತುಗಳಲ್ಲಿ ಅವರು ಅದನ್ನು ಒಟ್ಟು ಕುಟುಂಬದ ಸ್ವತ್ತು ಎಂದು ಬಾವಿಸಬಾರದು ಎಂದು ತಮ್ಮ ಭಾಗದ ಉದ್ದೇಶಕ್ಕಾಗಿ ಯಾವುದೇ ಪುರಾವೆ ಹೊಂದಿರುವ ಸ್ವತ್ತು ಬಿಟ್ಟು, ನಾಲ್ಕನೆಯದಾಗಿ ಕೋಪಾರ್ಸನರ್ಗಳ ಪ್ರತ್ಯೇಕ ಆಸ್ತಿಗಳು ಸಾಮಾನ್ಯ ಸಂಗ್ರಹಕ್ಕೆ ಎಸೆಯಲ್ಪಟ್ಟಾಗ. (28). 2005 ರ ನಂತರ ಕೋಪಾರ್ಸನರಿ ಪ್ರಾರಂಬಕ್ಕೆ ಸಾಮಾನ್ಯ ಪುರುಷ ಪೂರ್ವಜನ ಜೊತೆಗೆ ಮಹಿಳಾ ಪೂರ್ವಜಳಿಂದಲೂ ಕೋಪಾರ್ಸನರಿ ಪ್ರಾರಂಬವಾಗುತ್ತದೆ. <– ಶಾಲಿನಿ ಸುಮಂತ್ ಬಾಂಬೆ ಕೇಸ್ ಎ.ಐ.ಆರ್ 2013 (1) ಬಿ.ಓ.ಎಂ.ಬಿ.ಆರ್ 713. –>

(29) ಕೋಪಾರ್ಸನರಿ ಸ್ವತ್ತುಗಳಲ್ಲಿ ಅಪ್ರತಿಬಂದ ದಯಾ ಮತ್ತು ಸಪ್ರತಿಬಂದ ದಯಾ ಎಂಬ ಎರಡು ವಿದ ಪಿತ್ರಾರ್ಜಿತವಾಗಿ ಆರ್ಜಿಸಿದ್ದು ಮತ್ತು ಆಸ್ತಿಯಲ್ಲಿನ ಹಕ್ಕು ಹುಟ್ಟಿನಿಂದ ಪಡೆಯುವುದು ಅಪ್ರತಿಬಂದ ದಯಾ (ಅಡ್ಡಿಯಿಲ್ಲದ ಪೂರ್ವಾರ್ಜಿತದಾಯ). ಅದೇ ತಾಯಿಯ ಕಡೆಯ ತಾತನಿಂದ ಪಡೆದದ್ದು 2005 ಕ್ಕೆ ಹಿಂದೆ ಸಪ್ರತಿಬಂದ ದಯಾ (ಅಡ್ಡಿಪಡಿಸಿದ ಪೂರ್ವಾರ್ಜಿತದಾಯ) ಹಿಂದು ಮಿತಾಕ್ಷರ ಸಿದ್ದಾಂತದಲ್ಲಿ ಆಗುತ್ತಿತ್ತು ಆದರೆ ಅದು 2005 ರ ನಂತರವೂ ಕಲಂ 14 ರಲ್ಲಿ ಸಪ್ರತಿಬಂದ ದಯಾ ಆಗುತ್ತದೆ.

(30). ಜಂಟಿ ಹಿಂದೂ ಕುಟುಂಬವು ಸಾಧಾರಣವಾಗಿ ಸಾಮಾನ್ಯ ಪೂರ್ವಜರಿಂದ ಇಳಿಯಲ್ಪಟ್ಟ ವ್ಯಕ್ತಿಗಳನ್ನು ಒಳಗೊಂಡಿದೆ ಮತ್ತು ಅವರ ಹೆಂಡತಿ ಮತ್ತು ಅವಿವಾಹಿತ ಹೆಣ್ಣುಮಕ್ಕಳನ್ನು ಒಳಗೊಂಡಿದೆ. ಮದುವೆಯ ಮೇಲೆ, ಮಗಳು, ತನ್ನ ತಂದೆಯ ಕುಟುಂಬದ ಸದಸ್ಯರಲ್ಲ ಮತ್ತು ಅವಳ

ಗಂಡನ ಕುಟುಂಬದ ಸದಸ್ಯರಾಗುತ್ತಾರೆ. ಜಂಟಿ ಹಿಂದೂ ಕುಟುಂಬವು ಜನ್ಮ, ಮದುವೆ ಅಥವಾ ದತ್ತುಗಳ ಮೂಲಕ ಉಂಟಾಗುವ ಸಪಿಂಡ ಒಡಂಬಡಿಕೆಯಿಂದ ಒಂದುಗೂಡುವ ವ್ಯಕ್ತಿಗಳ ಗುಂಪನ್ನು ಒಳಗೊಂಡಿರುತ್ತದೆ. (ಎ.ಐ.ಆರ್ 1976 ಎಸ್.ಸಿ 109)

(31). ಜಂಟಿ ಹಿಂದೂ ಕುಟುಂಬದ ಆಸ್ತಿಯನ್ನು ಮಾರಾಟ ಮಾಡಲು ಕರ್ತನ ಅಧಿಕಾರ ಅವರಲ್ಲಿ ಅಂತರ್ಗತವಾಗಿದ್ದು. ಆದಾಗ್ಯೂ, ಇದು ಕೆಲವು ನಿರ್ಬಂಧಗಳಿಗೆ ಒಳಪಟ್ಟಿರುತ್ತದೆ, ಅವುಗಳೆಂದರೆ, ಕಾನೂನು ಅವಶ್ಯಕತೆಯಿರಬೇಕು ಮತ್ತು ಕುಟುಂಬದ ಲಾಭಕ್ಕಾಗಿ ಇರಬೇಕು.[1]

(32). ಅವನ ತಂದೆಯ ಸಂಬಂಧದ ಕಾರಣದಿಂದಾಗಿ, ತಂದೆ ಮತ್ತು ಕುಟುಂಬದ ಮುಖ್ಯಸ್ಥನಾಗಿ ಅವನ ಸ್ಥಾನವು ಅದರ ವ್ಯವಸ್ಥಾಪಕನದ್ದಾಗಿದ್ದು, ಆಸ್ತಿಯಲ್ಲಿ ವಯಸ್ಕರ ಮತ್ತು ಚಿಕ್ಕ ಕೋಪಾರ್ಸೆನರ್ಗಳ ಹಿತಾಸಕ್ತಿಗಳನ್ನು ಬಾಧ್ಯತೆಯಿಂದ ಕಟ್ಟಿಹಾಕುವ ಸಲುವಾಗಿ ಅವರು ಜಂಟಿ ಕುಟುಂಬದ ಆಸ್ತಿಯನ್ನು ಮಾರಾಟಮಾಡಲು ಅರ್ಹರಾಗಿದ್ದಾರೆ. ಕಾನೂನಿನ ಅಗತ್ಯತೆಗಾಗಿ ಅಥವಾ ಆಸ್ತಿಗಳ ಪ್ರಯೋಜನಕ್ಕಾಗಿ ಅಥವಾ ಹಿಂದಿನ ಸಾಲವನ್ನು ಪೂರೈಸಲು ಮಾರಾಟವಾಗಿರಬೇಕಿರುತ್ತದೆ.[2]

(33). ಹಿಂದು ಅಪ್ರಾಪ್ತ ವಯಸ್ಕತೆ ಮತ್ತು ಪೋಷಣಾಂಶ ಕಾಯ್ದೆ ಕಲಂ 8 ರಲ್ಲಿ ಮೈನರ್ ಆಸ್ತಿಯನ್ನು ಮಾರಲು ಕೋರ್ಟ್ ಅಪ್ಪಣೆ ಪಡೆಯಬೇಕು ಎಂದು ಇದೆ, ಆದರೆ ಇದು ಹಿಂದು ಅವಿಭಕ್ತ ಕುಟುಂಬದಲ್ಲಿನ ಮೈನರ್ ಹಿತಾಸಕ್ತಿಗೆ ಅನ್ವಯಿಸದು ಅದು ಮೈನರ್ ವ್ಯಕ್ತಿಯ ಆಸ್ತಿಗೆ ಮಾತ್ರ ಅನ್ವಯಿಸುತ್ತದೆ. ಈ ಬಗ್ಗೆ ಕಲಂ 6 ರಲ್ಲಿ ಸ್ಪಷ್ಟವಾಗಿ ಹಿಂದು ಒಟ್ಟು ಕುಟುಂಬದಲ್ಲಿನ ಆಸ್ತಿಯ ಅವಿಭಜಿತ ಆಸ್ತಿಯನ್ನು ಹೊರತು ಪಡಿಸಿ

---

[1] ವಿಜಯ್ ಎ ಮಿತ್ತಲ್ ವಿ. ಕುಲ್ವಂತ್ ರೈ – 2019 (3) ಎಸ್.ಸಿ.ಸಿ 520

[2] ಸುನಿಲ್ ಕುಮಾರ್ ವಿ. ರಾಮ್ ಪ್ರಕಾಶ್ – 1988(2) ಎಸ್.ಸಿ.ಸಿ 77.

ಎಂದಿದೆ. – ಹಿಂದು ಮೈನರ್ಗೆ ಸೇರಬೇಕಾದ ಅವಿಭಜಿತ ಒಟ್ಟುಕುಟುಂಬದ ಆಸ್ತಿ ಕುಟುಂಬದ ಹಿರಿಯನ ಸುಬರ್ದಿನಲ್ಲಿ ಇರುವಾಗ್ಗೆ ಮೈನರ್ ಗಾರ್ಡಿಯನ್ (ಪೋಷಕನನ್ನು) ನೇಮಿಸಲು ಬರುವುದಿಲ್ಲ ಎಂದು ಕಲಂ 12 ಹೇಳುತ್ತದೆ. – ಎ.ಐ.ಆರ್ 1996 ಎಸ್.ಸಿ 2371

(34). 1956 ರಲ್ಲಿ ಜಾರಿಯಾದ ಹಿಂದು ಉತ್ತರಾಧಿಕಾರಿತ್ವ ಕಾಯ್ದೆಯಲ್ಲಿ ಕಲಂ 6 ರಲ್ಲಿ ಇದ್ದಂತೆ ಸದರಿ ಕಾಯ್ದೆ ಪ್ರಾರಂಬವಾದ ಮೇಲೆ ಸತ್ತ ಹಿಂದು ಪುರುಷನ ಆಸ್ತಿಯ ವಿಲೇವಾರಿ ಹೇಗೆ ಎಂದು ಕೊಟ್ಟಿರುತ್ತಾರೆ. 17–06–1956 ಕ್ಕೆ ಮುಂಚೆ ಸತ್ತಿದ್ದರೆ ಅದಕ್ಕೆ ಅನ್ವಯಿಸುವ ಕಾನೂನು ಮೈಸೂರು ಪ್ರಾಂತ್ಯದಲ್ಲಿ 1933 ರ ಕಾನೂನು ನೋಡಬೇಕಿರುತ್ತದೆ. ಅದೇ ರೀತಿಯಲ್ಲಿ ಕಲಂ 8 ರಲ್ಲಿನ ವಿಲೇವಾರಿಯನ್ನು ಪರಿಗಣಿಸಬೇಕು ಎನ್ನುತ್ತದೆ ಸುಪ್ರೀಮ್ ಕೋರ್ಟ್.[1]

(35). ಹಿಂದು ಮಿತಾಕ್ಷರ ಕೋಪಾರ್ಸನರಿಯಲ್ಲಿ ಅವಿಭಕ್ತ ಕುಟುಂಬದಲ್ಲಿನ ಬಾಗವನ್ನು ದಾನ ಮಾಡಲು ಬರುವುದಿಲ್ಲ, ಸದರಿ ಹಿಸ್ಸೆಯನ್ನು ದಾನ ಮಾಡುವ ಮುಂಚೆ ಇತರೆ ಕೋಪಾರ್ಸನರ್ ಒಪ್ಪಿಗೆ ಅವಶ್ಯಕತೆ ಇದೆ – ತಮ್ಮ ವೆಂಕಟ ಸುಬ್ಬಮ್ಮ ವಿರುದ್ದ ತಮ್ಮ ರತ್ನಮ್ಮ ಎ.ಐ.ಆರ್ 1987 ಎಸ್.ಸಿ 1775. – ಬಲ್ಜಿಂದರ್ ಸಿಂಗ್ ವಿರುದ್ದ ರತನ್ ಸಿಂಗ್ 2008 (11) ಎಸ್.ಸಿ.ಆರ್ 904.

(36) ಪಾರ್ಟಿಗಳು ಪ್ರತ್ಯೇಕ ಸ್ವಾಧೀನ ಕೆಲವು ಸ್ವತ್ತುಗಳು ಇವೆ, ಕಂದಾಯ ದಾಖಲಾತಿಗಳಲ್ಲಿ ಅವರ ವೈಯುಕ್ತಿಕ ಹೆಸರುಗಳು ನಮೂದಾಗಿದೆ, ಇವಿಷ್ಟರಿಂದಲೇ ಬಾಗವಾಗಿದೆ ಎಂದು ಪರಿಗಣಿಸಲಾಗದು[2]

(37) ವಿಭಜನೆಯು ಜಂಟಿ ಕುಟುಂಬದ ಸ್ಥಿತಿಯಲ್ಲಿ ಭಾಗಿಸುವ ಉದ್ದೇಶದೊಂದಿಗೆ ಸೇರಿಕೊಂಡರೆ, ಅದು ವಿಭಜನೆಯಾಗಿದೆ ಎಂದು

---

[1] ಈರಮ್ಮ ವಿರುದ್ದ ವಿರೂಪಣ್ಣ ಎ.ಐ.ಆರ್ 1966 ಎಸ್.ಸಿ 1879.

[2] ಫ಼ಕೀರಪ್ಪ ಬೈಲಪ್ಪ ಕಂಬಾರ್ ವಿರುದ್ದ ಕೃಷ್ಣಪ್ಪ – ಮನು/ಕೆ.ಎ/0425/1985

ಹೇಳಬಹುದು – ವಿಭಜನೆಯು ವಾಸ್ತವದ ಪ್ರಶ್ನೆಯಾಗಿದ್ದು, ಅದನ್ನು ನಿರ್ಧರಿಸಲು ಅವರುಗಳ ನಡುವೆ ಪ್ರತ್ಯೇಕತೆಯಿದೆಯೇ ಅಥವಾ ಅವರು ಒಂದಾಗಿ ಉಳಿದಿದ್ದಾರಾ ಎಂಬುದು ಪಾರ್ಟಿಗಳ ಉದ್ದೇಶಕ್ಕೆ ಸಂಬಂಧಿಸಿದಂತೆ ಸಾಕ್ಷ್ಯಾಧಾರ ಬೇಕಾಗುತ್ತದೆ.[1]

(38). ಮೊದಲಿಗೆ ಒಟ್ಟುಕುಟುಂಬದಲ್ಲಿ ಜಂಟಿ ಆಸ್ತಿ ಇತ್ತು ಎನ್ನುವುದು ವಾದಿಯು ರುಜುವಾತು ಪಡಿಸಬೇಕಿರುತ್ತದೆ. ನಂತರ ವಿಭಾಗವಾಗಿದೆ ಎಂದು ಪ್ರತಿಪಾದಿಸುವವನು ಅದನ್ನು ರುಜುವಾತು ಪಡಿಸಬೇಕಿರುತ್ತದೆ. ನಂತರ ಸ್ವಯಾರ್ಜಿತ ಸ್ವತ್ತು ಎಂದು ಪ್ರತಿಪಾದಿಸುವವನು ಅದನ್ನು ರುಜುವಾತುಪಡಿಸಬೇಕಿರುತ್ತದೆ. ಒಮ್ಮೆ ಒಬ್ಬ ವ್ಯಕ್ತಿ ಬೇರೆಯಾಗಿದ್ದಾನೆಂದು ಒಪ್ಪಿಕೊಂಡ ಮಾತ್ರಕ್ಕೆ ಇತರೆಯವರು ಬೇರೆಯಾಗಿದ್ದಾರೆ ಎಂದು ಪೂರ್ವಕಲ್ಪನೆ ಮಾಡಲು ಬರುವುದಿಲ್ಲ. ಮಹಿಳೆ ಹೆಸರಿನಲ್ಲಿ ಆಸ್ತಿ ಇರುವಾಗ ಅದು ಒಟ್ಟು ಕುಟುಂಬದ ಆಸ್ತಿ ಎಂದು ಪೂರ್ವಕಲ್ಪನೆ ಮಾಡಲು ಬರುವುದಿಲ್ಲ.[2]

(39). ಯಾವುದೇ ಒಟ್ಟು ಕುಟುಂಬದ ಸದಸ್ಯ ತನ್ನ ಏಕ ನಿರ್ದಾರದಿಂದ ಒಟ್ಟುಕುಟುಂಬದ ಸ್ವತ್ತನ್ನು ತನ್ನ ಪ್ರತ್ಯೇಕ ಸತ್ತಾಗಿ ಪರಿವರ್ತಿಸಲು ಬರುವುದಿಲ್ಲ – ಎ.ಐ.ಆರ್ 1986 ಎಸ್.ಸಿ 79.

(40). ಬಾಯಿಬುಜಾನೆ ವಿಭಾಗ (ಬಾಯಿ ಮಾತಿನ ವಿಭಾಗ) ಕಾನೂನಿನಲ್ಲಿ ಪರಿಗಣಿಸಲ್ಪಟ್ಟಿದೆ. ಇದರ ನೊಂದಾವಣೆ ಅವಶ್ಯವಿಲ್ಲ. ನಂಜೇಗೌಡ ವಿರುದ್ದ ರಾಮೇಗೌಡ ಸುಪ್ರೀಮ್ ಕೋರ್ಟ್ ಕೇಸಿನಲ್ಲಿ ಬಹಳ ಹಿಂದೆ ನಡೆದಿರುವ ಬಾಯಿ ಮಾತಿನ ವಿಭಾಗ ಮತ್ತು ಅದರ ಜಾರಿಯಾಗಿರುವಿಕೆಯನ್ನು ಸಿಂದುವೆಂದು ಪರಿಗಣಿಸಲಾಗಿದೆ.[3]

---

[1] ಅಡೆವೆಪ್ಪ  ವಿ. ರಾಮಪ್ಪ ಮೂಡಕಪ್ಪ ಚೌಗಲ ಮನು/ ಕೆ.ಎ / 2296/ 2017.

[2] ರಾಧಮ್ಮ ವಿ. ಮುದ್ದುಕೃಷ್ಣ – ಎ.ಐ.ಆರ್ 2019 ಎಸ್.ಸಿ 643

[3] ಮನು/ ಎಸ್.ಸಿ/ 1519/ 2017

(41) ಒಟ್ಟು ಕುಟುಂಬದಿಂದ ಬರುತ್ತಿದ್ದಂತಾ ಆಧಾಯದಲ್ಲಿ ಆಗುತ್ತಿದ್ದ ಇಡಿಗಂಟು ಕುಟುಂಬ ಎಲ್ಲಾ ನಿತ್ಯ ವೆಚ್ಚಗಳನ್ನು ಕಳೆದು ಉಳಿಯುವ ಮೊತ್ತವಾಗಿ ನಿರ್ದರಿಸಬೇಕು.[1]

(42). ಕುಟುಂಬದ ವ್ಯವಸ್ಥಾ ವಿಧಾನ ಮೌಕಿಕವಾಗಿಯೂ ನಡೆಯಬಹುದು, ಅದು ನೊಂದಾವಣಿಯಾಗುವ ಅವಶ್ಯಕತೆ ಇಲ್ಲ. ಅಂತಹ ಮೌಕಿಕ ವ್ಯವಸ್ಥೆಯನ್ನು ಬರವಣಿಗೆಗೆ ತಂದು ಅದನ್ನು ಸಾಕ್ಷಿಯಾಗಿ ಪರಿಗಣಿಸಲು ಬಯಸಿದರೆ ಅದು ನೊಂದಾವಣಿಯ ಅವಶ್ಯಕತೆ ಇರುತ್ತದೆ. ಈ ಹಿಂದೆ ನಡೆದಿರುವ ವ್ಯವಸ್ಥೆಯನ್ನು ಬರವಣಿಗೆಯಲ್ಲಿ ತಂದಾಗ ಅದು ಮುಟೇಷನ್ ಕಾರ್ಯಕ್ಕಾಗಲೀ ಕೋರ್ಟಿನ ಗಮನಕ್ಕೆ ತರುವುದಕ್ಕಾಗಲೀ ಮಾಡಿದ್ದಾಗ ಅದರ ನೊಂದಾವಣಿ ಅವಶ್ಯವಿಲ್ಲ.[2]

(43). ಹಿಂದು ಕಾನೂನಿನಲ್ಲಿ ಕೌಟುಂಬಿಕ ವ್ಯವಸ್ಥೆಯನ್ನು ಸರ್ವಾನುಮತದಿಂದ ಅಂಗೀಕರಿಸಿಲ್ಲವಾದರೆ ಅದು ಯಾವತ್ತಿಗೂ ಬಂಧಿಸುವ ಕರಾರು ಆಗುವುದಿಲ್ಲ.[3]

(44). ನೋಂದಾಯಿಸಿದ ದಾಖಲೆಯಿಲ್ಲದೆ ಮೌಖಿಕ ವಿಭಾಗ ಅಥವಾ ವಿಭಾಗವು ವಿಂಗಡನೆ ಮತ್ತು ಪರಿಧಿಯಿಂದ (ಮೀಟ್ಸ್ ಅಂಡ್ ಬೌಂಡ್ಸ್) ವಿಭಜನೆಯನ್ನು ಅನುಸರಿಸದಿದ್ದರೆ, ಸಾರ್ವಜನಿಕ ದಾಖಲೆಗಳಲ್ಲಿ ನಮೂದುಗಳು ಸಾಬೀತಾಗದಿದ್ದರೆ, ಮಾತ್ರ, ಮಗಳು ಆಸ್ತಿಯು ಈಗಲೂ ತಿದ್ದುಪಡಿಯ ಕಾಯಿದೆ ದಿನಾಂಕದಲ್ಲೂ ಸಹ ಕೋಪಾರ್ಸನರಿ ಆಸ್ತಿಯಾಗಿ ಉಳಿದಿದೆ ಎಂದು ವಾದಿಸಬಹುದಾಗಿರುತ್ತದೆ.[4]

---

[1] ರೇವಮ್ಮ ವಿ. ಬಾಷಾ ಸಾಬ್ – 2008 (4) kar. L.J 42

[2] 1976 (3) ಎಸ್.ಸಿ.ಸಿ 119

[3] 1972 (4) ಎಸ್.ಸಿ.ಸಿ 1

[4] ಪುಟ್ಟಲಿಂಗಾಗೌಡ ವಿ. ಮತ್ತು ಭಾರತದ ಒಕ್ಕೂಟ. ಮನು/ ಕೆ.ಎ / 0420/2015.

(45). ಜಂಟಿ ಕುಟುಂಬದ ಸದಸ್ಯರು ಉದ್ದೇಶದಿಂದ ವಿಭಜನೆಯಾದರೆ ನಿರ್ದಿಷ್ಟವಾದ ಮತ್ತು ಸ್ಪಷ್ಟವಾಗಿ ಸೂಚಿಸುವ ಇಂಗಿತವನ್ನು ಕುಟುಂಬದಿಂದ ಪ್ರತ್ಯೇಕಿಸಲು ಮತ್ತು ಅವರ ಪಾಲನ್ನು ಆನಂದಿಸಲು ಸ್ಥಾಪಿಸಬೇಕು – ಆದ್ದರಿಂದ ದಾಖಲೆ ಪುರಾವೆಯಿಂದ ಮತ್ತು ಮೌಖಿಕ ಪುರಾವೆಗಳಿಂದ ಇಂತಹ ಮೌಖಿಕ ವಿಭಜನೆಯನ್ನು ಸ್ಥಾಪಿಸಬೇಕು.[1]

(46). ಕಾನೂನು ಆಯೋಗದ 208ನೇ ವರದಿಯಲ್ಲಿ ಮೌಕಿಕ ವಿಭಾಗವು ತಿದ್ದುಪಡಿ ಕಾಯ್ದೆ ಜಾರಿಗೆ ಮುನ್ನ ಜಾರಿಯಾಗಿರುವಂತದ್ದು "ವಿಭಾಗ" ಎಂಬ ಅರ್ಥದಲ್ಲಿ ತರುವುದಕ್ಕೆ ಪ್ರಸ್ತಾವನೆ ಆಗಿದೆ. – ಮನು/ ಕೆ.ಎ / 0420/2015.

(47). ಮೌಕಿಕ ವಿಭಾಗ ಬಹಳ ಹಿಂದೆಯೇ ಆಗಿ ಅದು ಜಾರಿಯಾಗಿರುವುದನ್ನು ಸಿಂಧುವೆಂದು ಕೋರ್ಟ್ ಪರಿಗಣಿಸಿದೆ.[2]

(48). ಒಟ್ಟುಕುಟುಂಬ ಕರಾರಿನಿಂದ ಉದ್ಭವಿಸಬಹುದು – ಮಿತಾಕ್ಷರ ಕೋಪಾರ್ಸೆನರಿ ಆಸ್ತಿ ಮತ್ತು ಒಟ್ಟು ಕುಟುಂಬದ ಆಸ್ತಿ ನಡುವೆ ವ್ಯತ್ಯಾಸವಿದೆ. ಮಿತಾಕ್ಷರ ಕೋಪಾರ್ಸೆನರಿಯು ಒಂದು ನಿರ್ದಿಷ್ಟ ಪರಿಕಲ್ಪನೆಯನ್ನು ಹೊಂದಿದೆ. ಇದು ಕಾನೂನಿನ ಮೂಲಕ ರಚಿಸಲ್ಪಟ್ಟ ವ್ಯಕ್ತಿಗಳ ಒಂದು ಅಂಗವಾಗಿದ್ದು, ಜಂಟಿ ಕುಟುಂಬವು ಪಾರ್ಟಿಗಳ ಒಪ್ಪಂದದ ಮೂಲಕ ರಚಿಸಲ್ಪಡುತ್ತದೆ. ಮಿತಾಕ್ಷರ ಕೋಪಾರ್ಸೆನರಿ ಕಾನೂನಿಂದ ಜೀವ ಪಡೆದದ್ದಾಗಿದೆ.[3]

---

[1] ಶೇಷಪ್ಪ ವಿ. ಕೆ. ಗೋಪಾಲಕೃಷ್ಣ ಮೂರ್ತಿ – ಮನು / ಕೆಎ / 3308/ 2014.

[2] ನಂಜೇಗೌಡ ವಿರುದ್ಧ ರಾಮೇಗೌಡ – ಮನು/ ಎಸ್.ಸಿ/1519/2017

[3] ಹಾರ್ಡಿಯೋ ರೈ ವಿ. ಸಕುಂತಲಾ ದೇವಿ – ಎ.ಐ.ಆರ್ 2008 ಎಸ್.ಸಿ 2489.

(49). ಕೋಪಾರ್ಸನರಿ ಸ್ವತ್ತನ್ನು ಅಥವ ಜಂಟಿ ಕುಟುಂಬದ ಸ್ವತ್ತನ್ನು ಖರೀದಿಸುವವನು ಸ್ವಾಧೀನವನ್ನು ಹೊಂದಲು ಬರುವುದಿಲ್ಲ. ಅವನು ಸ್ವಾಧೀನಕ್ಕಾಗಿ ವಿಭಾಗದ ದಾವೆಯನ್ನು ಸಲ್ಲಿಸಬೇಕು.[1]

(50). ಒಬ್ಬ ಕೋಪಾರ್ಸನರ್ ತನ್ನ ಆಸಕ್ತಿಯನ್ನು ಪರಿತ್ಯಜಿಸಿದರೆ, ಅದು ಯಾರಾದರೂ ಒಬ್ಬರ ಹೆಸರಿನಲ್ಲಿ ಪರಿತ್ಯಜಿಸಿದರೂ ಇತರೆ ಎಲ್ಲಾ ಕೋಪಾರ್ಸನರ್ಗಳಿಗೆ ಸೇರುವಂತೆಯೇ ಆಗುತ್ತದೆ. [2]

(51). ಹಿಂದು ಕೋಪಾರ್ಸನರಿಯ ಕರ್ತನು ಎರಡು ಸಮಯದಲ್ಲಿ ದಾನ ನೀಡಲು ಅರ್ಹನಾಗಿದ್ದಾನೆ ಒಂದು ಅಂತಹ ದಾನ ಕೋಪಾರ್ಸನರಿ ಸ್ವತ್ತಿನಲ್ಲಿನ ಹೆಚ್ಚಲ್ಲದ ಸ್ವತ್ತಾಗಿರಬೇಕು ಇನ್ನೊಂದು ಅದು ಧಾರ್ಮಿಕ ಶ್ರದ್ದೆಯ ಕರ್ತವ್ಯಕ್ಕಾಗಿ ಮಾಡಿದ್ದಾಗಿರಬೇಕು. [3] – ಇದೇ ಕೇಸಿನಲ್ಲಿ ಇನ್ನೊಂದು ತೀರ್ಪು (1967 (1) ಎಸ್.ಸಿ.ಆರ್ 353) ಉಲ್ಲೇಕಿಸಿದ ವಿಷಯದಲ್ಲಿ – "ಪೂರ್ವಜರ ಚರ ಆಸ್ತಿಗಳಲ್ಲಿ ಹೆಚ್ಚಲ್ಲದ ಸ್ವಲ್ಪವನ್ನು ಹೆಂಡತಿಗೆ, ಮಗಳಿಗೆ, ಮಗನಿಗೆ ಪ್ರೀತಿಯಿಂದ ದಾನ ನೀಡಬಹುದು. ಅಂತಹ ಪೂರ್ಣ ಪೂರ್ವಜರ ಸ್ವತ್ತನ್ನು ಹಾಗೆ ದಾನವಾಗಿ ನೀಡಲು ಬರುವುದಿಲ್ಲ. ಹಾಗೆಯೇ ಹಿಂದು ತಂದೆಯು ಪೂರ್ವಜರ ಸ್ಥಿರ ಆಸ್ತಿಗಳಲ್ಲಿ ಹೆಚ್ಚಲ್ಲದ ಸ್ವಲ್ಪವನ್ನು ಧಾರ್ಮಿಕ ಶ್ರದ್ದೆಯ ಕರ್ತವ್ಯಕ್ಕೆ ದಾನ ನೀಡಬಹುದು. ಧಾರ್ಮಿಕ ಶ್ರದ್ದೆಯ ಉದ್ದೇಶದಲ್ಲಿ ಔದಾರ್ಯದಿಂದ (ಚಾರಿಟೆಬಲ್) ಮತ್ತು ಧಾರ್ಮಿಕತೆಗಾಗಿ (ರಿಲಿಜಿಯಸ್) ನೀಡುವುದು ಸೇರಿರುತ್ತದೆ. ಇದರಲ್ಲಿ ತಂದೆಯು ತನ್ನ ಮಗಳ ಮದುವೆ ಸಮಯದಲ್ಲಿ ಒಪ್ಪಂದದಂತೆ ಪೂರ್ವಜರ ಸ್ಥಿರ ಆಸ್ತಿಗಳಲ್ಲಿ ಹೆಚ್ಚಲ್ಲದ ಸ್ವಲ್ಪವನ್ನು ಕೊಡುವುದಾಗಿ

---

[1] ಎ.ಐ.ಆರ್ 1966 ಎಸ್.ಸಿ 470 – 2009 (2) ಸ್ಕೇಲ್ 461.

[2] ಎ.ಐ.ಆರ್ 1987 ಎಸ್.ಸಿ 1775.

[3] ತಿಮ್ಮಯ್ಯ ವಿ. ನಿಂಗಮ್ಮ 2000 (7) ಎಸ್.ಸಿ.ಸಿ 409.

ಕೊಟ್ಟಿರುವ ಮಾತಿನಂತೆ ದಾನ ನೀಡುವುದನ್ನು ಧಾರ್ಮಿಕ ಶ್ರದ್ದೆಯ ಉದ್ದೇಶದಲ್ಲಿ ಸೇರಿಸಿದೆ ಸುಪ್ರೀಮ್ ಕೋರ್ಟ್.[1]

(52). 2005 ರ ತಿದ್ದುಪಡಿಯಲ್ಲಿ 20–12–2004 ಕ್ಕೆ ಮುಂಚೆ ಆಗಿರುವ ವಿಭಜನೆಯಲ್ಲಿ ಕಾನೂನು ರೀತ್ಯ ಆಗುವ ನೋಷನಲ್ ಪಾರ್ಟೀಷನ್ (ಸಾಂಕೇತಿಕ ವಿಭಜನೆ) ಇದಕ್ಕೆ ದಕ್ಕೆಯಿಲ್ಲ. ದಿನಾಂಕ 20–12–2004 ಕ್ಕೆ ಮುಂಚೆ ಇದ್ದ ಕಾನೂನು ರೀತ್ಯ ಇತ್ಯರ್ಥ (ಡಿಸ್ಪೊಸಿಷನ್) ಅಥವ ವರ್ಗಾವಣೆ (ಅಲಿನೇಷನ್), ವಿಭಾಗವನ್ನು ಒಳಗೊಂಡು ಆಗಿರುವುದು ಯಾವುದೇ ರೀತಿಯಲ್ಲಿ ಬಾದಿಸುವುದಿಲ್ಲ. ನೊಂದಾಯಿತ ವಿಭಾಗ ಆಗಿರಬೇಕು ಎನ್ನುವ ವಿಚಾರ ನೋಷನಲ್ ಪಾರ್ಟೀಷನ್ಗೆ ಅನ್ವಯಿಸುವುದಿಲ್ಲ,. – ಪ್ರಕಾಶ್ ವಿರುದ್ದ ಫೂಲ್ವತಿ.[2]

(53). ಒಟ್ಟು ಕುಟುಂಬದ ಇಡಿಗಂಟಿನ ಬಗ್ಗೆ ಮದ್ರಾಸ್ ಹೈಕೋರ್ಟ್[3] ಕೆಲವು ತೀರ್ಪುಗಳನ್ನು ಉಲ್ಲೇಕಿಸಿ ಕೆಲವು ಅಂಶಗಳನ್ನ ವ್ಯಾಖ್ಯಾನಿತವಾಗಿ ಹೊರಹಾಕಿದೆ. (1). ಆರ್ಜನೆಯನ್ನು ಸಕ್ರಿಯಗೊಳಿಸಲು ಜಂಟಿ ಕುಟುಂಬದ ಇಡಿಗಂಟು ಸಾಕಷ್ಟು ಹೆಚ್ಚುವರಿ ಆದಾಯವನ್ನು ಹೊಂದಿರಬೇಕು. (2). ಆರಂಭದಲ್ಲಿ, ಒಂದು ನಿರ್ದಿಷ್ಟ ಆಸ್ತಿ ಜಂಟಿ ಕುಟುಂಬದ ಆಸ್ತಿ ಎಂದು ಪ್ರತಿಪಾಧಿಸಿರುವ ಸದಸ್ಯನ ಮೇಲೆ, ಜಂಟಿ ಕುಟುಂಬ ಇಡಿಗಂಟು ಸಾಕಷ್ಟು ಹೆಚ್ಚುವರಿ ಆದಾಯವನ್ನು ಹೊಂದಿದೆ ಮತ್ತು ಅದನ್ನು ಬಳಸಿಕೊಳ್ಳುವ ಮೂಲಕ, ಪ್ರಶ್ನಿತ ಆಸ್ತಿಯನ್ನು ಆರ್ಜಿಸಿರುವುದು ಎಂದು ರುಜುವಾತು ಪಡಿಸುವ ಹೊರೆ ಇರುತ್ತದೆ. (3). ಮೇಲೆ ಉಲ್ಲೇಖಿಸಿದಂತೆ ಪ್ರಾರಂಭಿಕ ಹೊರೆ ಸಾಬೀತಾದರೆ, ಹೊರೆಯು ಜಂಟಿ ಕುಟುಂಬದ ಎದುರು ಸದಸ್ಯನಿಗೆ ಬದಲಾಗುತ್ತದೆ, ಅದು ಅವರ

---

[1] 1957 (1) ಎಸ್.ಸಿ.ಆರ್ 452.

[2] 2015 (4) ಕೆ.ಸಿ.ಸ್.ಆರ್ 3265

[3] ಕೆ.ವಿ.ರಾಮಸ್ವಾಮಿ ವಿ. ಕೆ.ವಿ.ರಾಘವನ್ – 2010 (1) ಎಂ.ಎಲ್.ಜೆ 1019

ವೈಯಕ್ತಿಕ ಆಸ್ತಿ ಎಂದು ಹೇಳಿಕೊಳ್ಳುವುದು ಮತ್ತು ಜಂಟಿ ಕುಟುಂಬ ಆಸ್ತಿಯ ಯಾವುದೇ ಸಹಾಯವಿಲ್ಲದೆ ಅದನ್ನು ಸ್ವಾಧೀನಪಡಿಸಿಕೊಂಡಿರುವುದಾಗಿ ರುಜುವಾತು ಪಡಿಸಬೇಕಿರುತ್ತದೆ. (4). ಇಡಿಗಂಟು ಅಸ್ತಿತ್ವವನ್ನು ಸಾಬೀತುಪಡಿಸಲು ವಿಫಲವಾದರೆ, ಪ್ರಶ್ನಾರ್ಹ ಸ್ವಾಧೀನತೆಯು ಸ್ವಯಂ ಆರ್ಜನೆ ಎಂಬುದು ಅನಿವಾರ್ಯ ಪರಿಕಲ್ಪನೆ. (5). ಜಂಟಿ ಕುಟುಂಬದ ಅಸ್ತಿತ್ವದ ವಾಸ್ತವಿಕತೆಯು, ಅದರ ಸದಸ್ಯರಲ್ಲಿ ಒಬ್ಬರು ಹೊಂದಿದ್ದ ಒಂದು ಆಸ್ತಿಯು ಮೇಲಿನ ಅಂಶಗಳನ್ನು ಸಾಬೀತಾಗದ ಹೊರತು ಜಂಟಿ ಕುಟುಂಬ ಆಸ್ತಿ ಎಂದು ಊಹಿಸಲು ಕಾರಣವಾಗುವುದಿಲ್ಲ. ಮತ್ತು (6). ಆರ್ಜಿಸಿರುವ ಆಸ್ತಿಯು ಜಂಟಿ ಕುಟುಂಬದ ಮಹಿಳಾ ಸದಸ್ಯರ ಹೆಸರಿನಲ್ಲಿ ನಿಂತಿದ್ದರೆ, ಅವಳು ಅದನ್ನು ಹೇಗೆ ಸ್ವಾಧೀನಪಡಿಸಿಕೊಂಡಳು ಎಂದು ಅವಳು ಸಾಬೀತುಪಡಿಸಬೇಕಾಗಿಲ್ಲ."

ಹಾಲಿ ಇದೇ ಸಿದ್ಧಾಂತಗಳನ್ನು ಅಳವಡಿಸಿ ಮಿತಾಕ್ಷರ ಕೋಪಾರ್ಸನರ್ ಮಾಲೀಕತ್ವದ ಇನ್ಸಿಡೆನ್ಸ್ ವ್ಯಾಖ್ಯಾನಿಸಿದಾಗ ಕಡೆಯಲ್ಲಿ ಹೇಳಿರುವ ಬದುಕುಳಿದವರಿಗೆ ವರ್ಗವಾಗುವುದು 2005 ರಲ್ಲಿ ತಿದ್ದುಪಡಿಯಾಗಿರುವುದರಿಂದ ಬಾಕಿ ಎಲ್ಲಾ ವ್ಯಾಪ್ತಿ/ ಪರಿಣಾಮ/ ಹೊರೆ ಗಳಿಗೆ ಅನ್ವಯಿಸಿ ಈ ಹಕ್ಕು ಪ್ರಾಪ್ತವಾಗಿರುತ್ತದೆ. ಅಂದರೆ ಅಂತಹ ವ್ಯಾಪ್ತಿ/ ಪರಿಣಾಮ/ ಹೊರೆಯಲ್ಲಿನ ನ್ಯೂನ್ಯತೆಗಳನ್ನು ಪ್ರಶ್ನಿಸುವ ಹಕ್ಕು ಸದರಿ ಮಹಿಳಾ ಕೋಪಾರ್ಸನರ್ ರವರಿಗೆ ಇರುತ್ತೆ. ಯಾವುದನ್ನು ಪ್ರಶ್ನಿಸಲು ಬರುವುದಿಲ್ಲವೆಂದರೆ ಯಾವುದೇ ಡಿಸ್ಪೊಸಿಷನ್ ಇದರಲ್ಲಿ 100 ರೂ ಆಸ್ತಿ ಮೇಲ್ಪಟ್ಟು ಇರುವ ಆಸ್ತಿಯನ್ನು ನೊಂದಾಯಿತ ಕ್ರಯದ ಮೂಲಕ, ನೊಂದಾಯಿತ ದಾನದ ಮೂಲಕ, ನೊಂದಾಯಿತ ಹಕ್ಕು ನಿವೃತ್ತಿ ಮೂಲಕ, ನೊಂದಾಯಿತ ವ್ಯವಸ್ಥಾಪತ್ರದ ಮೂಲಕ, ನೊಂದಾಯಿತ ಜಿ.ಪಿ.ಎ ಮೂಲಕ, ನೊಂದಾಯಿತ ಟ್ರಸ್ಟ್ ಮೂಲಕ,

ವರ್ಗಾಯಿಸಿರುವುದನ್ನು (ಅಂತಹ ವರ್ಗಾವಣೆಗೆ ಮಿತಾಕ್ಷರ ಕಾನೂನಿನಲ್ಲಿ ವಿಲೇವಾರಿ/ ಇತ್ಯರ್ಥ ಮಾಡುವ ಸಾಮರ್ಥ್ಯ ಇತ್ತೆ ಎನ್ನುವುದು ನಿರ್ದಾರವಾಗಿ) ಇದರ ವ್ಯಾಪ್ತಿಯಲ್ಲಿ ಕಾಣಬಹುದಾಗಿದ್ದು, ಇದರಲ್ಲಿ ಸುಪ್ರೀಮ್ ಕೋರ್ಟ್ ತೀರ್ಪಿನ ಪ್ರಕಾರ ಬಿಟ್ಟುಕೊಡುವುದು ಮತ್ತು ಬಿಟ್ಟುಬಿಡುವುದು ಎಂಬ ಎರಡು ರೀತಿಯ ಇತ್ಯರ್ಥವನ್ನು ಮೌಕಿಕವಾಗಿ ಒಬ್ಬ ವ್ಯಕ್ತಿ ತನ್ನ ಆಸ್ತಿಯನ್ನು ಬಿಟ್ಟುಕೊಡುವುದು ಮತ್ತು ಬಿಟ್ಟುಬಿಡುವುದೂ ಇದರಲ್ಲಿ ಸೇರಿಸಬಹುದೆ ಎಂಬುದಕ್ಕೆ ಅವಶ್ಯ ಇನ್ನೊಂದು ಆದೇಶ ಹೊರ ಬರಬೇಕಿದೆ. ಯಾಕೆಂದರೆ ಎಷ್ಟೋ ಕಡೆ ಬಾಯಿ ಮಾತಿನ ಒಪ್ಪಂದದಂತೆ/ ವಿಭಾಗದಂತೆ ಮುಟೇಷನ್ ಮುಖಾಂತರ ಆಸ್ತಿ ವರ್ಗಾವಣೆಯನ್ನು ಅದರ 12 ವರ್ಷದ ಮೇಲ್ಪಟ್ಟು ಸ್ವಾಧೀನವನ್ನು ನಾವು ಗಮನಿಸಿರುತ್ತೇವೆ, ಇಂತಹ ವರ್ಗಾವಣೆಗಳನ್ನು ದೃಷ್ಠಿಯಲ್ಲಿ ಇಟ್ಟುಕೊಂಡು "ಎನಿ ಡಿಸ್ಪೊಸಿಷನ್" (ಯಾವುದೇ ಇತ್ಯರ್ಥ) ಉಪಯೋಗಿಸಲಾಗಿದೆ., ಎಂಬುದು ನಮ್ಮ ಅಭಿಪ್ರಾಯ. ಕಲಂ 6(1) ರಲ್ಲಿ "ಎನಿ ಪಾರ್ಟಿಷನ್" (ಯಾವುದೇ ವಿಭಾಗ) ಎಂದು ಉಪಯೋಗಿಸಲಾಗಿದೆಯಾದರೂ. ಅದೇ ಕಲಂ 6(5) ವಿವರಣೆಯಲ್ಲಿ ಕಲಂ 6 ರಲ್ಲಿನ ಪಾರ್ಟಿಷನ್ (ವಿಭಾಗ) ಎಂದರೆ ನೊಂದಾಯಿತ ವಿಭಾಗ ಅಥವ ಕೋರ್ಟ್ ಡಿಕ್ರಿ ಮುಖಾಂತರ ಕಾರ್ಯಗತವಾದ ವಿಭಾಗ ಎಂದು ವ್ಯಾಖ್ಯಾನಿಸಿದೆ. ಈ ವ್ಯಾಖ್ಯಾನ 6(1) ಕ್ಕೂ ಅನ್ವಯವಾಗುವುದಾದರೂ ಯಾವುದೇ ವಿಭಾಗ ಎಂದು ಉಲ್ಲೇಕಿಸಿರುವ ಪದವು ನಿರ್ಜೀವವಾಗುತ್ತದೆ/ ಸೀಮಿತವಾಗುತ್ತದೆ.

ಅಲಿನೇಷನ್ ಅಂದರೆ ಇದರಲ್ಲಿ ಕ್ರಯ, ವರ್ಗಾವಣೆ, ಮಾಲೀಕತ್ವ ವರ್ಗಾವಣೆ, ಆಸ್ತಿಯಲ್ಲಿ ತನ್ನ ಆಸಕ್ತಿಯನ್ನು ಹಂಚುವ ಅಥವಾ ವಿಲೇವಾರಿಮಾಡುವ, ಎಂಬ ಎಲ್ಲಾ ಅರ್ಥದಲ್ಲಿ ಬರುವುದರಿಂದ ಇಂತಹ ವರ್ಗಾವಣೆಗೆ ಮಿತಾಕ್ಷರ ಕಾನೂನಿನಲ್ಲಿ ವಿಲೇವಾರಿ/ ಇತ್ಯರ್ಥ ಮಾಡುವ ಸಾಮರ್ಥ್ಯ ಇತ್ತೆ ಎನ್ನುವುದು ನಿರ್ದಾರವಾಗಿ ನಂತರವಷ್ಟೇ 20–12–

2004 ರ ಒಳಗೆ ನಡೆದಂತಾ ಅಂತಹ ವರ್ಗಾವಣೆಗಳು ಪ್ರಶ್ನಿಸಲಾಗದು ಎಂಬುದಾಗಿ ನಾವು ಅರ್ಥೈಸುವುದು ಸೂಕ್ತವಾಗುತ್ತದೆ.

## ಕೋಪಾರ್ಸನರ್ ಹುಚ್ಚ ಎಂದಾದರೆ ಹೇಗೆ

## ಡಿಸ್ಪೋಸಿಷನ್, ಡಿಸ್ಪೋಸ್ ಮತ್ತು ಅಲಿನೇಷನ್

### (ಎಂದರೆ ಯಾವ ಅರ್ಥ ಸೂಚಿಸುತ್ತೆ)

1. ಕಲಂ 2(24) ದಾನ ತೆರಿಗೆ (ಗಿಫ್ಟ್ ಟ್ಯಾಕ್ಸ್) ಕಾಯ್ದೆ ಅಡಿಯಲ್ಲಿ ಸ್ವತ್ತು ವರ್ಗಾವಣೆಯಲ್ಲಿ ಡಿಸ್ಪೊಸಿಷನ್, (ವ್ಯವಸ್ಥೆ ಅಥವ ಇತ್ಯರ್ಥ) ಕನ್ವೇಯನ್ಸ್, ಅಸೈನ್ಮೆಂಟ್, ಸೆಟಲ್ಮೆಂಟ್, ವಿತರಣೆ ಮಾಡುವುದು, ಪಾವತಿ ಅಥವ ಇತರೆ ಸ್ವತ್ತು ಅಲಿನೇಷನ್....... ಇನ್ನು ಇತ್ಯಾದಿ ಒಳಗೊಂಡಿದೆ ಎಂಬ ವ್ಯಾಖ್ಯಾನವಿದೆ. ಇಲ್ಲಿ ಡಿಸ್ಪೊಸಿಷನ್ ಅರ್ಥವನ್ನು ವಿವರಿಸಿಲ್ಲ.

2. ಈ ಶಬ್ದಗಳು ನಿಘಂಟುವಿನಲ್ಲಿ ವಿವಿದ ಅರ್ಥವನ್ನು ನೀಡುತ್ತದೆ ಅದರ ಅರ್ಥವನ್ನು ನಾವು ನೋಡಬಾರದು ಕೇವಲ ಆದು ಆ ನಿಯಮದಲ್ಲಿ ಉಪಯೋಗಿಸಲಾದ ಅರ್ಥದಲ್ಲಿ ಬಳಕೆಯಾಗಬೇಕು. ಸ್ವತ್ತು ವರ್ಗಾವಣೆ ಕಾಯ್ದೆಯಲ್ಲಿ ಬಳಕೆಯಾಗಿರುವುದು "ಡಿಸ್ಪೊಸಿಷನ್" (ವ್ಯವಸ್ಥೆ ಅಥವ ಇತ್ಯರ್ಥ) ಎನ್ನುವ ಪದದ ಅರ್ಥ ತನ್ನದೇ ಆದದನ್ನು ಒಬ್ಬ ವ್ಯಕ್ತಿಯಿಂದ ಬಿಟ್ಟುಕೊಡುವುದು ಅಥವಾ ಬಿಟ್ಟುಬಿಡುವುದು,[1]

3. "ಡಿಸ್ಪೊಸಿಷನ್" (ವ್ಯವಸ್ಥೆ ಅಥವ ಇತ್ಯರ್ಥ) ಎನ್ನುವ ಪದ ಕಾನೂನಿನದ್ದಲ್ಲ, ಅದು ನಿರ್ದಿಷ್ಟ ಅರ್ಥವನ್ನು ಹೊಂದಿಲ್ಲ. ಅದರ ಅರ್ಥವನ್ನು ಯಾವ ಜಾಗದಲ್ಲಿ ಉಪಯೋಗಿಸಿದೆ ಎಂಬುದನ್ನು ನೋಡಿ

[1] ಎ.ಐ.ಆರ್ 1971 ಎಸ್.ಸಿ 2410.

ಅರ್ಥೈಸಬೇಕಾಗುತ್ತದೆ. ಸ್ವತ್ತು ವರ್ಗಾವಣೆ ಕಾಯ್ದೆಯಲ್ಲಿ ಸದರಿ ಪದವನ್ನು ಇತರೆ ಸಮಾನಾಂತರ ಪದಗಳ ಜೊತೆಯಲ್ಲಿ ಉಪಯೋಗಿಸಿರುವುದರಿಂದ ಅದನ್ನು ಇಬ್ಬರು ಅಥವ ಅದಕ್ಕಿನ ಹೆಚ್ಚು ಜನರು ಮಾಡಿರುವ ಕ್ರಿಯೆ ಎಂದು ಅರ್ಥೈಸಿರುತ್ತೆ ಸುಪ್ರೀಮ್ ಕೋರ್ಟ್.[1]

4. ಸ್ವಯಾರ್ಜಿತ ಸ್ವತ್ತನ್ನು ಒಟ್ಟುಕುಟುಂಬಕ್ಕೆ ಮಿಶ್ರಣ ಮಾಡುವ ಪ್ರಕ್ರಿಯೆಯಲ್ಲಿ ಸ್ವತ್ತು ವರ್ಗಾವಣೆಯೂ ಅಲ್ಲ, ಸ್ವತ್ತು ದಾನವೂ ಅಲ್ಲ, ಆದರೆ ಅಂತಹ ಮಿಶ್ರಣ ಮಾಡಿದ ನಂತರ ಸ್ವಯಾರ್ಜಿತ ಹಕ್ಕುಗಳನ್ನು ಆ ವ್ಯಕ್ತಿ ಕಳೆದುಕೊಳ್ಳುತ್ತಾನೆ, ಇದೊಂದು ವಿಚಿತ್ರವಾದ ಪ್ರಕ್ರಿಯೆ.[2]

5. "ಡಿಸ್ಪೊಸಿಷನ್" (ವ್ಯವಸ್ಥೆ ಅಥವ ಇತ್ಯರ್ಥ) ಎನ್ನುವ ಪದವಿನ್ಯಾಸ ಒಂದು ವ್ಯಕ್ತಿಯಿಂದ ಮತ್ತೊಂದು ವ್ಯಕ್ತಿಗೆ ಆಸ್ತಿಯ ಆಸಕ್ತಿಯ ವರ್ಗಾವಣೆಯ ಅಂಶವನ್ನು ಒಳಗೊಂಡಿರುತ್ತದೆ ಮತ್ತು ವರ್ಗಾವಣೆಯ ಅಂತಹ ಅಂಶವು ಅವಿಭಜಿತ ಹಿಂದೂ ಕುಟುಂಬದ ವಿಭಜನೆಯ ಪರಿಕಲ್ಪನೆಯಲ್ಲಿ ಕಂಡುಬರುವುದಿಲ್ಲ.[3]

6. ಭಾರತೀಯ ಸ್ಟಾಂಪ್ ಕಾಯ್ದೆ ಕಲಂ 2(24) ರಲ್ಲಿ ವಿವರಿಸಿರುವಂತೆ ಸೆಟಲ್ಮೆಂಟ್ ಎಂದರೆ ಉಯಿಲಲ್ಲದ (ನಾನ್ ಟೆಸ್ಟಮೆಂಟರಿ) ಡಿಸ್ಪೊಸಿಷನ್ (ವ್ಯವಸ್ಥೆ ಅಥವ ಇತ್ಯರ್ಥ) ಲಿಖಿತದಲ್ಲಿ ಸ್ಥಿರ ಮತ್ತು ಚರ ಆಸ್ತಿಯಲ್ಲಿ ಎಂದು ಇದೆ.

7. ಬ್ಲ್ಯಾಕ್ಸ್ ಲಾ ಡಿಕ್ಷನರಿಯಲ್ಲಿ ಯಾವುದಾದರೊಂದು ಕಾಳಜಿ ಅಥವಾ ಹತೋಟಿಗೆ ವರ್ಗಾವಣೆ ಮಾಡುವ ಕ್ರಿಯೆಯಾಗಿ "ಇತ್ಯರ್ಥ" (ಡಿಸ್ಪೊಸಿಷನ್) ಎಂದು ವ್ಯಾಖ್ಯಾನಿಸುತ್ತದೆ; ಅಥವಾ ಬಿಟ್ಟುಬಿಡುವುದು

---

[1] ಎ.ಐ.ಆರ್ 1970 ಎಸ್.ಸಿ 1722

[2] 1967 (65) ಐ.ಟಿ.ಆರ್ 19 (ಮೈಸೂರು) – ಎ.ಐ.ಆರ್ 1970 ಮದ್ರಾಸ್ 441. – ಎ.ಐ.ಆರ್ 1968 ಕೇರಳ 190

[3] ಐ.ಎಲ್.ಆರ್ 1974 ಕರ್ನಾಟಕ 293

ಅಥವಾ ಸ್ವತ್ತು ಬಿಟ್ಟುಕೊಡುವುದು". – ಇದೇ ಡಿಕ್ಷನರಿ ಪ್ರಕಾರ "ಟೆಸ್ಟಮೆಂಟರಿ ಡಿಸ್ಪೋಸಿಷನ್" ಎಂದರೆ "ಮಾಲೀಕನ ಸಾವಿನ ನಂತರ ಆಸ್ತಿಯನ್ನು ಮತ್ತೊಬ್ಬರಿಗೆ ಸಾಗಿಸುವುದು. ಉಡುಗೊರೆ ನೀಡುವ ಮೂಲಕ, ನೀಡುವವರು ಸಾಯುವವರೆಗೆ ಅಥವಾ ಆ ಘಟನೆಯವರೆಗೆ ಪರಿಣಾಮಕಾರಿಯಾಗದೇ ಇರುವ ವಿಲ್ ಅಥವಾ ಪತ್ರ. ಮೂಲಕ ಆಸ್ತಿಯನ್ನು ಇತ್ಯರ್ಥಗೊಳಿಸುವುದು" ಕನ್ನಡದಲ್ಲಿ ಡಿಸ್ಪೋಸಿಷನ್ ಎಂದರೆ ಇತ್ಯರ್ಥ, ಕ್ರಮದಲ್ಲಿಡುವುದು, ಅಳವಡಿಸುವುದು, ವ್ಯವಸ್ಥೆಗೊಳಿಸುವುದು ಎಂಬ ಪದಾರ್ಥಗಳು ಬರುತ್ತವೆ. ಕನ್ನಡದಲ್ಲಿ ಟೆಸ್ಟಮೆಂಟರಿ ಎಂದರೆ ಒಪ್ಪಂದದ ಮೂಲಕ, ಸಾಕ್ಷಿ ಅಥವ ರುಜುವಾತು ಮೂಲಕ, ಉಯಿಲು ಅಥವ ಮರಣ ಶಾಸನ ಮೂಲಕ, ಸತ್ತವನ ಸೆಲವು, ನಂಬಿಕೆಯ ಒಪ್ಪಿಗೆ ಎಂಬ ಪದಾರ್ಥಗಳು ಬರುತ್ತವೆ.

8. ಕಲಂ 27, 28, 29, 30 ಸ್ವತ್ತು ವರ್ಗಾವಣೆ ಕಾಯ್ದೆ (ಟ್ರಾನ್ಸಫರ್ ಆಫ್ ಪ್ರಾಪರ್ಟಿ ಆಕ್ಟ್) ಅಡಿಯಲ್ಲಿ ಸ್ವತ್ತು ವರ್ಗಾವಣೆ ಎಂಬ ಅರ್ಥದಲ್ಲೇ ಉಪಯೋಗಿಸಲಾಗಿದೆ, ಈ ಹಿಂದಿನ ಇತ್ಯರ್ಥ, ಆಚೆಯ/ದೂರದ ಇತ್ಯರ್ಥ ಎಂಬುದಾಗಿ ಉಪಯೋಗಿಸಲಾಗಿದೆ.

9. ಟ್ರಸ್ಟ್ ಡೀಡ್ (ನ್ಯಾಸ ದಾಖಲೆ) ಬಗ್ಗೆ ಮದ್ಯಪ್ರದೇಶ ಹೈಕೋರ್ಟ್ ಸ್ಟಾಂಪ್ ಕಾಯ್ದೆ ಅಡಿಯಲ್ಲಿ ಡಿಸ್ಪೋಸಿಷನ್ (ವ್ಯವಸ್ಥೆ ಅಥವ ಇತ್ಯರ್ಥ) ಬಗ್ಗೆ ವ್ಯಾಖ್ಯಾನಿಸುವಾಗ ಟ್ರಸ್ಟ್ ಡೀಡ್ ಡಿಸ್ಪೋಸ್ (ವಿಲೇವಾರಿ) ಮಾಡಿದಂತೆ ಆಗುವುದಿಲ್ಲ, ಇದರಲ್ಲಿ ಆಸ್ತಿಗಳ ಪಾಲನೆ ಹಕ್ಕು ಮಾತ್ರ ನೀಡಲ್ಪಟ್ಟಿರುತ್ತದೆ ಎನ್ನುತ್ತದೆ.[1]

10. ಹಿಂದು ಉತ್ತರಾಧಿತ್ವ ಕಾಯ್ದೆ ಅಡಿಯಲ್ಲಿ "ಡಿಸ್ಪೋಸ್" (ವಿಲೇವಾರಿ) "ಡಿಸ್ಪೋಸ್ಡ್" (ವಿಲೇ ಮಾಡಿದ್ದು) "ಡಿಸ್ಪೊಸಿಷನ್" (ವ್ಯವಸ್ಥೆ ಅಥವ ಇತ್ಯರ್ಥ) ಎಂದು ಮೂರು ಪದ ಬಳಕೆಯಾಗಿದೆ. ಕಲಂ 3(1)

---

[1] ಎ.ಐ.ಆರ್ 1991 ಎಂ.ಪಿ. 247

(ಜಿ) ಅಡಿಯಲ್ಲಿ "ಇಂಟೆಸ್ಟೇಟ್" (ಉಯಿಲನ್ನು ಬರೆದಿಡದೆ) ಎಂಬ ಪದವನ್ನು ವ್ಯಾಖ್ಯಾನಿಸುವಾಗ್ಗೆ "ಡಿಸ್ಪೊಸಿಷನ್" ಪದ ಬಳಕೆ ಆಗಿದೆ. "ಟೆಸ್ಟಮೆಂಟರಿ ಡಿಸ್ಪೊಸಿಷನ್" ಎಂದು ಬಳಸಿರುತ್ತಾರೆ. "ರುಜುವಾತು ಮುಖಾಂತರ ವ್ಯವಸ್ಥೆ" – ಅಂದರೆ ರುಜುವಾತು ಮುಖಾಂತರ ವ್ಯವಸ್ಥೆ ಮಾಡದೆ ಇರುವ ಉತ್ತರಾಧಿಕಾರತ್ವಕ್ಕೆ ಇಂಟೆಸ್ಟೇಟ್ ಎಂದು ಹೆಸರಿಸಿರುತ್ತಾರೆ.

11. ಹಿಂದು ಉತ್ತರಾಧಿತ್ವ ಕಾಯ್ದೆ ಕಲಂ 30 ರಲ್ಲಿ ಹಿಂದು ಮಹಿಳೆಯಾಗಲೀ ಪುರುಷನಾಗಲೀ ವಿಲ್ ಅಥವ ಇನ್ನಿತರೆ ರುಜುವಾತು ಪಡಿಸುವ ವ್ಯವಸ್ಥೆ (ಟೆಸ್ಟಮೆಂಟರಿ ಡಿಸ್ಪೊಸಿಷನ್) ಮುಖೇನೆ ಯಾವುದೇ ಆಸ್ತಿಯನ್ನು ಭಾರತೀಯ ಉತ್ತರಾಧಿಕಾರಿತ್ವ ಕಾಯ್ದೆ ಅಥವ ಇನ್ನಿತರೆ ಜಾರಿಯಲ್ಲಿರುವ ಕಾಯ್ದೆ ಅನ್ವಯ ಅವರಿಂದ ಅಥವಾ ಅವಳ ಮೂಲಕ ವಿಲೇವಾರಿ ಮಾಡಬಹುದಾದ ಸಾಮರ್ಥ್ಯದ ಮುಖೇನ ವಿಲೇ ಮಾಡಬಹುದಾಗಿದೆ. ಹಿಂದು ಮಿತಾಕ್ಷರ ಕೋಪಾರ್ಸನರಿ ಸ್ವತ್ತಿನಲ್ಲಿನ ತನ್ನ ಆಸಕ್ತಿಯನ್ನು ವಿಲ್ ಅಥವ ಇನ್ನಿತರೆ ರುಜುವಾತು ಪಡಿಸುವ ವ್ಯವಸ್ಥೆಯಲ್ಲಿ ವಿಲೇವಾರಿ ಮಾಡಬಹುದಾಗಿರುತ್ತದೆ. – ಈ ಮೇಲಿನ ಕಲಂ 3(1) (ಜಿ) ಮತ್ತು 30 ರಲ್ಲಿ ಬಿಟ್ಟರೆ 1956 ರ ಕಾಯ್ದೆಯಲ್ಲಿ ಬೇರೆ ಎಲ್ಲಿಯೂ ಸದರಿ ಪದ ಉಪಯೋಗಿಸಲಾಗಿಲ್ಲ. ಹಿಂದಿನ ಕಲಂ 6 ರಲ್ಲಿಯೂ ಈ ಪದ ಇಲ್ಲ. ಹಾಗೆಯೇ ಅಲಿನೇಷನ್ ಎಂಬ ಪದವನ್ನು 1956 ರ ಕಾಯ್ದೆಯಲ್ಲಿ ಉಪಯೋಗಿಸಲಾಗಿಲ್ಲ. – ಸುಪ್ರೀಮ್ ಕೋರ್ಟ್ ವ್ಯಾಖ್ಯಾನಿಸಿರುವಂತೆ ಹಿಂದು ಮಿತಾಕ್ಷರ ಕೋಪಾರ್ಸನರಿಯಲ್ಲಿ ಒಮ್ಮೆ ವಿಭಜನೆಗಾಗಿ ಬೇಡಿಕೆ ಸಲ್ಲಿಸಿದೊಡನೆ, ಸ್ಥಿತಿಯಲ್ಲಿ ವಿಭಾಗವಾಗುತ್ತದೆ, ವಿಂಗಡನೆ ಮತ್ತು ಪರಿಧಿಯಿಂದ (ಮೀಟ್ಸ್ ಅಂಡ್ ಬೌಂಡ್ಸ್) ವಿಭಜನೆ ಆಗಿಲ್ಲದೆ ಹೋದರೂ ಅಂತಹ ಕುಟುಂಬ ಅಂದಿನಿಂದ ಒಟ್ಟುಕುಟುಂಬವಾಗಿ ಉಳಿಯುವುದಿಲ್ಲ, ಅಂತಹ ಇಚ್ಛೆಯನ್ನು

ವ್ಯಕ್ತಪಡಿಸಿದವನು ತನ್ನ ಕೋಪಾರ್ಸನರಿ ಆಸ್ತಿಯನ್ನು ಕಲಂ 30 ರ ಕೆಳಗೆ ರುಜುವಾತು ಇತ್ಯರ್ಥ ಮಾಡಬಹುದಾಗಿರುತ್ತದೆ.[1]

12. ಕಲಂ 123 ಸ್ವತ್ತು ವರ್ಗಾವಣೆ ಕಾಯ್ದೆ ಪ್ರಕಾರ ದಾನದ ಮೂಲಕ ಸ್ವತ್ತಿನ ಡಿಸ್ಪೊಸಿಷನ್ (ವ್ಯವಸ್ಥೆ) ಮಾಡಬಹುದು ಎನ್ನುತ್ತದೆ. ಕರ್ನಾಟಕ ಎಸ್.ಸಿ ಮತ್ತು ಎಸ್.ಟಿ (ಪಿಟಿಸಿಎಲ್) ಕಾಯ್ದೆ 1978 ರಲ್ಲಿ "ಪಾರ್ಟಿಷನ್ (ವಿಭಾಗ) ಮತ್ತು ಟೆಸ್ಟಮೆಂಟರಿ ಡಿಸ್ಪೊಸಿಷನ್ (ರುಜುವಾತು ವ್ಯವಸ್ಥೆಯ) "ವರ್ಗಾವಣೆ" ಎಂಬ ಪದದಲ್ಲಿ ಬರುವುದಿಲ್ಲ ಎಂದು ಸ್ಪಷ್ಟವಾಗಿ ತಿಳಿಸಲಾಗಿದೆ.

13. ಸ್ವತ್ತು ವರ್ಗಾವಣೆ ಕಾಯ್ದೆ ಕಲಂ 10 ರಲ್ಲಿ ಅಲಿನೇಷನ್ ಎಂಬ ಪದವನ್ನು ಆಸ್ತಿಯಲ್ಲಿ ತನ್ನ ಆಸಕ್ತಿಯನ್ನು ಹಂಚುವ ಅಥವಾ ವಿಲೇವಾರಿಮಾಡುವ ಎಂಬರ್ಥದಲ್ಲಿ ಉಪಯೋಗಿಸಲಾಗಿದೆ. ಅಲಿನೇಷನ್ ಎಂದರೆ ಕನ್ನಡಾರ್ಥದಲ್ಲಿ ಪ್ರತ್ಯೇಕಿಸುವುದು, ದೂರಮಾಡುವಿಕೆ, ಹೊರಗಾಕುವಿಕೆ, ಪ್ರಕೀಯಗೊಳಿಸುವುದು, ವರ್ಗಾವಣೆ, ಹಸ್ತಾಂತರ, ಅಗಲಿಕೆ, ಅನಾದರ ಎಂದು ಬರುತ್ತದೆ. ಒಟ್ಟಾರೆ ಸಾಮಾನ್ಯ ಅರ್ಥ ಮಾರಾಟಮಾಡುವುದು.

14. ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಅಡಿಯಲ್ಲಿ ಕಲಂ 2(1) ರಲ್ಲಿ "ಅಲಿನೇಟೆಡ್" ಎಂಬ ಪದಕ್ಕೆ ಅರ್ಥ ನೀಡಲಾಗಿದೆ. "ಇದರ ಅರ್ಥವೇನೆಂದರೆ ಸಂಪೂರ್ಣವಾಗಿ, ಅಥವಾ ಭಾಗಶಃ, ಯಾವುದೇ ವ್ಯಕ್ತಿಯ ಮಾಲೀಕತ್ವಕ್ಕೆ, ರಾಜ್ಯ ಸರ್ಕಾರದ ಬಾಡಿಗೆ ಅಥವಾ ಆದಾಯ ಪಾವತಿಯ ಹಕ್ಕುಗಳನ್ನು ವರ್ಗಾಯಿಸಲಾಗಿದೆ;" – ಆಡು ಭಾಷೆಯಲ್ಲಿ ಅಲಿನೇಷನ್ / ಅಲಿನೇಟೆಡ್ ಭೂಮಿ ಅಂದರೆ ಭೂಪರಿವರ್ತನೆ ಆಗಿರುವುದು ಎಂಬುದಾಗಿ ಉಪಯೋಗಿಸಲಾಗುತ್ತಿದೆ. ಇದು ತಪ್ಪು, ಮೂಲವಾಗಿ ಮಾಲೀಕತ್ವ ಸರ್ಕಾರದ್ದು, ಪಹಣಿಯಲ್ಲಿ ಪಟ್ಟಾ

---

[1] ಪವಿತ್ರಾ ದೇವಿ ವಿ. ದರ್ಬಾರಿ ಸಿಂಗ್ 1993 (4) ಎಸ್.ಸಿ.ಸಿ 392.

– ಸರ್ಕಾರಿ ಅಂತ ಬರುತ್ತೆ, ಸರ್ಕಾರ ಸದರಿ ಭೂಮಿಯನ್ನು ಜನರಿಗೆ ನೀಡಿ ಬಾಡಿಗೆ ಪಡೆಯುವುದು ಅದರಲ್ಲಿ ಬರುವ ಉತ್ಪಾದನೆಯಲ್ಲಿ ಲಾಭಪಡೆಯುವುದು ಬಿಟ್ಟುಕೊಟ್ಟು ಯಾವುದೇ ವ್ಯಕ್ತಿಯ ಮಾಲೀಕತ್ವಕ್ಕೆ ಬಿಟ್ಟು ಕೊಡುವುದೇ ಅಲಿನೇಟ್ ಎಂದಾಗುತ್ತದೆ.

15. ಪ್ರೈವಿ ಕೌನ್ಸಿಲ್ ತೀರ್ಪಿನಲ್ಲಿ – ಮಸುಲಿಪಟಮ್ ವಿರುದ್ಧ ಕಾವಲಿ ವೆಂಕಟ ನಾರ್ರೈಣಪ್ಪ 1860 (8) ಎಂ.ಐ.ಎ 500 – "ಎಲ್ಲಿ ವರ್ಗಾವಣೆಗೆ ಅವಶ್ಯಕತೆಯಿದೆಯಾದರೂ, ಹಿಂದೂ ಕಾನೂನಿನಿಂದ ಎಲಿಯನೇಟ್ (ದೂರಮಾಡು) ಮಾಡುವ ತನ್ನ (ವಿಧವೆಯ) ಅಧಿಕಾರವನ್ನು ನಿರ್ಬಂಧಿಸುವ ನಿರ್ಬಂಧವು ಕಾರ್ಯನಿರ್ವಹಿಸುವುದನ್ನು ನಿಲ್ಲಿಸುತ್ತದೆ, ಮತ್ತು ಮಾಲೀಕನಂತೆ ವಿಧವೆಯು ಎಲಿಯನೇಟ್ (ದೂರಮಾಡುವುದಕ್ಕೆ) ಯಾವ ರೂಪದಲ್ಲಿ ತೆಗೆದುಕೊಳ್ಳಬೇಕೆಂದು ನಿರ್ಧರಿಸಲು ಸಂಪೂರ್ಣ ವಿವೇಚನೆ ಇರುತ್ತದೆ." – ಇಲ್ಲಿ ಎಲಿಯನೇಟ್ ಗಳಲ್ಲಿ ವಿದಗಳಿವೆ ಎನ್ನುವುದನ್ನು ಪ್ರೈವಿ ಕೌನ್ಸಿಲ್ ತೋರಿಸುತ್ತದೆ.

16. "ಈ ಹಕ್ಕನ್ನು ಹೇಗೆ ನಿಖರವಾಗಿ ನಿರ್ವಹಿಸಬೇಕು ಎಂಬುದನ್ನು, ಒಂದು ಅಡಮಾನ, ಮಾರಾಟ ಅಥವಾ ಇತರ ವಿಧಾನಗಳಿಂದ ಕಟ್ಟುನಿಟ್ಟಾದ ನಿಯಮಗಳು ಅಥವಾ ಕಾನೂನು ಸೂತ್ರಗಳ ಮೂಲಕ ನಿರ್ಧರಿಸಲಾಗದು ಆದರೆ ಪಕ್ಷಕಾರನ ಸಮಂಜಸವಾದ ವಿವೇಚನೆಗೆ ಬಿಡಬೇಕು. ದುರುದ್ದೇಶ ಅಥವಾ ಅತಿರಂಜಿತತೆಯ ಅನುಪಸ್ಥಿತಿಯಲ್ಲಿ ಮತ್ತು ಅದು ಎಲ್ಲಿವರೆಗೆ ಪಾತ್ರದಲ್ಲಿ ಅನ್ಯಾಯವಾಗಿರುವುದಿಲ್ಲ, ಅಥವಾ ಅಸಮಂಜಸವಾಗಿರುವುದಿಲ್ಲ, ನ್ಯಾಯಾಲಯವು ಅನ್ಯ ವಿಧಾನವನ್ನು ಅಥವಾ ಹಸ್ತಾಂತರ ಪರಿಮಾಣವನ್ನು ಚೆನ್ನಾಗಿ ಕಣ್ಣಾಯಿಸುವುದಿಲ್ಲ."[1]

[1] ಬೋಡಾ ವೀರರಾಜು ವಿ. ವೆಚ್ಚ ವೆಂಕಟರತ್ನಮ್ 1939 (1) ಎಂ.ಎಲ್.ಜೆ 23.

17. ಹಿಂದು ಉತ್ತರಾಧಿಕಾರಿತ್ವ ಕಾಯ್ದೆ ಕಲಂ 30 ರಲ್ಲಿ ವಿಲ್ ಮುಖಾಂತರ ಹಿಂದು ಮಿತಾಕ್ಷರ ಕೋಪಾರ್ಸನರಿ ಸ್ವತ್ತಿನಲ್ಲಿ ವ್ಯವಸ್ಥೆ ಮಾಡಬಹುದು. ಗಮನಿಸಬೇಕಾದ ಗಮನಾರ್ಹ ಅಂಶವೆಂದರೆ ಶಾಸಕಾಂಗವು ಬೇರ್ಪಡಿಸುವಿಕೆಗೆ (ಅಲಿನೇಷನ್) ವಿರುದ್ಧವಾದ ನಿಯಮದಂತೆ ದಾನ ನೀಡಬಾರದು ಎಂಬ ಬಗ್ಗೆ ತಿಳಿದಿದೆ., ಆದರೆ ಇದು ಮಿತಕ್ಷರ ಕೋಪಾರ್ಸೆನರಿ ಆಸ್ತಿಯಲ್ಲಿ ಪುರುಷ ಹಿಂದೂ ವಿಲ್ನ ಮೂಲಕ ಇತ್ಯರ್ಥಕ್ಕೆ ಅನುಮತಿಸಿರುತ್ತೆ.[1]

18. ಮಿತಾಕ್ಷರ ಕೋಪಾರ್ಸನರ್ ಮಾಲೀಕತ್ವದ ಇನ್ಸಿಡೆನ್ಸ್ (ವ್ಯಾಪ್ತಿ/ ಪರಿಣಾಮ/ ಹೊರೆ) ಆಗಿ ಆಕೆ ಹಿಡಿದಿಟ್ಟು ಕೊಳ್ಳಬೇಕು ಎಂದರೆ ಏನು ? – ಇದನ್ನು ತಿಳಿಯಲು – ಕೋಪಾರ್ಸನರ್ ಮಾಲೀಕತ್ವದ ಬಗ್ಗೆ ಅದರಲ್ಲಿರುವ ಮಹತ್ವವನ್ನು ವಿವರಿಸಿ ವಿಶ್ಲೇಶಿಸಿದ ಸುಪ್ರೀಮ್ ಕೋರ್ಟ್ ತನ್ನ ಮುಂದೆ ಬಂದ ಕೇಸಲ್ಲಿ[2] "(1) ಒಂದು ಹಿಂದೂ ಮಿತಾಕ್ಷರ ಜಂಟಿ ಕುಟುಂಬದ ಆಸ್ತಿಯನ್ನು ಎಲ್ಲಾ ಕೋಪಾರ್ಸೆನರ್ಗಳಿಂದ ಸಾಮೂಹಿಕ ಮಾಲೀಕತ್ವದಲ್ಲಿ ಭಾಗಶಃ ಸಾಂಸ್ಥಿಕ ಸಾಮರ್ಥ್ಯದಲ್ಲಿ ನಡೆಸಲಾಗುತ್ತದೆ. (2) ಜಂಟಿ ಕುಟುಂಬದ ಆಸ್ತಿಯನ್ನು ಜಂಟಿ ಕುಟುಂಬದ ಸದಸ್ಯರಿಗಾಗಿ ನಂಬಿಕೆಯಿಂದ ಹಾಲಿ ಇರುವವರಿಗೆ ಮತ್ತು ನಂತರ ಹುಟ್ಟುವವರಿಗೆ ಇಡಲಾಗುತ್ತದೆ. (3) ಮೂರನೆಯ ತಲೆಮಾರಿನವರೆಗಿನ ವ್ಯಕ್ತಿಯ ಸಾಲಿನ ಪುರುಷ (ಈಗ ಮಹಿಳೆ) ವಂಶಸ್ಥರು, ಅಂತಹ ವ್ಯಕ್ತಿಯ ಪೂರ್ವಿಕ ಸ್ವತ್ತುಗಳಲ್ಲಿ ಜನ್ಮ ಮಾಲೀಕತ್ವವನ್ನು ಪಡೆದುಕೊಳ್ಳುತ್ತಾರೆ. (4) ಅಂತಹ ವಂಶಸ್ಥರು ಯಾವ ಸಮಯದಲ್ಲಾದರೂ ವಿಭಜನೆಯನ್ನು ಕೇಳುವ ಮೂಲಕ ತಮ್ಮ ಹಕ್ಕುಗಳನ್ನು ಸಾಧಿಸಬಹುದು (5) ವಿಭಜನೆಯ ತನಕ ಉಳಿದ ಪ್ರತಿಯೊಬ್ಬ ಸದಸ್ಯರೂ ಒಟ್ಟಾರೆಯಾಗಿ ಇಡೀ ಆಸ್ತಿಯ ಮೇಲೆ

---

[1] ರಾಧಮ್ಮ ವಿ. ಮುದ್ದು ಕೃಷ್ಣ – ಎ.ಐ.ಆರ್ 2019 ಎಸ್.ಸಿ 643

[2] ಎಸ್.ಬಿ.ಐ ವಿರುದ್ಧ ಘಮಾಂದಿರಾಮ್ – ಎ.ಐ.ಆರ್ 1969 ಎಸ್.ಸಿ 1130

ಉಳಿದಿರುವ ಜತೆಗೂಡಿ ಮಾಲೀಕತ್ವವನ್ನು ವಿಸ್ತರಿಸುತ್ತಾರೆ; (6) ಅಂತಹ ಸಹ–ಮಾಲೀಕತ್ವದ ಪರಿಣಾಮವಾಗಿ ಆಸ್ತಿಗಳ ಸ್ವಾಧೀನ ಮತ್ತು ಅನುಬವವು ಸಾಮಾನ್ಯವಾಗಿದೆ. (7) ಕೋಪಾರ್ಸೆನರ್ಗಳ ಒಪ್ಪಿಗೆಯಿಲ್ಲದೆ, ಅವಶ್ಯಕತೆಯಿಲ್ಲದಿದ್ದರೆ ಆಸ್ತಿಯ ಯಾವುದೇ ಅಲಿನೇಷನ್ (ಹಸ್ತಾಂತರ) ಸಾಧ್ಯತೆಯಿಲ್ಲ. (8) ಸತ್ತವರ ಸದಸ್ಯರ ಆಸಕ್ತಿಯನ್ನು ಬದುಕುಳಿದವರಿಗೆ ವರ್ಗವಾಗುತ್ತೆ (ಆದರೆ ಈಗ 2005 ರ ನಂತರ ಬದುಕುಳಿದವರಿಗೆ ಹಸ್ತಾಂತರ ಆಗುವುದಿಲ್ಲ, ಸತ್ತ ವ್ಯಕ್ತಿಯ 1ನೇ ದರ್ಜೆ ವಾರಸ್ಸುದಾರರಿಗೆ ವರ್ಗವಾಗುತ್ತೆ.).

## ಹಿಂದು ಆಸ್ತಿಯನ್ನು ಪರಭಾರೆ ಮಾಡುವ ಹಕ್ಕು

ಜಸ್ಟೀಸ್ ವಿ. ರಾಮಸುಬ್ರಮಣಿಯನ್ ಮತ್ತು ಜಸ್ಟೀಸ್ ಅನೀಸ್ ತೆಲಂಗಾಣ ಹೈಕೋರ್ಟಿನ ಮುಂದೆ ಬಂದಂತಾ ಪ್ರಕರಣವೊಂದರಲ್ಲಿ,[1] 2005 ರ ತಿದ್ದುಪಡಿಯಲ್ಲಿ ಉಲ್ಲೇಖಿಸಲಾಗಿರುವ ಟೆಸ್ಟಮೆಂಟರಿ ಡಿಸ್ಪೋಸಿಷನ್ ಅನ್ನು ವ್ಯಾಖ್ಯಾನಿಸಲಾಗಿದೆ, "ಸೆಕ್ಷನ್ 6 (1) ಅನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಕೇಂದ್ರ ಕಾಯ್ದೆ ಸಂಖ್ಯೆ 39/2005 ರ ತಿದ್ದುಪಡಿಯಿಂದ, ಮಿತಾಕ್ಷರ ಕಾನೂನಿನಿಂದ ಆಡಳಿತ ನಡೆಸುವ ಜಂಟಿ ಹಿಂದೂ ಕುಟುಂಬದಲ್ಲಿ ಕೋಪಾರ್ಸೆನರ್‌ನ ಮಗಳನ್ನು ಹುಟ್ಟಿನಿಂದಲೇ

---

[1] ಸೀತಮ್ಮ ವಿ. ತಿಮ್ಮಾರೆಡ್ಡಿ – ಮನು/ಎ.ಪಿ/0233/2017 (ಡಿ.ಬಿ)

ಕೋಪಾರ್ಸೆನರ್‌ನ್ನಾಗಿ ಮಾಡಲಾಗಿದೆ ಎಂದು ತೋರಿಸುತ್ತದೆ. ಮಗನಂತೆಯೇ ಮತ್ತು ಮಗನಂತೆ ಕೋಪಾರ್ಸೆನರಿ ಆಸ್ತಿಗೆ ಸಂಬಂಧಿಸಿದಂತೆ ಅದೇ ಹಕ್ಕುಗಳು ಮತ್ತು ಭಾಧ್ಯತೆಗಳನ್ನು ಹೊಂದಿರುತ್ತಾಳೆ. ಆದರೆ ಉಪ–ಕಲಂ (1) ರ ನಿಬಂಧನೆಯು 20.12.2004 ಕ್ಕಿಂತ ಮೊದಲು ನಡೆದ ಯಾವುದೇ ವಿಭಜನೆ ಅಥವಾ ಟೆಸ್ಟಮೆಂಟರಿ (ಒಡಂಬಡಿಕೆಯ/ಉಯಿಲು) ಇತ್ಯರ್ಥವನ್ನು ಒಳಗೊಂಡಂತೆ ಯಾವುದೇ ಸ್ವರೂಪದ ಇತ್ಯರ್ಥ ಅಥವಾ ಪರಭಾರೆ ಮೇಲೆ ಪರಿಣಾಮ ಬೀರುವುದಿಲ್ಲ ಅಥವಾ ಅಮಾನ್ಯಗೊಳಿಸುವುದಿಲ್ಲ ಎಂದು ಸ್ಪಷ್ಟಪಡಿಸುತ್ತದೆ. ....... ಕಲಂ 6 ರ ಉಪಕಲಂ (1) ರ ನಿಬಂಧನೆಯಲ್ಲಿ ಕಂಡುಬರುವ ಎರಡು ಪದವಿನ್ಯಾಸ ಮಹತ್ವದ್ದಾಗಿವೆ. ಅವು (1) ಇತ್ಯರ್ಥ(ಡಿಸ್ಪೋಸಿಷನ್) ಮತ್ತು (2) ಪರಕೀಯತೆ (ಅಲಿನೇಷನ್) . ಈ ಎರಡು ಪದವಿನ್ಯಾಸಗಳ ವ್ಯಾಪ್ತಿಯಲ್ಲಿ ಯಾವುದೇ ವಿಭಾಗ (ಪಾರ್ಟೀಷನ್) ಅಥವಾ ಒಡಂಬಡಿಕೆಯ ಇತ್ಯರ್ಥವನ್ನು (ಟೆಸ್ಟಮೆಂಟರಿ ಡಿಸ್ಪೋಸಿಷನ್) ಸಹ ಸೇರಿಸಲಾಗುತ್ತದೆ ಎಂಬ ಉಪಾಸಿದ್ಧಾಂತದ ಪರಿಣಾಮಕ್ಕೆ ಅನುಸರಿಸುತ್ತದೆ. ..... ಪರಕೀಯತೆ (ಅಲಿನೇಷನ್) ಎಂಬ ಪದವಿನ್ಯಾಸದ ಉದ್ದೇಶವನ್ನು ಅರ್ಥಮಾಡಿಕೊಳ್ಳಲು ನಮಗೆ ಯಾವುದೇ ತೊಂದರೆ ಇಲ್ಲವಾದರೂ, "ಇತ್ಯರ್ಥ" (ಡಿಸ್ಪೋಸಿಷನ್) ಎಂಬ ಪದವಿನ್ಯಾಸದ ಅರ್ಥವನ್ನು ವಿವರಿಸುವಲ್ಲಿ ಸ್ವಲ್ಪ ತೊಂದರೆ ಇದೆ. "ವಿಲೇವಾರಿ" (ಡಿಸ್ಪೋಸಿಷನ್) ಎಂಬ ಅಭಿವ್ಯಕ್ತಿಯ ಅರ್ಥದೊಳಗೆ "ಟೆಸ್ಟಮೆಂಟರಿ ಡಿಸ್ಪೋಸಿಷನ್" ಅನ್ನು ಸೇರಿಸುವುದರಿಂದ ಈ ತೊಂದರೆ ಹೆಚ್ಚಾಗುತ್ತದೆ. ಸಾಮಾನ್ಯವಾಗಿ ಒಬ್ಬರು "ಟೆಸ್ಟಮೆಂಟರಿ ಡಿಸ್ಪೋಸಿಷನ್" ಎಂಬ ಅಭಿವ್ಯಕ್ತಿಯನ್ನು ಒಂದು ಟೆಸ್ಟಮೆಂಟರಿ ದಾಖಲೆಯ ಕಾರ್ಯಗತ ಮಾಡುವುದನ್ನು ಅರ್ಥೈಸಿಕೊಳ್ಳುತ್ತಾರೆ, ಭವಿಷ್ಯದಲ್ಲಿ ಇದು ಕಾರ್ಯರೂಪಕ್ಕೆ ಬರಲಿದೆ,

ಆದರೆ ಪರಕೀಯತೆಯು ಹಾಲಿಯಾಗಿ ನಡೆಯುತ್ತದೆ. ಆದ್ದರಿಂದ ಸೆಕ್ಷನ್ 6 (1) ರ ನಿಬಂಧನೆಯಿಂದ ಉಂಟಾಗುವ ಗೊಂದಲ ಅಥವಾ ತೊಂದರೆ ಎಂದರೆ, ಇದು ನಿರ್ಣಾಯಕ ದಿನಾಂಕ ಅಥವಾ ಕಾರ್ಯಗತ ಮಾಡಿದ ದಿನಾಂಕ ಪರೀಕ್ಷಕನ ಮರಣದ ಮುಂಚಿತವಾಗಿ ಜಾರಿಗೆ ಬಂದಿರುವ ಟೆಸ್ಟಮೆಂಟರಿ ಇತ್ಯರ್ಥವನ್ನು ಒಳಗೊಂಡಿದೆಯೆ ಅಥವಾ ಇದು ಇನ್ನೂ ಜಾರಿಗೆ ಬಂದಿಲ್ಲ, ಕಾರಣ ನಿರ್ಣಾಯಕ ದಿನಾಂಕದಂತೆ ಪರೀಕ್ಷಕ ಜೀವಂತವಾಗಿರುತ್ತಾನೆ ಎಂಬುದು. ...... ಎ.ಪಿ. ತಿದ್ದುಪಡಿ ಕಾಯ್ದೆಯು ಸೆಕ್ಷನ್ 29–ಎ, ಇದು 2005 ರ ಕೇಂದ್ರ ತಿದ್ದುಪಡಿಯಿಂದ ಪರಿಚಯಿಸಲಾದ ಸೆಕ್ಷನ್ 6 (1) ರ ನಿಬಂಧನೆಯನ್ನು ಹೋಲುತ್ತದೆ. ಸೆಕ್ಷನ್ 29 ಎ ಯ ಷರತ್ತು (iv) ಎ.ಪಿ. ತಿದ್ದುಪಡಿ ಕಾಯ್ದೆ, 1986 ರ ಪ್ರಾರಂಭದ ಮೊದಲು ಮದುವೆ ಅಥವಾ ಆಸ್ತಿ ವಿಭಜನೆ ಜಾರಿಗೆ ಆಗಿರುವ ಬಗ್ಗೆ ಒಳಗೊಂಡಿರುತ್ತದೆ. ಎ.ಪಿ. ತಿದ್ದುಪಡಿ ಕಾಯ್ದೆಯಲ್ಲಿ ಹೊರಗಿಡುವ ಷರತ್ತಿನಡಿಯಲ್ಲಿ "ಟೆಸ್ಟಮೆಂಟರಿ ಇತ್ಯರ್ಥ" ವನ್ನು ಸೇರಿಸಲಾಗಿಲ್ಲ. .... ಪುಟ 1298 ರಲ್ಲಿ ಅಂತರರಾಷ್ಟ್ರೀಯ ಆವೃತ್ತಿಯಲ್ಲಿನ ವೆಬ್‌ಸ್ಟರ್ ಇನ್ ಕಾಂಪ್ರಹೆನ್ಸಿವ್ ಡಿಕ್ಷನರಿ, 'ಟೆಸ್ಟಮೆಂಟರಿ' ಪದದ ಅರ್ಥವನ್ನು ಹೀಗೆ ಹೇಳಿದೆ: (i) ಇದರಿಂದ ಹುಟ್ಟಿಕೊಂಡಿದೆ, ಸ್ವಾಧೀನ ಹಸ್ತಾಂತರಿಸಿದೆ, ಅಥವಾ ವಿಲ್ ನಲ್ಲಿ ಸಿದ್ಧಪಡಿಸಲಾಗಿದೆ; (ii) ನೇಮಕ ಅಥವಾ ಒದಗಿಸಿದ, ಅಥವಾ ಮಾಡಿದ ಒಂದು ವಿಲ್ಲಿಗೆ ಅನುಗುಣವಾಗಿ; (iii) ವಿಲ್ಲಿಗೆ ಸಂಬಂಧಿಸಿದ, ಅಥವಾ ವಿಲ್ ಆಡಳಿತ ಅಥವಾ ವಿಲ್ ಇತ್ಯರ್ಥಕ್ಕೆ ಸಂಬಂಧಿಸಿದಂತೆ, ಒಪ್ಪಂದ. ...... ಪಿ. ರಾಮನಾಥ ಅಯ್ಯರ್ ಬರೆದ ಲಾ ಲೆಕ್ಸಿಕಾನ್‌ನಲ್ಲಿ, ಪುಟ. 1271 ರಲ್ಲಿ 1987 ರ ಮರುಮುದ್ರಣ "ಟೆಸ್ಟಮೆಂಟರಿ ದಾಖಲೆಯನ್ನು ಅರ್ಥೈಸಲಾಗುತ್ತದೆ, "ಟೆಸ್ಟಮೆಂಟರಿ ಇನ್ಸ್ಟ್ರುಮೆಂಟ್", ಅದು ಅಂತಹ ಘಟನೆಗೆ ಮುಂಚಿತವಾಗಿ ಯಾವುದೇ ಹಕ್ಕುಗಳನ್ನು ಘೋಷಿಸಲು ಅಥವಾ ರಚಿಸಲು ಪ್ರಯತ್ನಿಸದೆ, ಮರಣಾನಂತರ ತನ್ನ ಆಸ್ತಿಯನ್ನು

ವಿಲೇವಾರಿ ಮಾಡುವ ಬಗ್ಗೆ ತಯಾರಕರ ಪ್ರಸ್ತುತ ವಿಲ್ ಘೋಷಿಸುತ್ತದೆ." ..... ಬ್ಲ್ಯಾಕ್ಸ್ ಲಾ ಡಿಕ್ಷನರಿ (6 ನೇ ಆವೃತ್ತಿ. ಪುಟ 1475 ರಲ್ಲಿ) "ಟೆಸ್ಟಮೆಂಟರಿ ಡಿಸ್ಪೋಸಿಷನ್ (ಇತ್ಯರ್ಥ)" ವನ್ನು ಹೀಗೆ ವ್ಯಾಖ್ಯಾನಿಸುತ್ತದೆ – "ಮಾಲೀಕರ ಮರಣದ ನಂತರ ಆಸ್ತಿಯನ್ನು ಇನ್ನೊಬ್ಬರಿಗೆ ಹಸ್ತಾಂತರಿಸುವುದು. ಉಡುಗೊರೆ, ವಿಲ್ ಅಥವಾ ಪತ್ರದ ಮೂಲಕ ಆಸ್ತಿಯನ್ನು ವಿಲೇವಾರಿ ಮಾಡುವುದು ಅನುದಾನ ನೀಡುವವರು ಸಾಯದ ಹೊರತು ಅಥವಾ ಆ ಘಟನೆಯವರೆಗೆ ಅದು ಕಾರ್ಯಗತವಾಗುವುದಿಲ್ಲ." ..... ಆಸ್ತಿ ವರ್ಗಾವಣೆ ಕಾಯ್ದೆಯ ಸೆಕ್ಷನ್ 123 ಉಡುಗೊರೆಯಿಂದ ಇತ್ಯರ್ಥವನ್ನು ಒದಗಿಸುತ್ತದೆ, ಇದು ದಾನಿಗಳ ಜೀವಿತಾವಧಿಯಲ್ಲಿ ಸಹ ಪರಿಣಾಮ ಬೀರುತ್ತದೆ ಮತ್ತು ಅದು ನೋಂದಾಯಿತವಾದ ಕೂಡಲೇ ಪರಿಣಾಮಕಾರಿಯಾಗುತ್ತದೆ ಮತ್ತು ಸಾಮಾನ್ಯವಾಗಿ ಅದರಲ್ಲಿರುವ ಆಸ್ತಿಯನ್ನು ಸ್ವಾಧೀನ ಕೊಡಲಾಗುತ್ತದೆ. ... ಕಾಯಿದೆಯ ಸೆಕ್ಷನ್ 30[1] ಕೇವಲ ಕಾನೂನಿನ ಘೋಷಣೆಯಾಗಿದ್ದು ಅದು ಕಾಯಿದೆಯ ಮುಂದೆ ನಿಂತಂತೆ ಮಾತ್ರವಲ್ಲ, ಆದರೆ ಈಗ ಅದು ಕಾಯಿದೆಯ ನಿಬಂಧನೆಗಳಿಂದ ಮಾರ್ಪಡಿಸಲ್ಪಟ್ಟಿದೆ. ಯಾವುದೇ ಹಿಂದೂ ವಿಲ್ ಅಥವಾ ಇತರ ಒಡಂಬಡಿಕೆಯಿಂದ ವಿಲೇವಾರಿ (ಟೆಸ್ಟಮೆಂಟರಿ ಡಿಸ್ಪೋಸಿಷನ್) ಮಾಡಬಹುದೆಂದು ಅದು ಘೋಷಿಸುತ್ತದೆ, ಇದು ಅವನ ಆಸ್ತಿ ಅಥವಾ ಕೋಪರ್ಸೆನರಿಯಲ್ಲಿನ ಆಸಕ್ತಿಯನ್ನು ಭಾರತೀಯ ಉತ್ತರಾಧಿಕಾರ ಕಾಯ್ದೆ, 1925 ರ ನಿಬಂಧನೆಗಳಿಗೆ ಅನುಗುಣವಾಗಿ ವಿಲೇವಾರಿ ಮಾಡಲು ಹಿಂದೂಗಳಿಗೆ ಅನ್ವಯವಾಗುವಂತೆ ಸಮರ್ಥವಾಗಿದೆ, ಅದರ ವಿವರಣೆಯು ನಿಜವಾಗಿಯೂ ಮಹತ್ವದ ವಿಚಾರವಾಗಿದೆ. ಆದ್ದರಿಂದ, ಟೆಸ್ಟಮೆಂಟರಿ ಇತ್ಯರ್ಥವು ಡಾಕ್ಯುಮೆಂಟ್‌ನ ಕಾರ್ಯಗತ ಮಾಡುವಲ್ಲಿ, ಸಹ–ಕರುಳಿಗೆ ಸೇರಬೇಕೆಂಬ ನಿಯಮದ ಬದಲು ಸಾವಿನ ನಂತರ ಜಾರಿಗೆ ಬರುವಂತೆ ಆಸ್ತಿಯನ್ನು ವಿಲೇವಾರಿ

---

[1] ಹಿಂದು ಉತ್ತರಾಧಿಕಾರ ಕಾಯ್ದೆ 1956

ಮಾಡುವುದು ಎಂದರ್ಥ. ಒಂದು ಟೆಸ್ಟಮೆಂಟರಿ ಇತ್ಯರ್ಥವನ್ನು ಸಾಮಾನ್ಯವಾಗಿ ವಿಲ್ ಅಥವಾ ಕೋಡಿಸಿಲ್ (ವಿಲ್ಗೆ ಸೇರ್ಪಡೆ ಮಾಡಿದ ಬದಲಾವಣೆ ಬಯಸಿದ ದಾಖಲೆ) ಮೂಲಕ ಪರಿಣಾಮ ಬೀರುತ್ತದೆ, ಇದರರ್ಥ ವಿಲ್ಗೆ ಸಂಬಂಧಿಸಿದಂತೆ ಮಾಡಿದ ಒಂದು ಸಾಧನವು ವಿಸ್ತರಿಸುವ, ಮಾರ್ಪಡಿಸುವ ಅಥವಾ ಅದರ ಇತ್ಯರ್ಥಕ್ಕೆ ಮಟ್ಟಷ್ಟು ಸೇರಿಸುವುದು ವಿಲ್ ಭಾಗವಾಗಿ ರೂಪುಗೊಳ್ಳುತ್ತದೆ. ವಿಲ್ 1925 ರ ಭಾರತೀಯ ಉತ್ತರಾಧಿಕಾರ ಕಾಯ್ದೆಯ ಸೆಕ್ಷನ್ 2 (ಎಚ್) ನಲ್ಲಿ ವ್ಯಾಖ್ಯಾನಿಸಿದಂತೆ, ಅವನ ನಿಧನದ ನಂತರ ಜಾರಿಗೆ ತರಲು ಬಯಸಿದ ತನ್ನ ಆಸ್ತಿಗೆ ಸಂಬಂಧಿಸಿದಂತೆ ಪರೀಕ್ಷಕನ ಉದ್ದೇಶವನ್ನು ಕಾನೂನುಬದ್ಧವಾಗಿ ಘೋಷಿಸುವುದು. ಇದು ಬದುಕಿರುವವರ ನಡುವೆ ಪರಭಾರೆಯನ್ನು ಮಿತಿಗೊಳಿಸುತ್ತದೆ. ಉಡುಗೊರೆಯನ್ನು ಪ್ರಸ್ತುತಪಡಿಸುವಲ್ಲಿ ಹಾಲಿಯಾಗಿ ನಡೆಯುತ್ತೇ, ಎಂಬ ಒಂದು ನಿಲುವು ಇದ್ದರೂ, ಅದು ಸರಿಯಾದ ಕಾರ್ಯಗತ ಮತ್ತು ನೋಂದಣಿ ಮತ್ತು ಸಾಮಾನ್ಯವಾಗಿ ಸ್ವಾಧೀನದ ಹಸ್ತಾಂತರದ ಮೇಲೆ ಪರಿಣಾಮಕಾರಿ ಆಗುತ್ತದೆ....... ಸೆಕ್ಷನ್ 30 ರ ಪ್ರಕಾರ ಈ ಕಾಯಿದೆಯಡಿ ಟೆಸ್ಟಮೆಂಟರಿ ಇತ್ಯರ್ಥವನ್ನು ಭಾರತೀಯ ಉತ್ತರಾಧಿಕಾರ ಕಾಯಿದೆಯ ಪ್ರಕಾರ ನಿರ್ವಹಿಸಲಾಗುವುದು. ಈ ಕಾಯಿದೆಯ ಸೆಕ್ಷನ್ 55 ಮತ್ತು ಷೆಡ್ಯೂಲ್ 3 ಹಿಂದೂಗಳ ನಡುವೆ ಉತ್ತರಾಧಿಕಾರವನ್ನು ಅನುಸರಿಸುವ ಕಾರ್ಯವಿಧಾನವನ್ನು ವಿಲ್ ಅಥವಾ ಕೋಡಿಸಿಲ್ (ವಿಲ್ಗೆ ಸೇರ್ಪಡೆ ಮಾಡಿದ ಬದಲಾವಣೆ ಬಯಸಿದ ದಾಖಲೆ) ಮೂಲಕ ಸಾಕ್ಷ್ಯದ ಉತ್ತರಾಧಿಕಾರದಿಂದ (ಟೆಸ್ಟಮೆಂಟರಿ ಸಕ್ಸೇಷನ್) ಸೂಚಿಸುತ್ತದೆ. ಸೆಕ್ಷನ್ 30 ಕಠಿಣವಲ್ಲದ ಷರತ್ತುಗಳನ್ನು ಬಳಸಿಕೊಳ್ಳುತ್ತದೆ ಮತ್ತು ಮಿತಾಕ್ಷರ ಕಾನೂನಿನಿಂದ ನಿಯಂತ್ರಿಸಲ್ಪಡುವ ಸಹವರ್ತಿ (ಕೋಪಾರ್ಸನಾರಿ) ಆಸ್ತಿಗೆ ಅನ್ವಯವಾಗುವ ಮೊದಲೇ ಅಸ್ತಿತ್ವದಲ್ಲಿರುವ ಅಥವಾ ಇನ್ನಾವುದೇ

ಕಾನೂನಿನ ಕಾರ್ಯಾಚರಣೆಯಿಂದ ಹೊರಗಿಡುತ್ತದೆ ಮತ್ತು ಅದರ ವಿವರಣೆಯಲ್ಲಿ ಕಲ್ಪಿತ ಕತೆಯನ್ನು ಪರಿಚಯಿಸಿತು ಮತ್ತು ಹಿಂದೂ ಗಂಡು ಅಥವಾ ಹೆಣ್ಣಿಗೆ ಅವನ ಅಥವಾ ಅವಳ ಆಸಕ್ತಿಯನ್ನು ವಿಲೇವಾರಿ ಮಾಡಲು ಅಧಿಕಾರ ನೀಡುತ್ತದೆ. ವಿಲ್ ಅಥವಾ ಕಾನೂನಿಗೆ ತಿಳಿದಿರುವ ಯಾವುದೇ ಒಡಂಬಡಿಕೆಯ ಇತ್ಯರ್ಥ ನಿಲುವು – ಇದು ನಿಧನದ ನಂತರ ಪರಿಣಾಮಕಾರಿಯಾಗಿರುತ್ತದೆ. ಆದ್ದರಿಂದ, ಉಡುಗೊರೆಯಾಗಿ ಇತ್ಯರ್ಥಪಡಿಸುವುದು ಕಾಯಿದೆಯ ಸೆಕ್ಷನ್ 30 ರ ಅಡಿಯಲ್ಲಿ ಸಾಕ್ಷ್ಯದ ಉತ್ತರಾಧಿಕಾರದ (ಟೆಸ್ಟಮೆಂಟರಿ ಸಕ್ಸೇಷನ್) ಪಾತ್ರವನ್ನು ಒಳಗೊಂಡಿರುತ್ತದೆ ಎಂದು ಊಹಿಸುವುದು ಕಷ್ಟ. ...... ಉಡುಗೊರೆ ವಾಸ್ತವವಾಗಿ ಆಸ್ತಿಯ ವರ್ಗಾವಣೆಯಾಗಿದೆ, ಆದರೆ ವಿಲ್ ಅಲ್ಲ. ..... ಅದರ ಸ್ವಭಾವದಿಂದ, ಟೆಸ್ಟಮೆಂಟರಿ ಇತ್ಯರ್ಥವು ಪರಿಣಾಮಕಾರಿ ಆಗುವುದಿಲ್ಲ ಮತ್ತು ಪರೀಕ್ಷಕನು ಸಾಯುವವರೆಗೂ, ಅದು ಅಂತಿಮ ಆಗುವುದಿಲ್ಲ. ಇದು ವಿಲ್ ಅಡಿಯಲ್ಲಿ ಪ್ರಾಪ್ತತೆ ಮಾತ್ರವಲ್ಲ, ಇದು ವಿವಿಧ ಅನಿಶ್ಚಿತತೆಗಳಿಗೆ ಒಳಪಟ್ಟಿರುತ್ತದೆ, ಇದು ಪರೀಕ್ಷಕನ ಜೀವನ ಮತ್ತು ಆಶಯವನ್ನು ಅವಲಂಬಿಸಿರುತ್ತದೆ, ಆದರೆ ಪರೀಕ್ಷಕನು ನಿರ್ದಿಷ್ಟ ಆಸ್ತಿಯನ್ನು ವಿಲ್ ಮುಖೇನ ವ್ಯವಸ್ಥೆ ಗೊಳಿಸುವ ಹಕ್ಕಿನಲ್ಲೂ ಸಹ ಅವನು ಸಾಯುವ ಮೊದಲು ಬದಲಾವಣೆ ತರಬಹುದು. ವಿಲ್ ಕಾರ್ಯಗತ ನಂತರ ಪರೀಕ್ಷಕನು ಮಗುವನ್ನು ಪಡೆದ ಪ್ರಕರಣವನ್ನು ತೆಗೆದುಕೊಳ್ಳಿ. ಜಂಟಿ ಕುಟುಂಬ ಆಸ್ತಿಯಲ್ಲಿ ಅವನ ಅವಿಭಜಿತ ಪಾಲು ವಿಲ್ನ ವಿಷಯವಾಗಿದ್ದರೆ, ವಿಲ್ನ ಕಾರ್ಯಗತದ ನಂತರ ಮಗನ ಜನನದೊಂದಿಗೆ ಅವನ ಸ್ವಂತ ಪಾಲು ಬದಲಾವಣೆಗೆ ಒಳಗಾಗಬಹುದು. ವಿಚಿತ್ರ ಸಂದರ್ಭಗಳಲ್ಲಿ ಇದು ಪರೀಕ್ಷಕನಿಗೆ ಒಡಹುಟ್ಟಿದವರ ಜನನದೊಂದಿಗೆ ಸಂಭವಿಸಬಹುದು. ಆದ್ದರಿಂದ, ಒಂದು ಟೆಸ್ಟಮೆಂಟರಿ ಇತ್ಯರ್ಥವು ಈ ಪದದ ನಿಜವಾದ ಅರ್ಥದಲ್ಲಿ ಎಂದಿಗೂ ನಿಜವಾದ ಸ್ವರೂಪವಾಗಲು

ಸಾಧ್ಯವಿಲ್ಲ, ಏಕೆಂದರೆ ಅದು ಜಾರಿಗೆ ಬರುವುದರಿಂದ ಮತ್ತು ಅದು ಎಷ್ಟರ ಮಟ್ಟಿಗೆ ಪರಿಣಾಮ ಬೀರುತ್ತದೆ, ಜನನ ಮತ್ತು ಮರಣದ ಹೊರತಾಗಿ ಸಮಯ ಮತ್ತು ಮನಸ್ಸಿನ ಅನಿಶ್ಚಿತತೆಗಳಿಗೆ ಯಾವಾಗಲೂ ಒಳಪಟ್ಟಿರುತ್ತದೆ. ಮಥೈ ಸ್ಯಾಮ್ಯುಯೆಲ್ ವಿ. ಈಪನ್:[1] ನಲ್ಲಿ ಸುಪ್ರೀಂ ಕೋರ್ಟ್ ಸೂಚಿಸಿದಂತೆ, ಒಂದು ವಿಲ್ ಕೇವಲ ಪರೀಕ್ಷಕನ ಉದ್ದೇಶದ ಕಾನೂನು ಘೋಷಣೆಯಾಗಿದೆ ಮತ್ತು ಅದರ ಅಗತ್ಯ ಲಕ್ಷಣವೆಂದರೆ ಅದರ ಸಂಚಲನದಿಂದ ಮತ್ತು ಹಿಂತೆಗೆದುಕೊಳ್ಳುವಿಕೆಯಿಂದ ಕೂಡಿದೆ. ... ದುರದೃಷ್ಟವಶಾತ್, 'ಇತ್ಯರ್ಥ' ಎಂಬ ಪದವು ಇಂಗ್ಲಿಷ್ ಭಾಷೆ ಮತ್ತು ಕಾನೂನಿನಿಂದ ಹೊರಹೊಮ್ಮಿದೆ ಮತ್ತು ಆದ್ದರಿಂದ ಕಾನೂನು ನಿಘಂಟುಗಳು ಈ ಪದವನ್ನು ವಿವರಿಸಿದ ರೀತಿ ಕಾನೂನಿನ ಬದಲು ಭಾಷಾಶಾಸ್ತ್ರದೊಂದಿಗೆ ಹೆಚ್ಚು ಹೊಂದಿಕೊಳ್ಳುತ್ತದೆ. ಇದಕ್ಕಾಗಿಯೇ ಸುಪ್ರೀಂ ಕೋರ್ಟ್ ಗೋಲಿ ಈಶ್ವರಯ ವಿ. ಉಡುಗೊರೆ ತೆರಿಗೆ ಆಯುಕ್ತರು[2] ಪ್ರಕರಣದಲ್ಲಿ 'ಇತ್ಯರ್ಥ' ಎಂಬ ಪದವು ಕಾನೂನಿನ ಪದವಲ್ಲ, ನಿಖರವಾದ ಅರ್ಥವನ್ನು ಹೊಂದಿದೆ ಮತ್ತು ಅದರ ಅರ್ಥವನ್ನು ಅದನ್ನು ಬಳಸಿದ ಸಂದರ್ಭದಿಂದ ಸಂಗ್ರಹಿಸಬೇಕು ಎಂದಿದೆ. ........... ಹಿಂದೂ ತನ್ನ ಆಸ್ತಿಯನ್ನು ವಿಲ್ ಅಥವಾ ಇತರ ಒಡಂಬಡಿಕೆಯ ಇತ್ಯರ್ಥದಿಂದ ವಿಲೇವಾರಿ ಮಾಡುವ ಹಕ್ಕನ್ನು ಹಿಂದೂ ಉತ್ತರಾಧಿಕಾರ ಕಾಯ್ದೆಯ ಸೆಕ್ಷನ್ 30 ರ ಮೂಲಕ ಗುರುತಿಸಲಾಗಿದೆ. ಸೆಕ್ಷನ್ 30 ರಲ್ಲಿ, "ಟೆಸ್ಟಮೆಂಟರಿ ಡಿಸ್ಪೋಸಿಷನ್" ಎಂಬ ಪದವಿನ್ಯಾಸ ಬಳಸಲಾಗುತ್ತದೆ. ಸೆಕ್ಷನ್ 30 ಅನ್ನು ಹೇಳುವ ವಿಧಾನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಎರಡು ವಿಷಯಗಳನ್ನು ತೋರಿಸುತ್ತದೆ, ಅಂದರೆ, – ಎ) ಒಂದು ಟೆಸ್ಟಮೆಂಟರಿ ಇತ್ಯರ್ಥವು ವಿಲ್ ಮೂಲಕ ಅಥವಾ ಇಲ್ಲದಿದ್ದರೆ ಆಗಿರಬಹುದು; ಮತ್ತು ಬಿ) ವಿಲ್ ಅಥವಾ

[1] ಮನು / ಎಸ್.ಸಿ/ 0996/ 2012

[2] ಮನು/ ಎಸ್.ಸಿ/ 0258/ 1970

ಇತರ ಒಡಂಬಡಿಕೆಯ ಇತ್ಯರ್ಥದ ಮೂಲಕ ಮಾಡಲು ಬಯಸುವುದನ್ನು ಸೆಕ್ಷನ್ 30 ರ ಪ್ರಕಾರ "ವಿಲೇವಾರಿ" (ದಿಸ್ಪೋಸಲ್) ಎಂದು ಪರಿಗಣಿಸಲಾಗುತ್ತದೆ. ...... ಕುತೂಹಲಕಾರಿಯಾಗಿ, ಆಕ್ಸ್‌ಫರ್ಡ್ ಇಂಗ್ಲಿಷ್ ನಿಘಂಟು ಈ ಪದವನ್ನು ಕಾನೂನಿನ ಶಾಖೆಯಲ್ಲಿ ನಾಮಪದವಾಗಿ ಬಳಸಿದಾಗಲೆಲ್ಲಾ "ಆಸ್ತಿ ಅಥವಾ ಹಣವನ್ನು ಯಾರಿಗಾದರೂ ವಿತರಿಸುವುದು ಅಥವಾ ವರ್ಗಾವಣೆ ಮಾಡುವುದು" ಎಂದು ಅರ್ಥೈಸುತ್ತದೆ. ಮೆರಿಯಮ್ ವೆಬ್‌ಸ್ಟರ್ ನಿಘಂಟಿನಲ್ಲಿ ಸೂಚಿಸಿರುವಂತೆ 'ಡಿಸ್ಪೋಸಿಷನ್' ಪದದ ಮೂಲ ಮತ್ತು ವ್ಯುತ್ಪತ್ತಿ 14 ನೇ ಶತಮಾನದಲ್ಲಿ ಲ್ಯಾಟಿನ್ ಪದ 'ಡಿಸ್ಪೋಸಿಟಿಯೊ' ಮತ್ತು 'ಡಿಸ್ಪೋನೆರೆ' ಪದದಿಂದ ವಿಕಸನಗೊಂಡಿದೆ ಎಂದು ತೋರಿಸುತ್ತದೆ. ವಿಲ್ ಅನ್ನು ಕಾರ್ಯಗತಗೊಳಿಸುವ ಸಮಯದಲ್ಲಿ ಯಾವುದೇ ಇತ್ಯರ್ಥ ಅಥವಾ ವಿಲೇವಾರಿ ಅಥವಾ ಆಸ್ತಿಯ ವಿತರಣೆ ನಡೆಯುವುದಿಲ್ಲವಾದರೂ, ವಿಲೇವಾರಿ ಎಂಬ ಪದವು ಒಡಂಬಡಿಕೆಯ ಸಾಧನಗಳೊಂದಿಗೆ ಸಹ ಸಂಬಂಧಿಸಿದೆ.

ಆದರೆ ಸೆಕ್ಷನ್ 6 (1) ರ ಪ್ರೊವಿಸೊ (ಶರತ್ತು) ಕೇವಲ 'ಟೆಸ್ಟಮೆಂಟರಿ ಡಿಸ್ಪೋಸಿಷನ್' ಎಂಬ ಪದವಿನ್ಯಾಸ ಬಳಸುವುದಿಲ್ಲ. ಇದು 'ಇತ್ಯರ್ಥ' (ಡಿಸ್ಪೋಸಿಷನ್) ಪದದಿಂದ ಪ್ರಾರಂಭವಾಗುತ್ತದೆ, ನಂತರ ಅದರ ವ್ಯಾಪ್ತಿಯಲ್ಲಿ 'ಟೆಸ್ಟಮೆಂಟರಿ ಡಿಸ್ಪೋಸಿಷನ್' ಅನ್ನು ಸೇರಿಸಲು ಮುಂದುವರಿಯುತ್ತದೆ ಮತ್ತು ನಂತರ ಅದನ್ನು "ನಡೆದದ್ದು" ಎಂಬ ಪದಗಳೊಂದಿಗೆ ಅರ್ಹತೆ ಪಡೆಯುತ್ತದೆ. ಆದ್ದರಿಂದ, ಸೆಕ್ಷನ್ 6 (1) ರ ನಿಬಂಧನೆಯನ್ನು 3 ಭಾಗಗಳಾಗಿ ವಿಂಗಡಿಸಬೇಕಾಗಿದೆ ಎಂದು ನಾವು ಭಾವಿಸುತ್ತೇವೆ–

"(i) "ಇತ್ಯರ್ಥ ಅಥವಾ ಪರಭಾರೆ" (ಡಿಸ್ಪೋಸಿಷನ್ ಅಥವಾ ಅಲಿನೇಷನ್) ಎಂಬ ಪದಗಳನ್ನು ಒಳಗೊಂಡಿರುವ ಮೊದಲ ಭಾಗ

(ii) ಎರಡನೆಯ ಭಾಗವು "ಯಾವುದೇ ವಿಭಾಗ (ಪಾರ್ಟೀಷನ್) ಅಥವಾ ಒಡಂಬಡಿಕೆಯ ಇತ್ಯರ್ಥವನ್ನು (ಟೆಸ್ಟಮೆಂಟರಿ ಡಿಸ್ಪೋಸಿಷನ್) ಒಳಗೊಂಡಂತೆ" ಪದಗಳಿಂದ ಕೂಡಿದೆ ಮತ್ತು

(iii) "20–12–2004ರ ಮೊದಲು ನಡೆದ" ಪದಗಳಿಂದ ಒಳಗೊಂಡಿರುವ ಮೂರನೇ ಭಾಗ."

ಆದ್ದರಿಂದ, ಒಂದು ಪ್ರಕರಣವನ್ನು ಸೆಕ್ಷನ್ 6 (1) ರ ವ್ಯಾಪ್ತಿಗೆ ತರಬೇಕಾದರೆ, ವಿಶೇಷವಾಗಿ ವಿಲ್ಗೆ ಸಂಬಂಧಿಸಿದಂತೆ, ಎರಡು ವಿಷಯಗಳನ್ನು ಸಾಬೀತುಪಡಿಸಬೇಕು (i) ವಿಲ್ ಸತ್ವಯುತವಾಗಿ ಇತ್ತು ಮತ್ತು (ii) ವಿಲ್ ಅಡಿಯಲ್ಲಿ ಇತ್ಯರ್ಥವು ನಿರ್ದಿಷ್ಟಪಡಿಸಿದ ದಿನಾಂಕಕ್ಕಿಂತ ಮೊದಲು ನಡೆದಿತ್ತು. ವಿಲ್ ಅಡಿಯಲ್ಲಿ ಇತ್ಯರ್ಥವು ಪರೀಕ್ಷಕನು ಸತ್ತಾಗ ಮಾತ್ರ ನಡೆಯುತ್ತದೆ ಮತ್ತು ಇಲ್ಲದಿದ್ದರೆ ನಡೆಯದು. ಇದು ಟೆಸ್ಟಮೆಂಟರಿ ಇತ್ಯರ್ಥದ ಸ್ವರೂಪದಿಂದಾಗಿ ಮಾತ್ರವಲ್ಲದೆ, ವಿಲ್ ಕಾರ್ಯಗತ ದಿನಾಂಕ ಮತ್ತು ಪರೀಕ್ಷಕನ ಮರಣದ ದಿನಾಂಕದ ನಡುವಿನ ಅವಧಿಯಲ್ಲಿ, ಅನೇಕ ವಿಷಯಗಳು ಸಂಭವಿಸಬಹುದು, ಪರೀಕ್ಷಕನ ನಿಯಂತ್ರಣದ ಹೊರತಾಗಿಯೂ, ಅದು ಸಂಪೂರ್ಣ ಅಥವಾ ಭಾಗಶಃ ಉಯಿಲು ಅಮಾನ್ಯವಾಗಿಸುತ್ತದೆ. ಆದ್ದರಿಂದ, ಸೆಕ್ಷನ್ 6 (1) ರ ನಿಬಂಧನೆಯಲ್ಲಿ ಕಂಡುಬರುವ 'ಟೆಸ್ಟಮೆಂಟರಿ ಡಿಸ್ಪೋಸಿಷನ್' ಎಂಬ ಪದವಿನ್ಯಾಸ 20–12–2004 ರ ಮೊದಲು ಜಾರಿಗೆ ಬಂದ ವಿಲ್ ಅನ್ನು ಮಾತ್ರ ಅರ್ಥೈಸಿಕೊಳ್ಳಬೇಕು. "ಇದು ನಡೆದಿತ್ತು" ಎಂಬ ಪದಗಳನ್ನು "ಅದು ಜಾರಿಗೆ ಬಂದಿದೆ" ಎಂದು ಅರ್ಥೈಸಿಕೊಳ್ಳಬೇಕು.

ಸೆಕ್ಷನ್ 6 ರಲ್ಲಿಯೇ ಒಂದು ಸುಳಿವು ಲಭ್ಯವಿದೆ, ಯಾರಾದರೂ ನಮ್ಮಂತೆಯೇ ಅದೇ ತೀರ್ಮಾನಕ್ಕೆ ಬರಲು. ಇದು ಉಪ–ಕಲಂ (5) ರಲ್ಲಿದೆ ಮತ್ತು ವಿವರಣೆಯು ಅದನ್ನು ಅನುಸರಿಸುತ್ತದೆ. ಸೆಕ್ಷನ್ 6 ರ ಉಪ–ಕಲಂ (5) ಮತ್ತು ಅದರ ನಂತರದ ವಿವರಣೆಯನ್ನು ಈ ಕೆಳಗಿನಂತೆ ಓದಿ:

"(5) ಈ ಕಲಂನಲ್ಲಿ ಯಾವುದೂ, 2004 ರ ಡಿಸೆಂಬರ್ 20 ನೇ ದಿನದ ಮೊದಲು ಜಾರಿಗೆ ತರಲಾಗಿರುವ ಒಂದು ವಿಭಾಗಕ್ಕೆ ಅನ್ವಯಿಸುವುದಿಲ್ಲ ವಿವರಣೆ: ಈ ಕಲಂ ಉದ್ದೇಶಗಳಿಗಾಗಿ "ವಿಭಜನೆ" ಎಂದರೆ ನೋಂದಣಿ ಕಾಯ್ದೆ 1908 ಅಡಿಯಲ್ಲಿ ಸರಿಯಾಗಿ ನೋಂದಾಯಿಸಲಾದ ವಿಭಜನೆಯ ಪತ್ರವನ್ನು ಕಾರ್ಯಗತಗೊಳಿಸುವ ಮೂಲಕ ಮಾಡಿದ ಯಾವುದೇ ವಿಭಾಗ ಅಥವಾ ನ್ಯಾಯಾಲಯದ ತೀರ್ಪಿನಿಂದ ಪೂರ್ಣಗೊಳಿಸಲ್ಪಟ್ಟ ವಿಭಜನೆ."

ಸೆಕ್ಷನ್ 6 ರ ಉಪಕಲಂ (1) ರ ಅಡಿಯಲ್ಲಿರುವ ನಿಬಂಧನೆಯು ಉಪ–ಕಲಂ (1) ರ ಕಾರ್ಯಾಚರಣೆಯಿಂದ ಹೊರಗಿಡಲ್ಪಟ್ಟರೆ, ನಿಗದಿತ ದಿನದ ಮೊದಲು ನಡೆದ ಯಾವುದೇ ವಿಭಾಗ ಅಥವಾ ಒಡಂಬಡಿಕೆಯ ಇತ್ಯರ್ಥ ಸೇರಿದಂತೆ ಯಾವುದೇ ಅಲಿನೇಷನ್ ಅಥವಾ ಇತ್ಯರ್ಥ, ಉಪ–ಕಲಂ (5 ) ಸೆಕ್ಷನ್ 6 ರ ಕಾರ್ಯಾಚರಣೆಯಿಂದ ಸಂಪೂರ್ಣವಾಗಿ ಹೊರಗಿಡಲ್ಪಟ್ಟಿದೆ, ಇದು ನ್ಯಾಯಾಲಯದ ತೀರ್ಪಿನಿಂದ ಪರಿಣಾಮ ಬೀರುವ ನೋಂದಾಯಿತ ಪತ್ರದ ಮರುಹಂಚಿಕೆಯಿಂದ ಮಾಡಿದ ವಿಭಾಗವಾಗಿದೆ. ಉಪಕಲಂ (1) ರ ನಿಬಂಧನೆಯು ಅದರ ಉಪ–ಕಲಂ (1) ಕ್ಕೆ ಅನ್ವಯವಾಗುವುದರಲ್ಲಿ ಸೀಮಿತವಾಗಿದೆ ಎಂಬುದನ್ನು ಗಮನಿಸುವುದು ಮುಖ್ಯ. ಇದಕ್ಕೆ ವ್ಯತಿರಿಕ್ತವಾಗಿ, ಉಪ–ಕಲಂ (5) ರಲ್ಲಿರುವ ಪ್ರಿಸ್ಕ್ರಿಪ್ಷನ್ (ನಿಯಮ) ಮತ್ತು ಅದರ ಅಡಿಯಲ್ಲಿರುವ ವಿವರಣೆಯು ಕಲಂ 6 ರ ಸಂಪೂರ್ಣತೆಗೆ ಅನ್ವಯಿಸುತ್ತದೆ. ಉಪಕಲಂ (5) ಮತ್ತು ಅದರ ನಂತರದ ವಿವರಣೆಯಲ್ಲಿರುವ ಪ್ರಿಸ್ಕ್ರಿಪ್ಷನ್, ರಚಿಸಿದ ಹಕ್ಕನ್ನು ಸೋಲಿಸುವ ಉದ್ದೇಶದಿಂದ, ನಿಗದಿತ ದಿನದ ಮೊದಲು ಜಾರಿಗೆ ಬರುವ ಮೌಖಿಕ ವಿಭಜನೆಯನ್ನು ಪಾರ್ಟಿಗಳು ತಿದ್ದುಪಡಿ ಕಾಯ್ದೆಯಿಂದ ಸಮರ್ಥಿಸಲು ಕಾನೂನು ತಯಾರಕರು ಬಯಸುವುದಿಲ್ಲ ಎಂಬ ಸ್ಪಷ್ಟ ಸೂಚನೆಯನ್ನು ನೀಡುತ್ತದೆ. ಮೌಖಿಕ ವಿಭಜನೆ ಅಥವಾ ಹಿಂದಿನ

ವಿಭಾಗವನ್ನು ದಾಖಲಿಸುವ ಜ್ಞಾಪಕ ಪತ್ರವನ್ನು ಯಾವಾಗಲೂ ನ್ಯಾಯಾಲಯಗಳು ಒಪ್ಪಿಕೊಳ್ಳುತ್ತವೆ, ಪುರಾವೆಗೆ ಒಳಪಟ್ಟಿರುತ್ತವೆ. ಆದರೆ ಸೆಕ್ಷನ್ 6 ರ ವಿವರಣೆಯು, ಒಂದು ವಿಭಾಗವನ್ನು ನೋಂದಾಯಿತ ಪತ್ರದಿಂದ ಅಥವಾ ನ್ಯಾಯಾಲಯದ ತೀರ್ಪಿನಿಂದ ಪರಿಣಾಮ ಬೀರದ ಹೊರತು, ಉಪಕಲಂ (5) ಪ್ರಯೋಜನ ಲಭ್ಯವಿಲ್ಲದಿರಬಹುದು ಎಂದು ಸ್ಪಷ್ಟಪಡಿಸುತ್ತದೆ.

ಒಂದು ವಿಭಾಗದಲ್ಲಿ, ಪರಸ್ಪರ ವರ್ಗಾವಣೆಗಳು ವರ್ತಮಾನದಲ್ಲಿ ನಡೆಯುತ್ತವೆ ಎಂದು ಗಮನಸೆಳೆಯುವ ಅಗತ್ಯವಿಲ್ಲ. ಆಗಲೂ, ನೋಂದಾಯಿತ ಪತ್ರ ಅಥವಾ ನ್ಯಾಯಾಲಯದ ತೀರ್ಪಿನಿಂದ ವಿಭಜನೆಯನ್ನು ಜಾರಿಗೊಳಿಸದ ಹೊರತು ಉಪಕಲಂ (5) ನ ಪ್ರಯೋಜನವು ಲಭ್ಯವಿರುವುದಿಲ್ಲ. ಆದ್ದರಿಂದ, 2005 ರ ತಿದ್ದುಪಡಿ ಕಾಯ್ದೆ ಬಂದ ನಂತರ, ತಿದ್ದುಪಡಿಯಿಂದ ನೀಡಲ್ಪಟ್ಟ ಹಕ್ಕುಗಳನ್ನು ಸೋಲಿಸಲು ದಾಖಲೆಗಳನ್ನು ರಚಿಸಲು ಯಾರಿಗೂ ಅವಕಾಶ ನೀಡಬಾರದು ಎಂಬುದು ಕಾನೂನು ತಯಾರಕರ ಉದ್ದೇಶಕ್ಕೆ ಬಹಳ ಸ್ಪಷ್ಟವಾಗಿದೆ. ಹಿಂದಿನ ದಿನಾಂಕದ ದಾಖಲೆಗಳ ರಚನೆಯನ್ನು ತಡೆಗಟ್ಟುವ ಸಲುವಾಗಿ, ಅಂತಹ ದಾಖಲೆಗಳ ಮೇಲೆ ಅವಲಂಬನೆ ಸಹ ಅನುಮತಿಸಲಾಗುವುದಿಲ್ಲ ಎಂದು ತಿದ್ದುಪಡಿ ಖಚಿತಪಡಿಸುತ್ತದೆ. ಅಂತಹ ಸಂದರ್ಭಗಳಲ್ಲಿ, ವಿಲ್ ಅನ್ನು ಕೇವಲ ಕಾರ್ಯಗತ ಮಾಡುವುದು ಎಂದು ಅರ್ಥೈಸಲು "ಟೆಸ್ಟಮೆಂಟರಿ ಡಿಸ್ಪೋಸಿಷನ್" ಎಂಬ ಪದವಿನ್ಯಾಸವನ್ನು ತೆಗೆದುಕೊಂಡರೆ, ಸೆಕ್ಷನ್ 6 ರ ಮೂಲಕ ನೀಡಲಾಗುವ ಹಕ್ಕುಗಳನ್ನು ವಿಲ್ ಅನ್ನು ಸ್ಥಾಪಿಸುವ ಮೂಲಕ ಪಾರ್ಟಿಗಳು ಸುಲಭವಾಗಿ ಸೋಲಿಸಬಹುದು, ಯಾಕೆಂದರೆ ವಿಲ್ ಕಡ್ಡಾಯವಾಗಿ ನೋಂದಾಯಿಸುವ ಅಗತ್ಯವಿಲ್ಲ. ಆದ್ದರಿಂದ, 20-12-2004 ರಂದು ಪರೀಕ್ಷಕನು ಜೀವಂತವಾಗಿದ್ದ ಸಂದರ್ಭಗಳಲ್ಲಿ, ವಿಲ್, ಹೇಳಿದ ದಿನಾಂಕಕ್ಕಿಂತ ಮುಂಚಿತವಾಗಿ ಅವನಿಂದ

ಪ್ರಾಮಾಣಿಕವಾಗಿ ಕಾರ್ಯಗತವಾಗಿದ್ದರೂ ಸಹ, ಅದನ್ನು "ಟೆಸ್ಟಮೆಂಟರಿ ಇತ್ಯರ್ಥ" ಈ ಪ್ರಕರಣವು ನಿಬಂಧನೆಯ ಅಡಿಯಲ್ಲಿ ಬರುವಂತೆ ಮಾಡಲು ಬರುವುದಿಲ್ಲ ಮತ್ತು ಸೆಕ್ಷನ್ 6 (1) ರ ಅನ್ವಯದಿಂದ ಅದನ್ನು ಹೊರತೆಗೆಯಲಾಗುವುದು. ಬೇರೆ ರೀತಿಯಲ್ಲಿ ಹೇಳುವುದಾದರೆ, ಒಂದು ಪ್ರಕರಣವು ಸೆಕ್ಷನ್ 6 (1) ರ ಅಡಿಯಲ್ಲಿ ಬರುವುದು, 20–12–2004 ರ ಮೊದಲು ಎರಡು ವಿಷಯಗಳು ನಡೆದಿದ್ದರೆ ಮಾತ್ರ (i) ವಿಲ್ ಅನ್ನು ಕಾರ್ಯಗತಗೊಳಿಸಿರುವುದು ಮತ್ತು (ii) ಪರೀಕ್ಷಕನ ಸಾವು. ಸೆಕ್ಷನ್ 6 (1) ರ ಕಾರ್ಯಾಚರಣೆಯಿಂದ ಒಂದು ಪ್ರಕರಣವನ್ನು ತೆಗೆದುಕೊಳ್ಳಲು 20–12–2004 ರ ಮೊದಲು ವಿಲ್ನ ಕಾರ್ಯಗತ ಸಾಕಾಗುವುದಿಲ್ಲ, ಏಕೆಂದರೆ ಪರೀಕ್ಷಕನ ಜೀವಂತವಾಗಿದ್ದರೆ ವಿಲ್ ಅಡಿಯಲ್ಲಿ ಯಾವುದೇ ನಿಲುವು ನಡೆಯುವುದಿಲ್ಲ. ಸುಪ್ರೀಂ ಪ್ರಕರಣವೊಂದರಲ್ಲಿ,[1] "ಮನುಷ್ಯನ ವಿಲ್ ಎನ್ನುವುದು ಅವನ ಟೆಸ್ಟಮೆಂಟರಿ ಉದ್ದೇಶಗಳ ಒಟ್ಟು ಮೊತ್ತವಾಗಿದ್ದು ಅದು ಬರವಣಿಗೆಯಲ್ಲಿ ವ್ಯಕ್ತವಾಗುತ್ತದೆ ಮತ್ತು ಅದು ವರ್ಗಾವಣೆಯಲ್ಲ.

"ಇತ್ಯರ್ಥವು ಈಗಾಗಲೇ ನಡೆದಿದೆ" ಎಂಬ ವರ್ಗಕ್ಕೆ ಸೇರುವ ಪ್ರತಿಪಾದನೆಯ ಬಗ್ಗೆ ಇಂದು ಯಾವುದೇ ವಿವಾದಗಳಿಲ್ಲ, ಒಂದು ವಿಭಾಗವು ಅಂತಿಮ ಮತ್ತು ನಿರ್ಣಾಯಕವಾಗಬೇಕಿತ್ತು ಮತ್ತು ವಿಭಜನೆಯ ಪ್ರಾಥಮಿಕ ತೀರ್ಪು ಸಹ ಸಾಕಾಗುವುದಿಲ್ಲ. ವಿಭಜನೆಗಾಗಿ ಒಂದು ಪ್ರಾಥಮಿಕ ತೀರ್ಪು ನಿಬಂಧನೆಯ ವ್ಯಾಪ್ತಿಯಲ್ಲಿ ಸೆಕ್ಷನ್ 6 (1) ಕ್ಕೆ ಅಥವಾ ಸೆಕ್ಷನ್ 6 (5) ರ ವ್ಯಾಪ್ತಿಗೆ ತರಲು ಸಾಧ್ಯವಿಲ್ಲ, ಎಕೆಂದರೆ ಅದು ಅದು ಅಂತಿಮ ಮತ್ತು ನಿರ್ಣಾಯಕವಾಗದ ಕಾರಣ, ಹಾಗೆಯೇ ವಿಲ್ ಅನ್ನು ಕೇವಲ ಕಾರ್ಯಗತ ವಾಗಿದ್ದರೂ, ನಿಗದಿತ ದಿನದ ಮೊದಲು ಪರೀಕ್ಷಕನ ಮರಣವಿಲ್ಲದೆ, ಪ್ರಕರಣವು ಸೆಕ್ಷನ್ 6 (1) ಅಥವಾ ಸೆಕ್ಷನ್ 6 (5) ರ ನಿಬಂಧನೆಯ ವ್ಯಾಪ್ತಿಗೆ ಬರುವುದಿಲ್ಲ.

---

[1] ರತ್ತಿನಮ್ ವಿ. ಮಾರಿಯಪ್ಪನ್ – ಮನು/ಎಸ್.ಸಿ/7732/2007

ಸುಪ್ರೀಂ ಕೋರ್ಟಿನ ಸಂವಿಧಾನ ಪೀಠದಿಂದ ಈ ಬಗ್ಗೆ ಒಂದು ಮಹತ್ತರ ತೀರ್ಪು ಇದೆ, ಎಲ್ಲಿ ದಾಖಲೆಯ ಆರಂಬದ ಭಾಗದಲ್ಲಿ ಕೆಲವು ಆಸ್ತಿಯನ್ನು ಒಬ್ಬ ವ್ಯಕ್ತಿಗೆ ಸಂಪೂರ್ಣವಾಗಿ ನೀಡಲಾಗುತ್ತದೆ ಆದರೆ ನಂತರ, ಅದೇ ಆಸ್ತಿಯ ಬಗ್ಗೆ ಇತರ ನಿರ್ದೇಶನಗಳನ್ನು ನೀಡಲಾಗುತ್ತದೆ, ಅದು ಆರಂಬದ ಭಾಗದಲ್ಲಿ ನೀಡಲಾದ ಸಂಪೂರ್ಣ ಮಾಲೀಕತ್ವದೊಂದಿಗೆ ಸಂಘರ್ಷಗೊಳ್ಳುತ್ತದೆ ಹಾಗೆ ಸಂಭವಿಸಿದಲ್ಲಿ ಏನು ಮಾಡಬೇಕು? ಅಂತಹ ಸಂಘರ್ಷದ ಸಂದರ್ಭದಲ್ಲಿ ಸಂಪೂರ್ಣ ಮಾಲೀಕತ್ವದ ಪ್ರಾರಂಬಿಕ ಇತ್ಯರ್ಥವು ಮೇಲುಗೈ ಸಾಧಿಸಬೇಕು ಮತ್ತು ನಂತರದ ಸ್ವರೂಪವನ್ನು ಈಗಾಗಲೇ ನೀಡಿರುವ ಮಾಲೀಕತ್ವವನ್ನು ನಿರ್ಬಂಧಿಸುವ ವಿಫಲ ಪ್ರಯತ್ನಗಳೆಂದು ನಿರ್ಲಕ್ಷಿಸಬೇಕು.[1]

ಜಂಟಿ ಹಿಂದೂ ಕುಟುಂಬದ ಕರ್ತ ನಿಸ್ಸಂದೇಹವಾಗಿ ಕಾನೂನು ಅವಶ್ಯಕತೆಗಾಗಿ ಅಥವಾ ಎಸ್ಟೇಟ್ನ ಲಾಭಕ್ಕಾಗಿ ಮತ್ತು ಹಿಂದಿನ ಸಾಲಗಳನ್ನು ತೀರುವಳಿ ಮಾಡುವ ಸಲುವಾಗಿ, ಜಂಟಿ ಕುಟುಂಬದ ಆಸ್ತಿಯನ್ನು ಮಾರಾಟಮಾಡುವ ಅಧಿಕಾರವನ್ನು ಹೊಂದಿದ್ದರು ....... ಇದು ಜಂಟಿ– ಹಿಂದೂ ಮಿತಾಕ್ಷರ ಕುಟುಂಬದಲ್ಲಿ ಚೆನ್ನಾಗಿ ನೆಲೆಗೊಂಡಿದೆ, ಒಬ್ಬ ಮಗನು ಪೂರ್ವಜರ ಆಸ್ತಿಯಲ್ಲಿ ತಂದೆಗೆ ಸಮಾನವಾದ ಆಸಕ್ತಿಯನ್ನು ಹುಟ್ಟಿನಿಂದ ಪಡೆಯುತ್ತಾನೆ. ತಂದೆಯು ತನ್ನ ತಂದೆಯ ಸಂಬಂಧದ ಕಾರಣದಿಂದಾಗಿ ಮತ್ತು ಕುಟುಂಬದ ಮುಖ್ಯಸ್ಥನಾಗಿರುವ ಸ್ಥಾನವು ಅದರ ವ್ಯವಸ್ಥಾಪಕನಾಗಿರುತ್ತಾನೆ ಮತ್ತು ಜಂಟಿ ಕುಟುಂಬ ಆಸ್ತಿಯನ್ನು ಮಾರಾಟಮಾಡಲು ಅವನು ಅರ್ಹನಾಗಿರುತ್ತಾನೆ, ಇದರಿಂದಾಗಿ ವಯಸ್ಕರ ಮತ್ತು ಮೈನರ್ ಕೋಪಾರ್ಸನರ್ ಇಬ್ಬರ ಹಿತಾಸಕ್ತಿಗಳನ್ನು ಆಸ್ತಿಯಲ್ಲಿ ಬಂಧಿಸಲಾಗುವುದು. ಆದರೆ ಅನ್ಯೀಕರಣವನ್ನು ಕಾನೂನು

---

[1] ರಾಮಕಿಶೋರಿಲಾಲ್ ವಿ. ಕಮಲ್ ನಾರಾಯಣ್ – ಮನು/ಎಸ್.ಸಿ/0022/1962

ಅವಶ್ಯಕತೆಗಾಗಿ ಅಥವಾ ಎಸ್ಟೇಟ್ನ ಲಾಭಕ್ಕಾಗಿ ಅಥವಾ ಇ–ಹಿಂದಿನ ಸಾಲವನ್ನು ಪೂರೈಸಲು ತಯಾರಿಸಲಾಗಿದ್ದರೆ ಮಾತ್ರ ....... ತಂದೆ–ಕರ್ತ ಅವರು ಪರಭಾರೆ ಮೇಲಿನ ಅಧಿಕಾರಗಳಿಗೆ ಹೆಚ್ಚುವರಿಯಾಗಿ ಅನೈತಿಕತೆಗೆ ಕಳಂಕವಿಲ್ಲದ ತನ್ನ ಹಿಂದಿನ ಸಾಲವನ್ನು ಹೊರಹಾಕಲು ಪೂರ್ವಜರ ಆಸ್ತಿಯನ್ನು ಮಾರಾಟ ಮಾಡಲು ಅಥವಾ ಅಡಮಾನ ಇಡಲು ವಿಶೇಷ ಅಧಿಕಾರವನ್ನು ಹೊಂದಿದ್ದಾರೆ.[1]

1899 ರ ಭಾರತೀಯ ಸ್ಟಾಂಪ್ ಕಾಯ್ದೆಯ ಸೆಕ್ಷನ್ 2 (24) ರಲ್ಲಿನ "ಸೇಟೆಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ಯ ವ್ಯಾಖ್ಯಾನದಿಂದ ಸ್ಪಷ್ಟವಾಗಿದೆ, ಯಾವುದೇ ಧಾರ್ಮಿಕ ಅಥವಾ ದತ್ತಿ ಉದ್ದೇಶಕ್ಕಾಗಿ ಮಾಡಿದ ಚರ ಅಥವಾ ಸ್ಥಿರವಾದ ಆಸ್ತಿಯ ಬರವಣಿಗೆರಹಿತ ಯಾವುದೇ ಇತ್ಯರ್ಥವು ಸೇಟೆಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ಆಗಿದೆ. ಬರವಣಿಗೆಯಲ್ಲಿ ಅಂತಹ ಯಾವುದೇ ನಿಲುವು ಇಲ್ಲದಿದ್ದರೂ ಸಹ, ನಂಬಿಕೆಯ ಘೋಷಣೆಯ ಮೂಲಕ ಅಥವಾ ಇಲ್ಲದಿದ್ದರೆ ಯಾವುದೇ ದಾಖಲೆಯಲ್ಲಿ ನಮೂದಿಸುವ, ಅಂತಹ ಯಾವುದೇ ಇತ್ಯರ್ಥದ ನಿಯಮಗಳು ಸಹ ಸೇಟೆಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ಆಗುತ್ತದೆ ಎಂದು ವ್ಯಾಖ್ಯಾನವು ಸ್ಪಷ್ಟಪಡಿಸುತ್ತದೆ. ಯಾವುದೇ ಧಾರ್ಮಿಕ ಅಥವಾ ದತ್ತಿ ಉದ್ದೇಶಕ್ಕಾಗಿ ಆಸ್ತಿಯನ್ನು ಬರವಣಿಗೆ ಇಲ್ಲದ ವಿಲೇವಾರಿ ಮಾಡುವ ಸಾಧನಗಳು ಮಾತ್ರವಲ್ಲ, ಆದರೆ ಅಂತಹ ನಿಲುವಿನ ನಿಯಮಗಳನ್ನು ದಾಖಲಿಸುವ ನಂಬಿಕೆಯ ಘೋಷಣೆಗಳು ಸೇಟೆಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ಆಗಿವೆ ಎಂಬುದು ಸ್ಪಷ್ಟವಾಗಿದೆ. ..... ಕೇವಲ ಒಂದು ದಾಖಲೆಯು ಟ್ರಸ್ಟ್ ಡೀಡ್‌ನ ವ್ಯಾಖ್ಯಾನಕ್ಕೆ ಉತ್ತರಿಸುವುದರಿಂದ ಅದು ಸ್ಟಾಂಪ್ ಡ್ಯೂಟಿಯ ಉದ್ದೇಶಕ್ಕಾಗಿ, ಅದು ಸೇಟೆಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ವ್ಯಾಖ್ಯಾನಕ್ಕೂ ಉತ್ತರಿಸಿದರೆ ಕೂಡ ಇತ್ಯರ್ಥ ಪತ್ರವಾಗಿ ನಿಲ್ಲದು. ಎಲ್ಲಾ

---

[1] ಸುಶೀಲ್ ಕುಮಾರ್ ವಿ. ರಾಮ್ ಪ್ರಕಾಶ್ – ಎ.ಐ.ಆರ್ 1988 ಎಸ್.ಸಿ 576

ಟ್ರಸ್ಟ್‌ಗಳು ಸೇಟಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ಗಳಲ್ಲ, ಮತ್ತು ಎಲ್ಲಾ ಸೇಟಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ಟ್ರಸ್ಟ್‌ಗಳಲ್ಲ ಎಂಬುದು ಉತ್ತಮ ಇತ್ಯರ್ಥವಾಗಿದೆ, ಆದರೆ ನಂಬಿಕೆಯ (ಟ್ರಸ್ಟ್) ಪತ್ರವು ಸೇಟಲ್ಮೆಂಟ್" (ಇತ್ಯರ್ಥ/ವ್ಯವಸ್ಥಾಪನೆ) ಪತ್ರವೂ ಆಗಿರಬಹುದು.[1]

ಖಾಸಗಿ ದೇವಾಲಯ ಮತ್ತು / ಅಥವಾ ಶೆಬೈತಶಿಪ್ (ದೇವರ ಸೇವೆ) ಅನ್ನು ನಿರ್ವಹಿಸುವ ಹಕ್ಕು ಬರವಣಿಗೆಯ ಪತ್ರದ ಇತ್ಯರ್ಥದ ವಿಷಯವಾಗಬಹುದೇ? – ವಿಲ್ ಟೆಸ್ಟಮೆಂಟರಿ ಡಾಕ್ಯುಮೆಂಟ್ (ಬರವಣಿಗೆಯ ಪತ್ರ) ಅನ್ನು ಸೂಚಿಸುತ್ತದೆ – ಇದರ ಅರ್ಥ ಅವನ ಮರಣದ ನಂತರ ಜಾರಿಗೆ ತರಲು ಅಪೇಕ್ಷಿಸಿದ ಅವನ ಆಸ್ತಿಗೆ ಸಂಬಂಧಿಸಿದಂತೆ ಪರೀಕ್ಷಕನ ಕಾನೂನು ಘೋಷಣೆ – ವಿಲ್ ವರ್ಗಾವಣೆಯಾಗುವುದಿಲ್ಲ ಆದರೆ ಅಧಿಕಾರ ಹಂಚಿಕೆ – ವರ್ಗಾವಣೆಯಾಗುವುದಿಲ್ಲ, ಸೆಕ್ಷನ್ 6 (ಡಿ ) ಅನ್ವಯಿಸುವುದಿಲ್ಲ. ಹೈಕೋರ್ಟ್ ವಿಲ್ ಮಾನ್ಯವಾಗಿದೆ ಎಂದು ಸರಿಯಾಗಿ ಕಂಡೂ ಹಿಡಿದಿದೆ. ಸ್ವಾಧೀನಪಡಿಸಿಕೊಳ್ಳುವಲ್ಲಿ ಸೂಕ್ತ ಆದೇಶವನ್ನು ರವಾನಿಸಲು ವಿಚಾರಣಾ ನ್ಯಾಯಾಧೀಶರು ಆದೇಶಿಸಬೇಕಿದೆ. ......... ಒಬ್ಬ ಪರೀಕ್ಷಕನು ತನ್ನ ಇಚ್ಛೆಯಂತೆ ತನ್ನ ಆಸ್ತಿಯ ಯಾವುದೇ ಇತ್ಯರ್ಥವನ್ನು ಕಾನೂನುಗಳಿಗೆ ವಿರೋಧವಾಗಬಾರದು ಅಥವಾ ರಾಜ್ಯದ ನೀತಿಗೆ ವಿರುದ್ಧವಾಗಿರಬಾರದು ಎಂಬ ಷರತ್ತಿಗೆ ಒಳಪಡಿಸಬಹುದು. ಮನುಷ್ಯನ ಇಚ್ಛಾಶಕ್ತಿಯು ಬರವಣಿಗೆಯಲ್ಲಿ ಸ್ಪಷ್ಟವಾಗಿ ಗೋಚರಿಸುವವರೆಗೂ ಅವರ ಒಡಂಬಡಿಕೆಯ ಉದ್ದೇಶಗಳ ಒಟ್ಟು ಮೊತ್ತವಾಗಿದೆ. ಇದು ವರ್ಗಾವಣೆಯಲ್ಲ ಆದರೆ ಅಧಿಕಾರ ಹಂಚಿಕೆಯ ವಿಧಾನವಾಗಿದೆ. ......... ದೇವಾಲಯವನ್ನು ನಿರ್ವಹಿಸುವ ಹಕ್ಕು ಬರವಣಿಗೆಯ ಉತ್ತರಾಧಿಕಾರದ ವಿಷಯವಾಗಿದೆ.[2]

---

[1] ಮಾತೂರ್ ವಿ. ಬೋರ್ಡ್ ಆಫ್ ರೆವಿನ್ಯೂ – ಮನು/ಎಸ್.ಸಿ/0235/2009

[2] ರತ್ತಿನಮ್ ವಿ. ಮಾರಿಯಪ್ಪನ್ – ಮನು/ಎಸ್.ಸಿ/7732/2007

ವಿಧವೆಯಾಗಿ ತನ್ನ ಸಾಮರ್ಥ್ಯದಲ್ಲಿ ವಿಧವೆಯೊಬ್ಬರಿಗೆ ನೀಡಲಾದ ವಿಶೇಷ ಕುಟುಂಬ ಪಿಂಚಣಿ ಎಂದಿಗೂ ಸತ್ತವರ ಎಸ್ಟೇಟ್ನ ಭಾಗವಾಗಲು ಸಾಧ್ಯವಿಲ್ಲ, ಅದನ್ನು ಟೆಸ್ಟಮೆಂಟರಿ ವಿಲೇವಾರಿ ಮಾಡಲಾಗದು.[1] ಅಧಿಕಾರಿಯ ಮರಣದ ನಂತರ ಆತನ ವಿಧವೆಗೆ ವಿಶೇಷ ಕುಟುಂಬ ಪಿಂಚಣಿ ಪಾವತಿಸಲಾಗುವುದು. ಇದು ಅವನ ಜೀವಿತಾವಧಿಯಲ್ಲಿ ಪಾವತಿಸಲಾಗುವುದಿಲ್ಲ. ಮರಣ ಹೊಂದಿದವನ ಜೀವಿತಾವಧಿಯಲ್ಲಿ ಪಾವತಿಸಲಾಗದಿರುವಿಕೆಯು ಅವನ ಇತ್ಯರ್ಥದ ಅಧಿಕಾರವನ್ನು ಹೊಂದಿಲ್ಲ, ಅದು ಅವನ ಎಸ್ಟೇಟ್ನ ಭಾಗವಾಗಲು ಸಾಧ್ಯವಿಲ್ಲ. ಅವರ ಸಾವಿನ ಘಟನೆಯೇ ವಿಶೇಷ ಕುಟುಂಬ ಪಿಂಚಣಿ ಪಡೆಯಲು ಅರ್ಹತೆಯನ್ನು ಒದಗಿಸುತ್ತದೆ. ಅಂತಹ ಅರ್ಹತಾ ಘಟನೆಯು ಸತ್ತವರ ಸಾವಿನ ಮೇಲೆ ಮಾತ್ರ ಸಂಭವಿಸಬಹುದು ಮತ್ತು ಸತ್ತವರಿಗೆ ಸಂಬಂಧಿಸಿದ್ದರೂ ಮರಣಿಸಿದವರಲ್ಲದೆ ಇನ್ನೊಬ್ಬರಿಗೆ ಕೆಲವು ವಿತ್ತೀಯ ಲಾಭವನ್ನು ನೀಡುತ್ತದೆ, ಅದನ್ನು ಸತ್ತವರ ಎಸ್ಟೇಟ್ನ ಒಂದು ಭಾಗವಾಗಿ ರೂಪಿಸಲು ಸಾಧ್ಯವಿಲ್ಲ, ಅದನ್ನು ಅವರು ಸಾಕ್ಷ್ಯದ ಇತ್ಯರ್ಥದಿಂದ ವಿಲೇವಾರಿ ಮಾಡಲಾಗದು.

ಛತ್ತೀಸ್ಗಢ್ ಹೈಕೋರ್ಟಿನ ಮುಂದಿನ ಪ್ರಕರಣವೊಂದರಲ್ಲಿ ಹಲವಾರು ಕೇಸುಗಳನ್ನು ಉಲ್ಲೇಕಿಸಿ ಮಾನ್ಯ ನ್ಯಾಯಾಲಯ ಹೀಗೆ ಹೇಳಿದೆ,[2] ಮೇಲೆ ತಿಳಿಸಿದ ತೀರ್ಪುಗಳಲ್ಲಿ ತಿಳಿಸಲಾದ ಕಾನೂನಿನ ತತ್ವಗಳ ಆಧಾರದ ಮೇಲೆ, ಅವರ ಸಾಕ್ಷ್ಯದ ಇತ್ಯರ್ಥಕ್ಕೆ ವಿರುದ್ಧವಾಗಿ ನಿವೃತ್ತಿ ಪ್ರಯೋಜನಗಳಿಗೆ ಸಂಬಂಧಿಸಿದ ಕಾನೂನಿನ ಈ ಕೆಳಗಿನ ಮಾರ್ಗದರ್ಶಿ ಸೂತ್ರಗಳು ಹೊರಹೊಮ್ಮುತ್ತವೆ:–

---

[1] ಜೋದ್ ಸಿಂಗ್ ವಿ. ಯು.ಓ.ಐ. – ಮನು/ಎಸ್.ಸಿ/0426/1980

[2] ಸಮುಂಡಾ ಬಾಯ್ ವಿ. ಜನರಲ್ ಪಬ್ಲಿಕ್ – ಮನು/ ಸಿ.ಜಿ./ 0222/ 2019

1. ಉದ್ಯೋಗಿಗೆ ತನ್ನ ಜೀವಿತಾವಧಿಯಲ್ಲಿ ಪಾವತಿಸಲಾಗದ ಯಾವುದಕ್ಕಾದರೂ ಸಂಬಂಧಿಸಿದಂತೆ ಸಾಕ್ಷ್ಯದ ಇತ್ಯರ್ಥದ ಅಧಿಕಾರವಿಲ್ಲ.

2. ಅರ್ಹತಾ ಘಟನೆ / ಪ್ರಯೋಜನವು ಮರಣಹೊಂದಿದವನು ಸೇವೆಯಲ್ಲಿದ್ದಾಗ ಅವನ ಸಾವಿನ ಮೇಲೆ ಮಾತ್ರ ಸಂಭವಿಸಿದಲ್ಲಿ ಮತ್ತು ಈ ಕಾರಣದಿಂದಾಗಿ, ಕೆಲವು ವಿತ್ತೀಯ ಪ್ರಯೋಜನಗಳು ಸೇರಿಕೊಂಡರೆ, ಅದು ಸತ್ತವರ ಎಸ್ಟೇಟ್ನ ಭಾಗವಾಗುವುದಿಲ್ಲ ಮತ್ತು ಅದನ್ನು ಸಾಕ್ಷ್ಯದ ಇತ್ಯರ್ಥ ಮೂಲಕ ವಿಲೇವಾರಿ ಮಾಡಲಾಗುವುದಿಲ್ಲ, ಏಕೆಂದರೆ ಘಟನೆಯ ಅನಿಶ್ಚಿತತೆಯ ಒಂದು ಅಂಶವಿದೆ.

3. ಯೋಜನೆ ಮತ್ತು / ಅಥವಾ ಸೇವಾ ನಿಯಮಗಳು ಯೋಜನೆಯಿಂದ ಪ್ರಯೋಜನಗಳನ್ನು ಪಡೆಯಲು ಅರ್ಹರಾಗಿರುವ ಕೆಲವು ವ್ಯಕ್ತಿಗಳನ್ನು ನೇಮಿಸಿದರೆ, ಆ ನಿಯೋಜಿತ ವ್ಯಕ್ತಿಗಳನ್ನು ಹೊರತುಪಡಿಸಿ ಬೇರೆ ಯಾವುದೇ ವ್ಯಕ್ತಿಗೆ ಈ ಪ್ರಯೋಜನಗಳಿಗೆ ಅರ್ಹತೆ ಇರುವುದಿಲ್ಲ.

4. ಉದ್ಯೋಗಿಯು ಪ್ರಯೋಜನಕ್ಕೆ ಯಾವುದೇ ಕೊಡುಗೆ ನೀಡದಿದ್ದರೆ, ಅದನ್ನು ಟೆಸ್ಟಮೆಂಟರಿ ಇತ್ಯರ್ಥದಿಂದ ವಿಲೇವಾರಿ ಮಾಡಲು ಅವನಿಗೆ ಯಾವುದೇ ನಿಯಂತ್ರಣವಿಲ್ಲ.

5. ಮೃತ ನೌಕರನ ಜೀವಿತಾವಧಿಯಲ್ಲಿ ಯಾವುದೇ ವ್ಯಕ್ತಿಯ ನಾಮನಿರ್ದೇಶನಕ್ಕಾಗಿ ಯೋಜನೆ / ನಿಯಮಗಳು ಒದಗಿಸದಿದ್ದರೆ, ಅವನಿಗೆ ಅದಕ್ಕೆ ಯಾವುದೇ ಮಾಲೀಕತ್ವ ಇಲ್ಲ ಮತ್ತು ಅದನ್ನು ಸಾಕ್ಷ್ಯದ ಇತ್ಯರ್ಥದಿಂದ ವಿಲೇವಾರಿ ಮಾಡಲಾಗುವುದಿಲ್ಲ.

# ಅಧ್ಯಾಯ–7 (ಮಹಿಳಾ ಹಕ್ಕು)

## ಮೈಸೂರು ಮಹಿಳಾ ಆಸ್ತಿ ಹಕ್ಕು ಕಾಯ್ದೆ 1933

1933 ರ ಮೈಸೂರು ಹಿಂದು ವುಮನ್ ರೈಟ್ಸ್ ಟು ಪ್ರಾಪರ್ಟಿ ಆಕ್ಟ್ –ಇದು ಮೈಸೂರು ಪ್ರಾಂತ್ಯಕ್ಕೆ ಅನ್ವಯಿಸುವ ಕಾನೂನು. ಮದ್ರಾಸ್ ರಾಜ್ಯದಲ್ಲಿ ವಾಸವಿದ್ದ ಹಿಂದುಗಳಿಗೆ ಮದ್ರಾಸ್ ಮಿತಾಕ್ಷರ ಶಾಲೆಯ ಕಾನೂನು ಜಾರಿಯಲ್ಲಿ ಇತ್ತು. ಮೈಸೂರು ಪ್ರಾಂತ್ಯದಲ್ಲಿ ಇದ್ದ ಮಿತಾಕ್ಷರ ಹಿಂದುಗಳಿಗೆ ಅನ್ವಯವಾಗುವ ಕಾನೂನಿನಲ್ಲಿ ವ್ಯತ್ಯಾಸವಿತ್ತು. ಹೇಗೆಂದರೆ ಬ್ರಿಟಿಷ್ ಭಾರತದಲ್ಲಿ ಜಾರಿಯಿದ್ದಂತೆ ಮಗನ ಧಾರ್ಮಿಕ ಕರ್ತವ್ಯವಾಗಿ (ಪೀಯಸ್ ಆಬ್ಲಿಗೇಷನ್) ತಂದೆ ಬದುಕಿದ್ದಂತೆ ಮಗ ಅವರ ಸಾಲ ತೀರಿಸಬೇಕಿತ್ತು. ಆದರೆ ಮೈಸೂರು ಪ್ರಾಂತ್ಯದಲ್ಲಿ ಅಂತಹ ಧಾರ್ಮಿಕ ಕರ್ತವ್ಯ ತಂದೆ ಸತ್ತ ನಂತರ ಪ್ರಾರಂಭವಾಗುತ್ತಿತ್ತು. ಆದರೆ ಸುಪ್ರೀಮ್ ಕೋರ್ಟಿನ ಮುಂದೆ ಬಂದ ಪನ್ನಾಲಾಲ್ ವಿರುದ್ದ ನಾರೈಣಿ ಎ.ಐ.ಆರ್ 1952 ಎಸ್.ಸಿ 170 ಕೇಸಿನ ತೀರ್ಪನ್ನು ಅನುಸರಿಸಿ ಮೈಸೂರು ಹೈಕೋರ್ಟಿನ ಹುಚ್ಚ ತಿಮ್ಮೇಗೌಡ ವಿರುದ್ದ ದ್ಯಾವಮ್ಮ ಎಐ.ಆರ್ 1954 ಮೈಸೂರು 93 ಇದರಲ್ಲಿ ಮಗನ ಧಾರ್ಮಿಕ ಕರ್ತವ್ಯವಾಗಿ (ಪೀಯಸ್ ಆಬ್ಲಿಗೇಷನ್) ತಂದೆ ಬದುಕಿರಲಿ ಸತ್ತಿರಲಿ ಮಗ ಅವರ ಸಾಲ ತೀರಿಸಬೇಕಿರುತ್ತದೆ ಎಂದು ಜಾರಿ ಮಾಡಲಾಯಿತು.

ಹಿಂದು ಕಾನೂನಿನಲ್ಲಿ ಕೋಪಾರ್ಸನರಿ ಸ್ವತ್ತು / ಅವಿಭಕ್ತ ಕುಟುಂಬದ ಸ್ವತ್ತು ಒಬ್ಬ ವ್ಯಕ್ತಿಯ ಸ್ವಂತ ಸ್ವತ್ತಾಗುವ ಪ್ರಕ್ರಿಯೆ ಅಲ್ಲಿ ಎರಡು ಸಂಧರ್ಬಗಳಲ್ಲಿ ಆಗುತ್ತಿತ್ತು. ಒಂದು ಸಂಧರ್ಬ ಒಬ್ಬ ವ್ಯಕ್ತಿ ತನ್ನ ಇತರೆ ಕೋಪಾರ್ಸನರ್ಸ್ ಜೊತೆಯಲ್ಲಿ ವಿಭಾಗ ಮಾಡಿಕೊಂಡಾಗ ಅಥವ ಒಬ್ಬನೇ ಕೋಪಾರ್ಸನರ್ ಆಗಿ ಉಳಿದಾಗ. ಇಲ್ಲಿ ಅವಿಭಕ್ತ ಕುಟುಂಬದಲ್ಲಿನ ಸದಸ್ಯರಾದ ತಾಯಿ ವಿಧವಾ ಸಹೋದರಿಯರು, ವಿಧವಾ ಪುತ್ರಿಯರು, ಅವಿವಾಹಿತ ಸಹೋದರಿಯರು/ ಪುತ್ರಿಯರು ಆ ಸಂಧರ್ಬದಲ್ಲಿ

ಅಸ್ಥಿರತೆಯನ್ನು ಕಾಣುತ್ತಿದ್ದರು ಮತ್ತು ಆ ಒಬ್ಬನ ಹಂಗಿನಲ್ಲಿ ಮುಂದುವರಿಯುವ ಪರಿಸ್ಥಿತಿ ನಿರ್ಮಾಣವಾಗುತ್ತಿತ್ತು. ಇದನ್ನು ಕೊನೆಗಾಣಿಸಲೆಂದೇ ಹಿಂದು ಮಹಿಳಾ ಆಸ್ತಿ ಹಕ್ಕು ಕಾಯ್ದೆ 1933 ಜಾರಿಗೆ ತರಲಾಗಿತ್ತು. ಇದರಲ್ಲಿ ಸದರಿ ಮಹಿಳೆಯರಿಗೂ ವಿಭಾಗ ಮಾಡುವಾಗ್ಗೆ ಆಸ್ತಿಯಲ್ಲಿ ಇಂತಿಷ್ಠು ಬಾಗಾಂಶ ಕೊಡಬೇಕೆಂದು ನಿರ್ದೇಶನ ವಿತ್ತು.

ಈ ಕಾಯ್ದೆ ಜಾರಿಯಾಗುವುದಕ್ಕೆ (01–01–1934) ಮುಂಚೆ ಕೆಲವು ಹಿಂದು ಮಹಿಳೆಯರಿಗೆ ಪೋಷಣಾಂಶದ ಹಕ್ಕನ್ನು ನೀಡಲಾಗಿತ್ತಾದರೂ ಆಸ್ತಿಯಲ್ಲಿ ಇಂತಿಷ್ಟು ಹಕ್ಕು ಎಂದು ಮೊದಲ ಬಾರಿಗೆ ಜಾರಿಯಾದದ್ದು ಈ ಕಾಯ್ದೆ ಅಡಿಯಲ್ಲಿ. ಈ ಕಾಯ್ದೆ ಯಲ್ಲಿನ ಅಂಶಗಳು ಯಾವುದು 1956 ರ ಹಿಂದು ಉತ್ತರಾಧಿಕಾರತ್ವ ಕಾಯ್ದೆಗೆ ವಿರುದ್ಧವಾಗಿಲ್ಲವೋ ಅವು ಈಗಲೂ ಜಾರಿಯಲ್ಲಿ ಇರುತ್ತದೆ. ಈ ಕಾಯ್ದೆ ಅನ್ವಯ ಹಿಂದು ವಿಧವಾ ಹೆಂಡತಿಗೆ ಮತ್ತು ವಿಧವಾ ಸೊಸೆಗೆ ಆಸ್ತಿಯಲ್ಲಿ ಹಕ್ಕು ಕಲ್ಪಿಸಲಾಗುತ್ತೆ. ಹಿಂದು ಅವಿವಾಹಿತ ಹೆಣ್ಣು ಮಗಳಿಗೆ ಮತ್ತು ಅವಿವಾಹಿತ ಸಹೋದರಿಗೆ ಆಸ್ತಿಯಲ್ಲಿ ಹಕ್ಕು ಕಲ್ಪಿಸಲಾಗುತ್ತೆ. ಈ ಹಕ್ಕು ಮಿತಿಯಲ್ಲಿ ಇಡಲಾಗಿರುತ್ತೆ. 1956 ರ ನಂತರ ಈ ಮಿತಿಯಲ್ಲಿನ ಹಕ್ಕು ಪರಿಪೂರ್ಣ ಹಕ್ಕಾಗಿ ಮಾರ್ಪಾಡಾಗುತ್ತದೆ. ಈ 1933 ರ ಕಾಯ್ದೆ ಪ್ರಕಾರ ಕಡೆಯದಾಗಿ ಒಬ್ಬನೇ ಕೋಪಾರ್ಸನರ್ ಗೆ ಅವಿಭಕ್ತ ಕುಟುಂಬದ ಆಸ್ತಿಯು ಬದುಕುಳಿದವನಾಗಿ ಪಡೆದಿದ್ದರೆ, ಆತನ ಮರಣಾನಂತರ ಅತನ ತಾಯಿಗೆ, ವಿಧವಾ ಹೆಂಡತಿಗೆ, ಸಹೋದರರ ವಿದವಾ ಹೆಂಡತಿಯರಿಗೆ, ಅವಿವಾಹಿತ ಮಗಳಿಗೆ, ಅವಿವಾಹಿತ ಸಹೋದರಿಗೆ, ಆಸ್ತಿಯಲ್ಲಿ ಹಂಚಿಕೆ ಆಗಬೇಕಿರುತ್ತೆ ಎಂಬುದು ಅಂದಿನ ಕಾನೂನು. ಈಗಲೂ 1956 ಕ್ಕೆ ಹಿಂದೆ/ಮುಂದೆ ವಿಭಾಕ್ಕಾಗಿ ಹಕ್ಕುಗಳು ತೆರೆದುಕೊಂಡಿದ್ದರೆ ಅಂತಹ ಸನ್ನಿವೇಶಗಳಲ್ಲಿ 1933 ರ ಕಾನೂನು ಅಂಶಗಳನ್ನು ಅಳವಡಿಸಿ ವಿಭಾಗ ಮಾಡಲಾಗುತ್ತದೆ.

ಈ ಕಾಯ್ದೆಯು ಮಿತಾಕ್ಷರ ಶಾಲೆಯ ಹಿಂದುಗಳಲ್ಲಿ ಇದ್ದ ವೈಯುಕ್ತಿಕ ಕಾನೂನು ಬದಲಾವಣೆಯನ್ನು ಮೈಸೂರು ಪ್ರಾಂತ್ಯದಲ್ಲಿ ತಂದಿತ್ತು. ಒಂದನೇ ಭಾಗವು ಉತ್ತರಾಧಿಕಾರದ ಬಗ್ಗೆ ಇದ್ದರೆ ಎರಡನೇ ಭಾಗವು ಪ್ರತ್ಯೇಕ ಆಸ್ತಿ, ವಿಭಾಗ ಮತ್ತು ದತ್ತಕದ ಬಗ್ಗೆ, ಮೂರನೇ ಭಾಗವು ಮಹಿಳೆಯ ಪೂರ್ಣತೆಯ ಆಸ್ತಿ (ಎಸ್ಟೇಟ್) ಬಗ್ಗೆ, ನಾಲ್ಕನೆಯ ಭಾಗ ಮಹಿಳೆಯ ಸೀಮಿತಿ ಆಸ್ತಿ (ಎಸ್ಟೇಟ್) ಬಗ್ಗೆ, ಐದನೆಯದ್ದು ಪೋಷಣಾಂಶದ ಬಗ್ಗೆ, ಹೀಗೆ ಹಿಂದುಗಳ ವೈಯುಕ್ತಿಕ ಕಾನೂನನ್ನು ತಿದ್ದುಪಡಿ ಮಾಡಿ ಜಾರಿ ಮಾಡಿದ್ದಾಗಿತ್ತು.

ಹಿಂದು ಕಾನೂನಿನಲ್ಲಿ 1956 ಕ್ಕೆ ಮುಂಚೆ ಮಹಿಳೆಗೆ ಇದ್ದ ಪೋಷಣಾಂಶದ ಹಕ್ಕುಗಳು[1]

1. ಒಬ್ಬ ಹಿಂದು ಮಹಿಳೆಯ ನಿರ್ವಹಣೆಯ/ಪೋಷಣಾಂಶದ ಹಕ್ಕು ಪತಿಗೆ ಸಂಬಂಧಿಸಿದಂತೆ ಅದು ವೈಯಕ್ತಿಕ ಬಾಧ್ಯತೆಯಾಗಿರುತ್ತದೆ, ಮತ್ತು ಅತನಿಗೆ ಯಾವುದೇ ಆಸ್ತಿ ಇಲ್ಲದಿದ್ದರೂ ಸಹ ಅವಳನ್ನು ಪೋಷಿಸುವುದು ಅವರ ಕರ್ತವ್ಯವಾಗಿದೆ. ಗಂಡನು ಆಸ್ತಿಯನ್ನು ಹೊಂದಿದ್ದರೆ, ನಂತರ ವಿಧವೆ ಪೋಷಣೆಗೆ ಅವರ ಆಸ್ತಿಯ ಮೇಲೆ ನೀತಿಸಮ್ಮತ ಹೊಣೆಯಾಗಿರುತ್ತದೆ, ಮತ್ತು ಆಸ್ತಿಯನ್ನು ಪಡೆಯುವ ಯಾವುದೇ ವ್ಯಕ್ತಿಯು ವಿಧವೆಯನ್ನು ಪೋಷಿಸಲು ಕಾನೂನು ಬಾಧ್ಯತೆ ಹೊಂದಿರುತ್ತಾನೆ;

2. ಪೋಷಣೆಯ ವಿಧವೆ ಹಕ್ಕನ್ನು ಆಸ್ತಿಯ ಹಕ್ಕಲ್ಲ ಆದರೆ ಇದು ನಿಸ್ಸಂದೇಹವಾಗಿ ಆಸ್ತಿಯಲ್ಲಿ ಮೊದಲೇ ಅಸ್ತಿತ್ವದಲ್ಲಿರುವ ಹಕ್ಕಿದೆ, ಅಂದರೆ, ಇದು ಜಸ್ ಮತ್ತು ರೆಮ್ ಆಗುತ್ತದೆ (ಜಸ್ ಎಂದರೆ ಹಕ್ಕು, ಅಧಿಕಾರ – ರೆಮ್ ಅಂದರೆ ಆಸ್ತಿಯಲ್ಲಿ ಮಾಲೀಕನನ್ನು ಪರಿಗಣಿಸದೆ ನಿರ್ದಾರಿಸುವ ಹಕ್ಕು) ಜಸ್ ಇನ್ ರೆಮ್ ಅಲ್ಲ (ಜೆಸ್ ಇನ್ ರೆಮ್ ಅಂದರೆ ಹಕ್ಕನ್ನು

[1] ವಡ್ಡೆಬೋಯಿನ ತುಳಸಮ್ಮ ವಿ. ವಡ್ಡೆಬೋಯಿನ ಶೇಷ ರೆಡ್ಡಿ – ಎ.ಐ.ಆರ್ 1977 ಎಸ್.ಸಿ 1944

ಪ್ರಪಂಚದ ಯಾರ ಮೇಲಾದರೂ ಜಾರಿ ಮಾಡುವುದು) ಮತ್ತು ಅದನ್ನು ವಿಧವೆಯು ಜಾರಿಗೊಳಿಸಲು ಆಸ್ತಿಯ ಮೇಲೆ ಹೊಣೆ ವಿಧಿಸಲು ಒಪ್ಪಂದದ ಮೂಲಕ ಅಥವಾ ಸಿವಿಲ್ ಕೋರ್ಟಿನಿಂದ ತೀರ್ಪು ಪಡೆಯುವ ಮೂಲಕ ಆಸ್ತಿಯ ಮೇಲೆ ಪೋಷಣೆಯನ್ನು ವಿಧಿಸಬಹುದು;

3. ಪೋಷಣಾಂಶದ ಹಕ್ಕು ಆ ಕ್ಷಣದ ವಿಷಯವಾಗಿದೆ ಮತ್ತು ಅಂತಹ ಪ್ರಾಮುಖ್ಯತೆಯನ್ನು ಹೊಂದಿದೆ, ಜಂಟಿ ಆಸ್ತಿ ಮಾರಲಾಗಿದ್ದರೆ ಸಹ ಮತ್ತು ಖರೀದಿದಾರನು ಪೋಷಣೆಯ ವಿಧವೆಯ ಹಕ್ಕನ್ನು ಗಮನಿಸಿದ್ದರೆ, ಖರೀದಿದಾರನು ಅವಳ ಪೋಷಣೆಗಾಗಿ ಕಾನೂನುಬದ್ಧವಾಗಿ ಭಾದಿತವಾಗಿರುತ್ತಾರೆ;

4. 1937 ರ ಕಾಯಿದೆಯನ್ನು ಅಥವಾ 1946 ರ ಕಾಯಿದೆಯನ್ನು ಅಂಗೀಕರಿಸುವ ಮುಂಚೆಯೇ ಹಿಂದೂ ಕಾನೂನಿನಲ್ಲಿ ಅಸ್ತಿತ್ವದಲ್ಲಿದ್ದ ಪೋಷಣಾಂಶದ ಹಕ್ಕನ್ನು ನಿಸ್ಸಂದೇಹವಾಗಿ ಈ ಹಿಂದೆ ಇದ್ದ ಹಕ್ಕಾಗಿ ಪ್ರಸ್ತುತಪಡಿಸಲಾಗುತ್ತದೆ;

5. ಆಕೆಯ ಸಹ–ಮಾಲೀಕತ್ವವು ಅಧೀನ ಸ್ವಭಾವದ್ದಾಗಿದ್ದರೂ, ಪತಿ ಮತ್ತು ಪತ್ನಿಯ ನಡುವಿನ ಸಾಮಾಜಿಕ ಮತ್ತು ತಾತ್ಕಾಲಿಕ ಸಂಬಂಧದಿಂದ ಪೋಷಣಾ ಹಕ್ಕನ್ನು ತನ್ನ ಗಂಡನ ಆಸ್ತಿಯಲ್ಲಿ ಸಹ–ಮಾಲೀಕನಾಗುವ ಕಾರಣದಿಂದಾಗಿ ಹರಿಯುತ್ತದೆ; ಮತ್ತು

6. ಆಕೆಯ ಪತಿಯ ಆಸ್ತಿಯಲ್ಲಿ ಹಿಂದು ವಿಧವೆ ಸ್ವಾಧೀನದಲ್ಲಿ ಇರುವಲ್ಲಿ, ಆಸ್ತಿಯನ್ನು ಪಡೆಯುವ ಅಥವಾ ಅದನ್ನು ಖರೀದಿಸುವ ವ್ಯಕ್ತಿಯು ಸರಿಯಾದ ವ್ಯವಸ್ಥೆಯನ್ನು ಮಾಡುವ ಸ್ಥಿತಿಯಲ್ಲಿಲ್ಲದಿದ್ದರೆ ತನ್ನ ಪೋಷಣೆಯ ಬದಲಾಗಿ ಅವಳ ಪೋಷಣೆಗಾಗಿ ಆಸ್ತಿಯನ್ನು ಉಳಿಸಿಕೊಳ್ಳುವ ಅಧಿಕಾರವಿದೆ.

1937 ರ ಹಿಂದು ವುಮನ್ ರೈಟ್ಸ್ ಟು ಪ್ರಾಪರ್ಟಿ ಆಕ್ಟ್, ಕೇಂದ್ರ ಸರ್ಕಾರ ಜಾರಿ ಮಾಡಿದ ಕಾನೂನಾಗಿದ್ದು, ಇದರಲ್ಲಿ ದಯಾಬಾಗ

ಶಾಲೆಯ ಹಿಂದುಗಳಲ್ಲಿ ವಿಧವೆಗೆ ಸೀಮಿತ ಆಸ್ತಿ ಹಕ್ಕನ್ನು, ವಿಭಾಗಕ್ಕೆ ಕೋರುವ ಹಕ್ಕನ್ನು, ಇತರೆ ಶಾಲೆಯ ವಿಧವೆಯರಿಗೆ ಆಸ್ತಿಯಲ್ಲಿ ಹಕ್ಕನ್ನು, ಹಿಂದು ವ್ಯಕ್ತಿ ವಿಲ್ ಬರೆಯದೆ ಸತ್ತಿರುವಾಗ ಈ ಕಾಯ್ದೆ ಅಂಶಗಳು ಅನ್ವಯಿಸುವುದಾಗಿದೆ.

**ಮಹಿಳೆಯರಿಗೆ ಸಂಪೂರ್ಣ ಆಸ್ತಿ ಮಾಲೀಕತ್ವ ಕೊಟ್ಟ ಕಾಯ್ದೆ**

ಹಿಂದು ಉತ್ತರಾಧಿಕಾರಿತ್ವ ಕಾಯ್ದೆ 1956 ಕಲಂ 14 ರಲ್ಲಿ ಹಿಂದು ಮಹಿಳೆಗೆ ಕೆಲವು ಸಂಧರ್ಬದಲ್ಲಿ ಆಕೆಯ ಸೀಮಿತ ಹಕ್ಕಾಗಿ ಪಡೆದ ಆಸ್ತಿಗೆ ಸಂಪೂರ್ಣ ಮಾಲೀಕತ್ವವನ್ನು ಕೊಟ್ಟಿದೆ. ಕಲಂ ಏನು ಹೇಳುತ್ತದೆ ನೋಡಿ.

ಕಲಂ 14.(1) – "ಈ ಕಾಯ್ದೆಯ ಆರಂಭದ ಮುಂಚೆ ಅಥವಾ ನಂತರ ಸ್ವಾಧೀನಪಡಿಸಿಕೊಂಡಿರುವ ಹೆಣ್ಣು ಹಿಂದೂಗಳು ಹೊಂದಿರುವ ಯಾವುದೇ ಆಸ್ತಿಯನ್ನು ಅವಳ ಸಂಪೂರ್ಣ ಮಾಲೀಕರಾಗಿತ್ತಾರೆ ಮತ್ತು ಅವರನ್ನು ಸೀಮಿತ ಮಾಲೀಕರಾಗಿ ಪರಿಗಣಿಸಬಾರದು.

ವಿವರಣೆ– ಈ ಉಪ–ವಿಭಾಗದಲ್ಲಿ, "ಆಸ್ತಿ" ಪದವು ಹಿಂದೂ ಮಹಿಳೆ ಸ್ವಾಧೀನಪಡಿಸಿಕೊಂಡ ಮೂಲಕ ಚಲಿಸುವ ಮತ್ತು ಸ್ಥಿರವಾದ ಆಸ್ತಿಯನ್ನು ಒಳಗೊಂಡಿರುತ್ತದೆ, ಅದು ವಾರಸ್ಸುದಾರಿಕೆಯಾಗಿ ಪಡೆದಿರಲಿ ಅಥವಾ ಒಂದು ವಿಭಾಗದಲ್ಲಿ, ಅಥವಾ ಪೋಷಣೆಯ ಬದಲಿಗೆ ಅಥವ ಪೋಷಣೆಯ ಬಾಕಿಗಾಗಿ ಅಥವಾ ಯಾವುದೇ ವ್ಯಕ್ತಿಯಿಂದ ಕೊಡುಗೆಯಾಗಿ, ಆತ ಬಂದುವಾಗಿರಲಿ ಅಥವ ಇಲ್ಲದಿರಲಿ, ತನ್ನ ಮದುವೆಯ ಬಳಿಕ ಅಥವಾ ಮೊದಲು, ಅಥವಾ ತನ್ನ ಸ್ವಂತ ಕೌಶಲ್ಯ ಅಥವಾ ಪರಿಶ್ರಮದಿಂದ ಅಥವಾ ಖರೀದಿಯ ಮೂಲಕ ಅಥವಾ ಪ್ರಿಸ್ಕ್ರಿಪ್ಷನ್ (ದೀರ್ಘಕಾಲದ ಭೋಗಾಧಿಕಾರದಿಂದ) ಮೂಲಕ ಅಥವಾ ಯಾವುದೇ ರೀತಿಯಲ್ಲಾದರೂ, ಮತ್ತು ಆಕೆಯು ಈ ಕಾಯ್ದೆಯ ಪ್ರಾರಂಭ ಮುಂಚೆಯೇ ಸ್ತ್ರೀಧನ ಎಂದು ಕರೆಯಲ್ಪಡುವ ಅಂತಹ ಯಾವುದೇ ಆಸ್ತಿಯು." – ಆಕೆಯ ಸಂಪೂರ್ಣ ಮಾಲೀಕತ್ವದ ಆಸ್ತಿಯಾಗುತ್ತದೆ.

ಕಲಂ 14(2) – "ಉಪ–ವಿಭಾಗ (1) ರಲ್ಲಿರುವ ಆಸ್ತಿಯನ್ನು ಉಡುಗೊರೆಯಾಗಿ ಅಥವ ವಿಲ್ ಮುಖೇನ ಅಥವ ಯಾವುದೇ ಇತರ ದಾಖಲೆ ಅಡಿಯಲ್ಲಿ ಅಥವ ಒಂದು ಡಿಕ್ರಿ ಮೂಲಕ ಅಥವ ಸಿವಿಲ್ ಕೋರ್ಟ್ ಆದೇಶದ ಮೂಲಕ ಅಥವ ಅವಾರ್ಡ್ ಮೂಲಕ ಸ್ವಾಧೀನಪಡಿಸಿಕೊಂಡಿರುವುದರಲ್ಲಿ, ಅಂತಹ ಉಡುಗೊರೆ, ವಿಲ್ ಅಥವ ಇತರೆ ದಾಖಲೆ ಅಥವ ಡಿಕ್ರಿ, ಆದೇಶ, ಅವಾರ್ಡ್ ಗಳ ನಿಬಂದನೆಗಳಲ್ಲಿ ಅಂತಹ ಆಸ್ತಿಯಲ್ಲಿ ನಿರ್ಬಂಧಿತ ಎಸ್ಟೇಟ್ ಅನ್ನು ಸೂಚಿಸಿದ್ದರೆ, ಈ ಆಸ್ತಿಗೆ ಅನ್ವಯಿಸುವುದಿಲ್ಲ," – ಇಂತಹ ಆಸ್ತಿ ಸಂಪೂರ್ಣ ಮಾಲೀಕತ್ವದ ಆಸ್ತಿಯಲ್ಲ.

ಹಿಂದು ಮಹಿಳೆ ಆಸ್ತಿಯಲ್ಲಿ ಹಕ್ಕು ಪಡೆದಾಗ ಅದು ಆಕೆಯ ಸಂಪೂರ್ಣ ಮಾಲೀಕತ್ವದ ಸ್ವತ್ತು ಆಗುತ್ತದೆ, ಇದು ಮಹಿಳೆಯರಿಗೆ ನೀಡಿರುವ ವಿಶೇಷ ರಕ್ಷಣೆ ಆಗಿದೆ. ಅದೇ ಪುರುಷನಿಗೆ ತನ್ನ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು ಬಂದಾಗ ಅದು ಅವ್ನೊಬ್ಬನೇ ಇದ್ದಾಗ ಆತನ ಸ್ವಯಾರ್ಜಿತವಾಗುತ್ತದೆ, ಆತನಿಗೆ ಮಗ ಅಥವ ಮಗಳು ಇದ್ದರೆ ಆ ಆಸ್ತಿ ಕೋಪಾರ್ಸನರಿ ಸ್ವತ್ತು/ ಅವಿಭಕ್ತ ಕುಟುಂಬದ ಸ್ವತ್ತು ಆಗುತ್ತದೆ. ಮಹಿಳೆ ತನಗೆ ಆಸ್ತಿಯಲ್ಲಿ ಹಕ್ಕು (ಬಾಗಾಂಶದ ಹಕ್ಕಾಗಲೀ ಪೋಷಣಾಂಶದ ಹಕ್ಕಾಗಲೀ) ಇದ್ದೆಡೆ ಪಡೆಯುವ ಆಸ್ತಿಯು ಆಕೆಯ ಸಂಪೂರ್ಣ ಮಾಲೀಕತ್ವ ಪಡೆದ ಸ್ವತ್ತಾಗುತ್ತದೆ. (ಕಲಂ 14 ಹಿಂದು ಉತ್ತರಾಧಿಕಾರತ್ವ ಕಾಯ್ದೆ 1956).

ಕಲಂ 14 ರ ಹಿಂದು ಉತ್ತರಾಧಿಕಾರತ್ವ ಕಾಯ್ದೆ 1956 ಅಡಿಯಲ್ಲಿ ಹಿಂದು ಮಹಿಳೆ ಈ ಕಾಯ್ದೆ ಜಾರಿಗೆ ಮುಂಚೆ ಅಥವ ಜಾರಿಯಾದ ಮೇಲೆ ಆರ್ಜಿಸಿದ ಆಸ್ತಿಯ ಸ್ವಾಧೀನದಲ್ಲಿರುವುದು ಅದು ಆಕೆಯ ಸಂಪೂರ್ಣ ಮಾಲೀಕತ್ವದ ಸ್ವತ್ತು ಆಗುತ್ತದೆ. ಇಲ್ಲಿ ಸ್ವಾಧೀನದಲ್ಲಿ ಇರುವುದು ಎಂಬ

ವಿಚಾರಕ್ಕೆ ವ್ಯಾಖ್ಯಾನಿಸಿರುವ ಸುಪ್ರೀಮ್ ಕೋರ್ಟ್ [1] ಸ್ವಾಧೀನದಲ್ಲಿ ಇರುವುದು ಎಂದರೆ ಮಾಲೀಕತ್ವವನ್ನು ಹೊಂದಿದ ಅಥವಾ ಒಮ್ಮೆ ಕೈಯಲ್ಲಿ ಅಥವಾ ಶಕ್ತಿಯಲ್ಲಿ ಹೊಂದಿರುವ ಸ್ಥಿತಿ ಎಂದರ್ಥ. ಇದು ಹಿಂದೂ ಸ್ತ್ರೀಯಿಂದ ವಾಸ್ತವಿಕ ಅಥವಾ ದೈಹಿಕ ಹತೋಟಿ ಅಥವಾ ಆಸ್ತಿಯ ವೈಯಕ್ತಿಕ ಸ್ವಾಧೀನ ಅಲ್ಲ, ಆದರೆ ಕಾನೂನಿನಲ್ಲಿ ಹತೋಟಿ ಹೊಂದಿರಬಹುದಾದದ್ದು. ಇದು ನಿಜವಾದ ಅಥವಾ ರಚನಾತ್ಮಕ ಅಥವಾ ಕಾನೂನಿನಿಂದ ಗುರುತಿಸಲ್ಪಟ್ಟ ಯಾವುದೇ ರೂಪದಲ್ಲಿರಬಹುದು. ಆದ್ದರಿಂದ, ಸೆಕ್ಷನ್ 14 ರ ಉಪ ಸೆಕ್ಷನ್ 1 ಅದರ ವಿಸ್ತಾರದಲ್ಲಿ ದೊಡ್ಡದಾಗಿದೆ ಮತ್ತು ಪೋಷಣಾಂಶದ ಬದಲಿಗೆ ಸ್ವಾಧೀನತೆಯನ್ನೂ ಒಳಗೊಂಡಂತೆ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳುವುದು ಮತ್ತು ಆಕ್ಟ್ ಪ್ರಾರಂಭವಾಗುವ ದಿನಾಂಕದ ವೇಳೆಗೆ ಆಸ್ತಿಯನ್ನು ತನ್ನಿಂದ ಪಡೆದುಕೊಂಡಿದ್ದಾಗ ಅಥವಾ ನಂತರದಲ್ಲಿ ಆಸ್ತಿಯನ್ನು ಆರ್ಜಿಸಿದ್ದು ಮತ್ತು ಸ್ವಾಧೀನಪಡಿಸಿಕೊಂಡಿದ್ದು ಅವಳು ಆಸ್ತಿಯ ಸಂಪೂರ್ಣ ಮಾಲೀಕರಾಗುತ್ತಾರೆ."

ಆಕೆ ಸೀಮಿತ ಮಾಲೀಕಳಾಗಿದ್ದಾಗ ಮಾತ್ರ ಆಕೆಯನ್ನು ಸಂಪೂರ್ಣ ಮಾಲೀಕಳಾಗಿ ಮಾಡಿದ್ದು, ಕಾಯ್ದೆಯು ಎಲ್ಲಾ ಮಹಿಳೆಯರಿಗೆ ಈ ಸಂಪೂರ್ಣ ಮಾಲೀಕತ್ವದ ಹಕ್ಕನ್ನು ನೀಡಿರುವುದಿಲ್ಲ, ಆಕೆ ಸೀಮಿತ ಮಾಲೀಕಳಾಗಿದ್ದರೆ ಮಾತ್ರ.[2]

ಕಲಂ 14 ರಲ್ಲಿನ ಸಾರವನ್ನು ವಿವರಿಸಿರುವ ಸುಪ್ರೀಮ್ ಕೋರ್ಟ್[3] ತನ್ನ ಮುಂದಿದ್ದ ಪ್ರಕರಣದ ವಾಸ್ತವಿಕತೆಯನ್ನು ವಿವರಿಸುತ್ತ ಹೀಗೆ ವ್ಯಾಖ್ಯಾನಿಸಿದೆ. "ಪ್ರಥಮವಾಗಿ, ವಿಲ್ ಬರೆದವ – ಶ್ರೀ. ದಿವಾನ್ ತನ್ನ

---

[1] ವಿ ತುಳಸಮ್ಮ ಪ್ರಕರಣ – ಎ.ಐ.ಆರ್ 1977 ಎಸ್.ಸಿ 1944

[2] ಕಲಾವತಿ ಬಾಯಿ ಪ್ರಕರಣ – ಎ.ಐ.ಆರ್ 1991 ಎಸ್.ಸಿ 1581

[3] ರಣ್ವೀರ್ ದೀವಾನ್ ವಿ. ರಶ್ಮಿ ಖನ್ನಾ – 2018 (12) ಎಸ್.ಸಿ.ಸಿ 1

ದಾವೆ ಮನೆಯ ಪ್ರತ್ಯೇಕ ಮಾಲೀಕರಾಗಿದ್ದು, ತನ್ನ ಆಸ್ತಿಯನ್ನು ಅವರು ಇಷ್ಟಪಟ್ಟ ರೀತಿಯಲ್ಲಿ ವಿನಿಯೋಗಿಸಲು ಸ್ವತಂತ್ರರಾಗಿದ್ದರು, ಏಕೆಂದರೆ ಅದು ತನ್ನ ಸ್ವಯಾರ್ಜಿತ ಸ್ವತ್ತು. ಎರಡನೆಯದು, ವಿಲ್ ಬರೆದವನು ತನ್ನ ಮಗ ಮತ್ತು ಮಗಳಿಗೆ ಸಂಪೂರ್ಣ ಮಾಲೀಕತ್ವದಲ್ಲಿ ದಾವ ಮನೆ ನೀಡಿದರು ಮತ್ತು ಅವರಿಗೆ ಸಂಪೂರ್ಣ ಮಾಲೀಕತ್ವವನ್ನು ನೀಡಿದರು. ಅದೇ ಸಮಯದಲ್ಲಿ, ಅವರು ತಮ್ಮ ಹೆಂಡತಿಗೆ "ಜೀವವಿರುವವರೆಗೆ ಆಸಕ್ತಿಯನ್ನು" ನೀಡಿದರು, ಅಂದರೆ, ಮಗ ಮತ್ತು ಮಗಳಿಗೆ ಸೇರಿದ ದಾವ ಮನೆಯಲ್ಲಿ ವಾಸಿಸುವ ಹಕ್ಕನ್ನು ನೀಡಿದರು. ಅಂತಹ ಇತ್ಯರ್ಥವನ್ನು ಕಾಯ್ದೆಯ ಸೆಕ್ಷನ್ 30 ಮತ್ತು ಸೆಕ್ಷನ್ 14 (2) ರ ಪ್ರಕಾರ ಮಾಡಬಹುದು. ಮೂರನೆಯದಾಗಿ, ಅಂತಹ "ಜೀವಿತಾವಧಿಯ ಆಸಕ್ತಿ" "ಸೀಮಿತ ಎಸ್ಟೇಟ್" ನ ಸ್ವಭಾವದ ಭಾಗವಾಗಿದ್ದು ಕಾಯ್ದೆಯ ಸೆಕ್ಷನ್ 14 (2) ರ ಅಡಿಯಲ್ಲಿ ಅವಳ ಸಾವಿನ ತನಕ "ಸೀಮಿತ ಎಸ್ಟೇಟ್" ಆಗಿ ಉಳಿಯಿತು ಮತ್ತು ಕಾಯ್ದೆ ಸೆಕ್ಷನ್ 14 (1) ರ ಅಡಿಯಲ್ಲಿ "ಸಂಪೂರ್ಣ ಆಸಕ್ತಿ" ಆಗಲಿಲ್ಲ. ಬೇರೆ ರೀತಿಯಲ್ಲಿ ಹೇಳುವುದಾದರೆ, ಕಾಯ್ದೆ ಸೆಕ್ಷನ್ 14 (2) ರ ಅಡಿಯಲ್ಲಿ ಪ್ರಕರಣ ಬಂದರೆ, ಸೆಕ್ಷನ್ 14 (1) ನಿಂದ ಹೊರಬರುತ್ತದೆ. ಇದು ಕಾನೂನಿನಲ್ಲಿ ಅನುಮತಿ ಇದೆ ಏಕೆಂದರೆ ಸೆಕ್ಷನ್ 14 (2) ಅನ್ನು ಕಾಯಿದೆಯ ಸೆಕ್ಷನ್ 14 (1) ಕ್ಕೆ ಷರತ್ತಾಗಿ ನಿಗದಿಪಡಿಸಲಾಗಿದೆ. ನಾಲ್ಕನೆಯದಾಗಿ, ವಿಲ್ ಬರೆದವರ ಮರಣದ ನಂತರ ವಿಲ್ನ ಪರಿಣಾಮವು ಕಾರ್ಯಾಚರಣೆಗೆ ಬರುತ್ತೆ, ಮಗ ಮತ್ತು ಮಗಳು ಪ್ರತಿಯೊಬ್ಬರನ್ನೂ ಹೊರತುಪಡಿಸಿ ದಾವೆ ಮನೆಯಲ್ಲಿ ಸಂಪೂರ್ಣ ಮಾಲೀಕತ್ವವನ್ನು ಪಡೆದರು, ಆದರೆ ಪತ್ನಿಯು ದಾವೆ ಮನೆಯಲ್ಲಿ ವಾಸಿಸುವ ಅರ್ಹತೆಯನ್ನು ಹಕ್ಕಿನಂತೆ ಪಡೆದರು. ಬೇರೆ ರೀತಿಯಲ್ಲಿ ಹೇಳುವುದಾದರೆ, ಹೆಂಡತಿಯು ಜೀವಂತವಾಗಿರುವ ತನಕ ತನ್ನ ಮಗ / ಮಗಳು ದಾವ ಮನೆಯಲ್ಲಿ ವಾಸಿಸುವ ಹಕ್ಕನ್ನು ಜಾರಿಗೊಳಿಸಲು ಕಾನೂನಿನಲ್ಲಿ ಅರ್ಹತೆ

ಪಡೆದರು. ಯಾವುದೇ ಕಾರಣಕ್ಕಾಗಿ, ಅವಳು ಈ ಹಕ್ಕಿನಿಂದ ವಂಚಿತರಾದರೆ, ಅಂತಹ ಹಕ್ಕನ್ನು ಮಗ / ಮಗಳ ಮೂಲಕ ಜಾರಿಗೊಳಿಸಲು ಅವಳು ಅರ್ಹರಾಗಿದ್ದಳು, ಆದರೆ ಅದನ್ನು ಮೀರಿ ಅಲ್ಲ. ಹೇಗಾದರೂ, ಇಲ್ಲಿ ಅಂತಹ ವಿಷಯವಿಲ್ಲ. ಐದನೆಯದಾಗಿ, ವಿಲ್ ಬರೆದವರು ತನ್ನ ಹೆಂಡತಿಗೆ ಸಂಪೂರ್ಣವಾಗಿ ತನ್ನದೇ ಆದ ಆಸ್ತಿಗಳನ್ನು ನೀಡಿದ್ದಾನೆ, ಅದು ಆಕೆಯನ್ನು ತಾನೇ ನಿರ್ವಹಿಸಲು ಸಾಧ್ಯವಾಗಿಸಿತು. ಇದಲ್ಲದೆ, ಪೋಷಣೆಯ ಹಕ್ಕು ಪಡೆಯಲು, ಯಾವುದೇ ವೇಳೆ, ಹೆಂಡತಿಯಿಂದ ಜಾರಿಗೆ ಬರಬೇಕಾದ ಹಕ್ಕು. ಆದಾಗ್ಯೂ, ಅವರು ಅದನ್ನು ಎಂದಿಗೂ ಮಾಡಲಿಲ್ಲ ಮತ್ತು ಇಬ್ಬರೂ ಸಂತೋಷದಿಂದ ಜೀವಿಸುತ್ತಿದ್ದರು. ಆದುದರಿಂದ, ಅವಳ ಪತಿಯಿಂದ ಯಾವುದೇ ರೀತಿಯ ಪೋಷಣೆ ಬೇಕು ಎಂದು ಆಕೆಗೆ ಯಾವುದೇ ಬೇಡಿಕೆಯಿರಲಿಲ್ಲ. ಆರನೇಯದು, "ಜೀವನ ಆಸಕ್ತಿಯು" ಜೀವನದ ಅಂತ್ಯದ ಮೇಲೆ ಕೊನೆಯಾಗಿಸುವ ಆಸಕ್ತಿಯೆಂದು ಕಾನೂನಿನ ತತ್ವವಾಗಿದೆ. ಇದು ವೈಯಕ್ತಿಕವಾದ ಸ್ವಭಾವದ್ದಾದರಿಂದ ಇತರ ವ್ಯಕ್ತಿಗೆ ವರ್ಗಾವಣೆಯಾಗಲು ಇದು ಅಸಮರ್ಥವಾಗಿದೆ. ಆದ್ದರಿಂದ, ಅಂತಹ ವ್ಯಕ್ತಿ, ಅವನ / ಅವಳ ಜೀವಿತಾವಧಿಯಲ್ಲಿ ಮಾತ್ರ ಅವನ "ಅವಳ ಜೀವನದಲ್ಲಿ" ಜೀವಂತ ಹಿತಾಸಕ್ತಿಯನ್ನು ಆನಂದಿಸಬಹುದು. ಇಲ್ಲಿಯೇ ಇದೇ ರೀತಿ. 12.09.2016 ರಂದು ಆಕೆಯ ಮರಣಹೊಂದಿ ದಾವ ಮನೆಯಲ್ಲಿ ಅವಳ "ಜೀವನ ಆಸಕ್ತಿಯು" ಮರೆಯಾಯಿತು."

ಭಾರತೀಯ ಉತ್ತರಾಧಿಕಾರಿತ್ವ ಕಾಯ್ದೆ ಕಲಂ 57, ಷೆಡ್ಯೂಲ್–3 ರಂತೆ ಹಿಂದುಗಳ ವಿಲ್ ಬಗ್ಗೆ ಅನ್ವಯಿಸುವ ಕಲಂ 88 ರಲ್ಲಿ ಹೇಳಿರುವಂತೆ "ಉಯಿಲಿನಲ್ಲಿ ಬರೆದಿರುವ ಎರಡು ಕೊಡುಗೆಗಳಲ್ಲಿ ಉಪವಾಕ್ಯಗಳಲ್ಲಿ ಬದ್ದ ವೈರುದ್ಯತೆ ಇದ್ದರೆ ಕೊನೆಯಲ್ಲಿ ಬರೆದ ಕೊಡುಗೆಯ ಉಪವಾಕ್ಯವು ಊರ್ಜಿತವಾಗತಕ್ಕದ್ದು." ಆದರೆ ಈ ಕಾಯ್ದೆಯ ನಿಯಮವನ್ನು

ಉಲ್ಲೇಕಿಸದ ಸುಪ್ರೀಮ್ ಕೋರ್ಟ್[1] ಕಲಂ 14 ಹಿಂದು ಉತ್ತರಾಧಿಕಾರತ್ವ ಕಾಯ್ದೆ ವ್ಯಾಖ್ಯಾನಿಸುವಾಗ ಈ ಮಾರ್ಗ ಸೂತ್ರಗಳನ್ನು ಹೇಳಿದೆ, 1) ಅಲ್ಲಿ ಒಂದು ವಿಲ್ ಪ್ರಕಾರ, ಒಬ್ಬ ವಿಲ್ ಬರೆದವನು ಅವನ ಹೆಂಡತಿಯ ಪರವಾಗಿ ಆಸ್ತಿಯಲ್ಲಿ ತನ್ನ ಸಂಪೂರ್ಣ ಹಿತಾಸಕ್ತಿಯನ್ನು ಕೊಟ್ಟಿದ್ದರೆ, ನಂತರದ ಬಾಗದಲ್ಲಿ ವ್ಯತಿರಿಕ್ತವಾದ ಯಾವುದೇ ಆಸ್ತಿಯ ಕೊಡುಗೆಯು ಅಮಾನ್ಯವಾಗಿದೆ; ಮತ್ತು 2) ಒಬ್ಬ ವಿಲ್ ಬರೆದವನು ತನ್ನ ಆಸ್ತಿಯಲ್ಲಿ ಅವರ ವಿಧವೆಗೆ ನಿರ್ಬಂಧಿತ ಅಥವಾ ಸೀಮಿತ ಹಕ್ಕನ್ನು ನೀಡಿದ್ದರೆ, ಅದೇ ರೀತಿ ಅವನ ಹೆಂಡತಿಯ ಮರಣದ ನಂತರ ಆಸ್ತಿಯನ್ನು ಬೇರೆಯವರಿಗೆ ಹೋಗುವಂತೆ ಬರೆಯಲು ವಿಲ್ ಬರೆದವರಿಗೆ ಅದು ತೆರೆದಿರುತ್ತದೆ." ಈ ಬಗ್ಗೆ ಇನ್ನೊಂದು ಸುಪ್ರೀಮ್ ಕೋರ್ಟ್ ತೀರ್ಪಿನಲ್ಲಿ[2] ಸ್ಪಷ್ಟತೆ ಇದೆ. ಒಮ್ಮೆ ವಿಲ್ ನಲ್ಲಿ ಸಂಪೂರ್ಣ ಮಾಲೀಕತ್ವವನ್ನು ತನ್ನ ಹೆಣ್ಣುಮಕ್ಕಳಿಗೆ ಕೊಟ್ಟಿರುವ ಉಲ್ಲೇಕ ಮೊದಲು ಉಲ್ಲೇಕ ಮಾಡಿ ಕೊನೆಯಲ್ಲಿ ತನ್ನ ಹೆಣ್ಣುಮಕ್ಕಳ ಮರಣಾ ನಂತರ ಅವರ ಹೆಣ್ಣು ಮಕ್ಕಳಿಗೆ ಸೇರಬೇಕೆಂದು ಬರೆದಿದ್ದರೆ ಅದರಲ್ಲಿ ಕೊನೆಯಲ್ಲಿ ಬರೆದ ಉಲ್ಲೇಕ ಜಾರಿಗೆ ಬರುವುದಿಲ್ಲ. ಅದೇ ಸಂಪೂರ್ಣ ಮಾಲೀಕತ್ವವನ್ನು ಕೊಟ್ಟು ಅವರು ಉಳಿಸಿದ ಸ್ವತ್ತು ಅವರ ಮಕ್ಕಳಿಗೆ ಸೇರಬೇಕೆಂದು ಬರೆದಿದ್ದರೆ ಅದು ಬೇರೆಯದ್ದೇ ರೀತಿಯಲ್ಲಿ ಎರಡೂ ಜಾರಿಯಾಗುತ್ತವೆ. ಇಂತದ್ದೇ ಪ್ರಕರಣ 2016 ರಲ್ಲಿ ಸುಪ್ರೀಮ್ ಕೋರ್ಟ್ ತೀರ್ಪಿತ್ತಿದೆ.[3]

ವಿಲ್ ಮುಖೇನ ಒಬ್ಬ ವಿದವೆಗೆ ಮನೆಯಲ್ಲಿ ವಾಸ ಮಾಡುವ ಹಕ್ಕು ಮಾತ್ರ ನೀಡಲಾಗಿತ್ತು, ಆಕೆ ಅದರ ಪರಭಾರೆ ಮಾಡುವುದು ನಿಷೇದವಿತ್ತು, ಹಿಂದು ಉತ್ತರಾಧಿಕಾರತ್ವ ಕಾಯ್ದೆ ಜಾರಿಯಾದಾಗ ಸದರಿ

---

[1] ಮೌಲೇಶ್ವರ್ ಮಣಿ ವಿ. ಜಗದೀಶ್ ಪ್ರಸಾದ್ – 2002 (2) ಎಸ್.ಸಿ.ಸಿ 468

[2] ಸದಾರಾಮ್ ಸೂರ್ಯ ವಿ. ಕೆ ಸೂರ್ಯ ಕಾಂತಮ್ – ಎ.ಐ.ಆರ್ 2011 ಎಸ್.ಸಿ 294

[3] ಮಾದುರಿ ಘೋಷ್ ವಿ. ದೇಬೊಬ್ರೊತೊ – ಎ.ಐ.ಆರ್ 2016 ಎಸ್.ಸಿ 5242

ಸ್ವತ್ತು ಸ್ವಾಧೀನದಲ್ಲಿ ಆ ವಿದವೆ ಇದ್ದರು. ಅಂತಹ ಸಂಧರ್ಬದಲ್ಲಿ ಸುಪ್ರೀಮ್ ಕೋರ್ಟ್[1] ಆಕೆ ಸ್ವಾಧೀನದಲ್ಲಿದ ಆಸ್ತಿಯು ತನ್ನ ಈ ಹಿಂದೆ ಇದ್ದ ಪೋಷಣಾಂಶದ ಹಕ್ಕಿನ ಗುರುತಿನಿಂದ ಹೊಂದಿದ್ದಾರೆ, ಆದ್ದರಿಂದ ಆಕೆಯ ಸೀಮಿತ ಹಕ್ಕು ಸಂಪೂರ್ಣ ಹಕ್ಕಾಗಿ ಬದಲಾಯಿತು ಎಂಬ ತೀರ್ಪಿತ್ತಿದೆ.

ಯಾರ ಹೆಸರಿನಲ್ಲಾದರೂ ವಿಲ್ ಬರೆದಿದ್ದರೆ ಅವರ ಹೆಸರಿಗೆ ವಿಲ್ ಮುಖೇನ ಆಸ್ತಿ ಪ್ರಾಪ್ತವಾಗುತ್ತದೆ. ಪ್ರೊಬೇಟ್ ಪಡೆಯುವುದು ಮಾತ್ರ ಒಂದು ವಿಲ್ ಸ್ಥಾಪಿಸುವ ವಿದವಾಗಿದೆ.[2]

ವಿಲ್ ಮುಖೇನ ವಿದವೆ ಆಸ್ತಿಯನ್ನು ತನ್ನ ಜೀವವಿರುವವರೆಗೆ ಅನುಭವಿಸಲು ಕೊಟ್ಟಿರುವ ಸಮಯದಲ್ಲಿ ಕಾನೂನು ವ್ಯಾಖ್ಯಾನವನ್ನು ಸುಪ್ರೀಮ್ ಕೋರ್ಟ್[3] ಹೀಗೆ ಕೊಟ್ಟಿದೆ. (1) ಹಿಂದೂ ಕಾನೂನಿನಡಿಯಲ್ಲಿ, ಪತಿ ತನ್ನ ಹೆಂಡತಿಯನ್ನು ಪೋಷಿಸಲು ವೈಯಕ್ತಿಕ ಬಾಧ್ಯತೆ ಹೊಂದಿದ್ದಾರೆ ಮತ್ತು ಅವನು ಆಸ್ತಿಗಳನ್ನು ಹೊಂದಿದ್ದಾನೆ ಎಂದು ದೃಢಪಟ್ಟರೆ, ಅಂತಹ ಆಸ್ತಿಯಿಂದ ಪೋಷಿಸಿಕೊಳ್ಳುವ ಹಕ್ಕನ್ನು ಅವನ ಹೆಂಡತಿಗೆ ನೀಡಲಾಗುತ್ತದೆ. ಹಿಂದೂ ವಿಧವೆಯ ಪೋಷಣೆಯ ಹಕ್ಕು ಅದು ಕೇವಲ ರಿಯಾಯಿತಿ, ಅನುಗ್ರಹದಿಂದ ಅಥವಾ ಉಚಿತ ಪರಿಪಾಲನೆ ವಿಷಯವೆಂದು ಪರಿಗಣಿಸಬೇಕಾದ ಅಭ್ಯಾಸದಲ್ಲಿಲ್ಲ, ಅದು ಮೌಲ್ಯಯುತ, ಆಧ್ಯಾತ್ಮಿಕ ಮತ್ತು ನೈತಿಕ ಹಕ್ಕು ಆಗಿದೆ. ನ್ಯಾಯಾಂಗ ಘೋಷಣೆಯಿಂದ, ವಿಧವೆಯ ಪೋಷಣಾ ಹಕ್ಕನ್ನು ಕಾಪಾಡಿಕೊಳ್ಳಲು, ಅವಳ ಪತಿಯ ಆಸ್ತಿಯ ಮೇಲೆ ಒಂದು ಹೊಣೆಯನ್ನು ಸೃಷ್ಟಿಸುವುದಿಲ್ಲ ಆದರೆ ಖಂಡಿತವಾಗಿಯೂ ವಿಧವೆ ನ್ಯಾಯಾಲಯದಲ್ಲಿ ಕ್ರಮ ಜರುಗಿಸಿ ಮತ್ತು ಹೊಣೆಯನ್ನು ರಚಿಸುವ ಮೂಲಕ ಪೋಷಣೆಗೆ ತೀರ್ಪು ಪಡೆಯುವುದರ

---

[1] ರಾಮ್ ಕಾಳಿ ವಿ. ಚೌದರಿ ಅಜಿತ್ – 1997 (9) ಎಸ್.ಸಿ.ಸಿ 613

[2] ಕಮೀಷನರ್ ವಿ. ಮೋಹನ್ – 2004 (7) ಎಸ್.ಸಿ.ಸಿ 505

[3] ಜುಪುಡಿ ಪಾರ್ಥ ಸಾರಥಿ ವಿ. ಪೆಂಟಪತಿ ರಾಮ ಕೃಷ್ಣ 2004 (7) ಎಸ್.ಸಿ.ಸಿ 505

ಮೂಲಕ ತನ್ನ ಹಕ್ಕನ್ನು ಜಾರಿಗೆ ತರಬಹುದು. (2) ಹಿಂದೂ ವಿವಾಹಿತ ಮಹಿಳಾ ಪ್ರತ್ಯೇಕ, ಪೋಷಣೆ ಮತ್ತು ನಿವಾಸ ಹಕ್ಕುಗಳ ಕಾಯಿದೆ, 1946 ಅಂತಹ ಹಕ್ಕಿನ ಶಾಸನಬದ್ಧ ಮನ್ನಣೆ ನೀಡಲು ಜಾರಿಗೆ ತರಲ್ಪಟ್ಟಿದೆ ಮತ್ತು ಆದರಿಂದ, ಪೋಷಣೆಯ ಹಕ್ಕು ಮೊದಲೇ ಅಸ್ತಿತ್ವದಲ್ಲಿರುವ ಹಕ್ಕಾಗಿದೆ ಎಂದು ಯಾವುದೇ ಸಂದೇಹವೂ ಇಲ್ಲ. (3) ತಕ್ಷಣದ ಈ ಪ್ರಕರಣದಲ್ಲಿ, 1920 ರಲ್ಲಿ ವಿಲ್ಲನ್ನು ಸಹಿ ಮಾಡಲಾಯಿತು, ಅದರಲ್ಲಿ ಸುಬ್ಬಾ ರಾವ್ ಅವರ ಮೊದಲ ಹೆಂಡತಿ ಮರಣಿಸಿರುವರೆಂದು, ಎರಡನೆಯ ಹೆಂಡತಿಗೆ ಇಬ್ಬರು ಗಂಡುಮಕ್ಕಳು ಮತ್ತು ಒಬ್ಬ ಮಗಳು ಇರುವರೆಂದು. ತರುವಾಯ, ಎರಡನೆಯ ಪತ್ನಿ ಸಹ ನಿಧನರಾದರೆಂದು. ಹಾಗಾಗಿ, ವೀರರಾಘವಮ್ಮರನ್ನು ಮೂರನೆಯ ಹೆಂಡತಿಯಾಗಿ ಮದುವೆಯಾದರು. ವಿಲ್ ಬರೆದವರು ಅವನ ಒಡೆತನದ ಆಸ್ತಿಗಳ ವಿವರಣೆಯನ್ನು ಕೂಡ ಉಲ್ಲೇಖಿಸಿದ್ದಾರೆ. ಅವರು ವಿಲ್ನಲ್ಲಿ ನಿರ್ದಿಷ್ಟವಾಗಿ ಹೇಳುವುದೇನೆಂದರೆ, ಅವರ ಮೂರನೆಯ ಹೆಂಡತಿ ಜೀವನಪೂರ್ತಿ ಕಾಂಪೌಂಡ್ ಗೋಡೆಯ ಬಳಿಯಲ್ಲಿ ಇರುವ ಒಂದು ಹೆಂಚುಗಳ ಮನೆ ಅನುಬವಿಸುವರು. ಆ ಅನುಭವಕ್ಕಾಗಿ, ವಿಲ್ನಲ್ಲಿಯೂ ವಿಧವೆ ವೀರರಾಘವಮ್ಮನು ಬೇರೆಯ ಮನೆಯ ಹಿಂಭಾಗದಲ್ಲಿ ನೆಲೆಗೊಂಡಿದ್ದ ಬಾವಿ ಮೂಲಕ ನೀರು ತರುವ ಅರ್ಹತೆ ನೀಡಲಾಗುವುದು ಎಂದು ತಿಳಿಸಲಾಗಿದೆ. (4) ಬೇರೆ ರೀತಿಯಲ್ಲಿ ಹೇಳುವುದಾದರೆ, ವಿಲ್ನ ಬರೆದವರು ತನ್ನ ಮೂರನೆಯ ಹೆಂಡತಿಗೆ ತನ್ನ ಜೀವಮಾನ ತನಕ ದಾವ ಷೆಡ್ಯೂಲ್ ಆಸ್ತಿಯಲ್ಲಿ ತನ್ನ ಅನುಭವವನ್ನು ಕಾಪಾಡಿಕೊಳ್ಳಲು ವ್ಯವಸ್ಥೆ ಮಾಡಿದ್ದಾನೆ. ಆದ್ದರಿಂದ ಆಕೆಯ ಜೀವಿತಾವಧಿಯಲ್ಲಿ ಅಕೆಯ ಪೋಷಣೆಯ ಬಗ್ಗೆ ಮೊಕದ್ದಮೆಯ ಆಸ್ತಿಯನ್ನು ಹಿಡಿದಿಡಲು ಮತ್ತು ಅನುಭವಿಸಲು ಅವನು ತನ್ನ ಮೂರನೇ ಹೆಂಡತಿ ವೀರರಾಘವಮ್ಮನಿಗೆ ದಾವ ಷೆಡ್ಯೂಲ್ ಆಸ್ತಿಯನ್ನು ನೀಡಿರುವುದಾಗಿ ವಿಲ್ ಬರೆದವರ ಉದ್ದೇಶವು ಸ್ಪಷ್ಟವಾಗಿದೆ. ವಿಲ್ ಅನ್ನು

ಕಾರ್ಯರೂಪಕ್ಕೆ ತರುವ ಒಂದು ಪ್ರಕರಣವಲ್ಲ, ಅವರ ಸಂಪೂರ್ಣ ಎಸ್ಟೇಟ್ ಅವರ ವಿಧವೆ ವೀರರಾಘವಮ್ಮನಿಗೆ ವಿನಿಯೋಗಿಸುವುದಾಗಿ ವಿಲ್ ಬರೆದವರು ತಿಳಿಸಿಲ್ಲ. (5) ಮೇಲ್ಮನವಿ ಅರ್ಜಿದಾರರ ಹಿರಿಯ ವಕೀಲರ ಕೊನೆಯ ವಾದ ವೀರರಾಘವಮ್ಮನ ಪೋಷಣೆ ಬದಲಾಗಿ ಆಸ್ತಿಯಲ್ಲಿ ಸ್ವಾಧೀನದಲ್ಲಿರುವ ಮನವಿಯನ್ನು ಸಮರ್ಥಿಸಲು ಯಾವುದೇ ಮನವಿ ಮತ್ತು ಸಾಕ್ಷಿಯ ಅನುಪಸ್ಥಿತಿಯಲ್ಲಿ, ವಿಭಾಗ 14 ಸ್ವಯಂಚಾಲಿತವಾಗಿ ಆಕರ್ಷಿಸಲ್ಪಡುವುದಿಲ್ಲ. ಕಲಿತ ಕೌನ್ಸಿಲ್ ಸಲ್ಲಿಸಿದ ಸಲ್ಲಿಕೆಯಲ್ಲಿ ಯಾವುದೇ ಗಟ್ಟಿತನ ಕೋರ್ಟ್ ಕಂಡುಹಿಡಿಯಲಿಲ್ಲ. ನಿರ್ವಿವಾದವಾಗಿ, ಎ–2 (ವಿಲ್) ಎಕ್ಸಿಬಿಟ್ ಎನ್ನುವುದು ವಿರಾರಾಘವಮ್ಮನಿಗೆ ತನ್ನ ಜೀವನದ ತನಕ ಅದೇ ರೀತಿಯಲ್ಲಿ ಅನುಭವಿಸಲು ಪ್ರಶ್ನಿತ ಆಸ್ತಿಯನ್ನು ನೀಡಲಾಗಿದೆ ಎಂದು ವಿವರಿಸಲಾಗಿದೆ. ಸಹಿ ಮಾಡಲಾದ ಎ–2 ಯ ಪ್ರಾಮಾಣಿಕತೆಯು ವಿವಾದಾಸ್ಪದವಾಗಲಿಲ್ಲ ಅಥವಾ ವೀರರಾಘವಮ್ಮರು ಆಸ್ತಿಯನ್ನು ಪೋಷಣೆಯ ಮೂಲಕ ಅನುಭವಿಸುತ್ತಿದ್ದಾರೆ ಎಂದು ವಿವಾದಕ್ಕೆ ಒಳಗಾಯಿತು. ನ್ಯಾಯಾಲಯದ ಪರಿಗಣಿತ ಅಭಿಪ್ರಾಯದಲ್ಲಿ, ಹೆಂಡತಿ ಮತ್ತು ಅವಳ ನಿರಂತರ ಸ್ವಾಮ್ಯದ ಪರವಾಗಿ ಆಸ್ತಿಯನ್ನು ರವಾನೆ ಮಾಡುವ ಅಂಶವು ವಿವಾದಾಸ್ಪದವಾಗಿದ್ದರೂ, ಮನವಿ ಮತ್ತು ಪುರಾವೆಗಳ ಪ್ರಶ್ನೆಯು ಉದ್ಭವಿಸುವುದಿಲ್ಲ. ಬೇರೆ ರೀತಿಯಲ್ಲಿ ಹೇಳುವುದಾದರೆ, ವಿಲ್ ಮತ್ತು ವೀರರಾಘವಮ್ಮ ವ್ಯವಸ್ಥೆಯಲ್ಲಿನ ವ್ಯವಸ್ಥೆಯನ್ನು ಯಾರೂ ವಿವಾದಿಸಲಿಲ್ಲ, ಪೋಷಣೆಗೆ ಬದಲಾಗಿ ಈ ಆಸ್ತಿಯನ್ನು ಅನುಭವಿಸುತ್ತಿದ್ದರು. (6) ಅಂಗೀಕರಿಸಿರುವಂತೆ, ವಿಲ್ ಮತ್ತು ವೀರರಘವಮ್ಮರಲ್ಲಿ ಮಾಡಿದ ವ್ಯವಸ್ಥೆಗಳು ಆಕೆಯು ಆಸ್ತಿಯನ್ನು ಅನುಭವಿಸಲು ಮುಂದುವರಿಸಿದರು. ಒಪ್ಪಿಕೊಂಡ ಸ್ಥಾನದ ದೃಷ್ಟಿಯಿಂದ, ಆಕ್ಟ್ ನ ಸೆಕ್ಷನ್ 14 (1) ರ ಪ್ರಕಾರ, ಆಸ್ತಿಯಲ್ಲಿ ತನ್ನ ಸೀಮಿತ ಹಕ್ಕನ್ನು ಸಂಪೂರ್ಣ ಹಕ್ಕನ್ನಾಗಿ ಹಿಡಿದಿಟ್ಟುಕೊಂಡರು ಎಂದು ಎತ್ತಿಹಿಡಿಯಲು

ನ್ಯಾಯಾಲಯಕ್ಕೆ ಅನುಮಾನವಿಲ್ಲ. ಎ–2 ನಲ್ಲಿ ಯಾವುದೇ ನಿರ್ದಿಷ್ಟ ಪದವನ್ನು ಉಲ್ಲೇಖಿಸಲಾಗಿಲ್ಲವಾದರೂ, ವೀರರಾಘವಮ್ಮ ಪರವಾಗಿ ಪೋಷಣಾ ಜೀವನ ಆಸಕ್ತಿಯ ಬದಲಿಗೆ ರಚಿಸಲ್ಪಟ್ಟಿದೆ, ನ್ಯಾಯಾಲಯದ ಅಭಿಪ್ರಾಯದಲ್ಲಿ ಸೀಮಿತ ಆಸಕ್ತಿಯು ತನ್ನ ಪರವಾಗಿ ರಚಿಸಲ್ಪಟ್ಟಿರುವುದರಲ್ಲಿ ಮೊದಲೇ ಅಸ್ತಿತ್ವದಲ್ಲಿರುವ ಪೋಷಣೆ ಹಕ್ಕನ್ನು ಹೊಂದಿದ್ದು, ಇದು ಹಿಂದೂ ಉತ್ತರಾಧಿಕಾರ ಕಾಯ್ದೆ ಕಲಂ 14 (1) ರ ಕಾರ್ಯಾಚರಣೆಯ ಮೂಲಕ ಸಂಪೂರ್ಣ ಹಕ್ಕು ಆಗಿದೆ. ಈ ನ್ಯಾಯಾಲಯದ ವಿಷಯ ಮತ್ತು ನ್ಯಾಯಾಧೀಶರ ತೀರ್ಮಾನಗಳಿಗೆ ಸಂಬಂಧಿಸಿದಂತೆ ತೀರ್ಮಾನಗಳ ಸರಣಿಯಲ್ಲಿ ಆತಂಕದ ಪರಿಗಣನೆಯು ನೀಡಿದ ನಂತರ, ನ್ಯಾಯಾಲಯವು ಹೈಕೋರ್ಟ್ನ ತೀರ್ಪು ಸಂಪೂರ್ಣವಾಗಿ ಕಾನೂನಿಗೆ ಅನುಗುಣವಾಗಿರುತ್ತದೆ ಮತ್ತು ಯಾವುದೇ ಹಸ್ತಕ್ಷೇಪದ ಅಗತ್ಯವಿಲ್ಲ ಎಂದು ನ್ಯಾಯಾಲಯವು ತೀರ್ಮಾನಿಸಿತು.

ವಿಲ್ ಅಥವಾ ಉಡುಗೊರೆ ಅಥವಾ ಯಾವುದೇ ಇತರ ದಸ್ತಾವೇಜುಗಳ ಮೂಲಕ "ಹಿಂದೂ ಸ್ತ್ರೀಯೊಬ್ಬಳಿಗೆ" ಜೀವನ ಆಸಕ್ತಿಯನ್ನು "ಮಾತ್ರ ನೀಡಿದ್ದರೆ, 1956 ರ ಹಿಂದು ಉತ್ತರಾಧಿಕಾರ ಕಾಯ್ದೆ, ಸೆಕ್ಷನ್ 14 ರಲ್ಲಿ ಉಲ್ಲೇಖಿಸಲಾಗಿರುವ ಈ ಹಕ್ಕುಗಳು ಕಾನೂನಿನಲ್ಲಿ ನಿರ್ದಿಷ್ಟ ಆಕಾರ ಧರಿಸದು. 1956 ರ ಕಲಂ 14 (1) ರ ನಿಬಂಧನೆಗಳ ಪ್ರಕಾರ ಆಸ್ತಿಗೆ ಸಂಪೂರ್ಣ ಮಾಲೀಕತ್ವವನ್ನು ಪಡೆಯುವ ಪರಿಣಾಮವಾಗಿ ನಿಬಂಧನೆಗಳನ್ನು ಅರ್ಥೈಸಿಕೊಳ್ಳುವ ಮೂಲಕ ಸಂಪೂರ್ಣ ಮಾಲೀಕತ್ವ ಸ್ಫಟಿಕವಾಗಿ ಸಲ್ಲುವುದಿಲ್ಲ, ಏಕೆಂದರೆ ಕಲಂ 14 (2) ನ ನಿಬಂಧನೆಗಳು ಮತ್ತು 1956 ರ ಕಲಂ 30 ನೇ ಪ್ರಕರಣವು ಉಲ್ಲಂಘಿಸಿದಂತೆ ಆಗಿ ಪರಿಣಮಿಸುತ್ತದೆ. ಕಲಂ 14 (2) ಉಪವಿಭಾಗದಲ್ಲಿ 14 (1) ರಲ್ಲಿ ನೀಡಲಾದ ನಿಯಮಕ್ಕೆ ಒಂದು ವಿನಾಯಿತಿಯನ್ನು ಹೊರಹಾಕುತ್ತದೆ, ಇದು ಒಂದು ವಿಲ್ ಅಥವಾ ಉಡುಗೊರೆಯಿಂದ

ಹಿಂದೂ ಸ್ತ್ರೀಯು ಆಸ್ತಿಯನ್ನು ಪಡೆದರೆ, ಅದು ಅವರಿಗೆ "ಜೀವನ ಆಸಕ್ತಿಯನ್ನು" ಮಾತ್ರ ನೀಡಿದ್ದರೆ, 1956 ರ ಕಾಯ್ದೆ ಪ್ರಾರಂಭವಾದರೂ ಸಹ ಇದೇ ರೀತಿ ಉಳಿಯುತ್ತದೆ, ಮತ್ತು ಅಂತಹ ಹಿಂದು ಮಹಿಳೆಗೆ ಸಂಪೂರ್ಣ ಮಾಲೀಕತ್ವ ಪಡೆಯಲು ಸಾಧ್ಯವಾಗುವುದಿಲ್ಲ.[1]

ಕಲಂ 14 ಅನ್ನು ತುಳಸಮ್ಮ ಕೇಸಿನಲ್ಲಿ [2] ಸಮಗ್ರವಾಗಿ ವಿವರಿಸಿದ್ದಾರೆ. (1) "ಹಿಂದೂ ಸ್ತ್ರೀಯರ ನಿರ್ವಹಣೆಯ ಹಕ್ಕು ಖಾಲಿ ಔಪಚಾರಿಕತೆ ಅಥವಾ ಅನುಗ್ರಹ ಮತ್ತು ಔದಾರ್ಯದ ವಿಷಯವೆಂದು ಒಪ್ಪಿಕೊಳ್ಳುವ ಭ್ರಾಂತಿಯ ಹಕ್ಕು ಅಲ್ಲ, ಆದರೆ ಇದು ಗಂಡ ಮತ್ತು ಹೆಂಡತಿಯ ನಡುವಿನ ಧಾರ್ಮಿಕ ಸಂಬಂಧದಿಂದ ಹರಿಯುವ ಮತ್ತು ಗುರುತಿಸಲ್ಪಟ್ಟ ಆಸ್ತಿಯ ವಿರುದ್ಧ ಸ್ಪಷ್ಟವಾದ ಹಕ್ಕಾಗಿದೆ ಮತ್ತು ಶುದ್ಧ ಶಾಸ್ತ್ರೀಯ ಹಿಂದೂ ಕಾನೂನಿನಿಂದ ಆದೇಶಿಸಲ್ಪಟ್ಟಿದೆ ಮತ್ತು ಹಿಂದಿನ ಹಿಂದೂ ನ್ಯಾಯಶಾಸ್ತ್ರಜ್ಞರು ಯಜ್ಞವಲ್ಕ್ಯದಿಂದ ಮನು ವರೆಗೂ ಬಲವಾಗಿ ಒತ್ತಿಹೇಳಿದ್ದಾರೆ. ಅಂತಹ ತೂಕವು ಆಸ್ತಿಯ ಹಕ್ಕಾಗಿರದೆ ಇರಬಹುದು ಆದರೆ ಇದು ಆಸ್ತಿಯ ವಿರುದ್ಧದ ಹಕ್ಕಾಗಿದೆ ಮತ್ತು ಗಂಡನಿಗೆ ತನ್ನ ಹೆಂಡತಿಯನ್ನು ಕಾಪಾಡಿಕೊಳ್ಳಲು ವೈಯಕ್ತಿಕ ಬಾಧ್ಯತೆ ಇದೆ ಮತ್ತು ಅವನು ಅಥವಾ ಕುಟುಂಬಕ್ಕೆ ಆಸ್ತಿ ಇದ್ದರೆ, ಅಲ್ಲಿಂದ ನಿರ್ವಹಿಸಲು ಹೆಣ್ಣಿಗೆ ಕಾನೂನುಬದ್ಧ ಹಕ್ಕಿದೆ. ಹೆಣ್ಣಿನ ನಿರ್ವಹಣೆಗಾಗಿ ಹೊಣೆಯನ್ನು ರಚಿಸಿದರೆ, ಹೇಳಿದ ಹಕ್ಕನ್ನು ಕಾನೂನುಬದ್ಧವಾಗಿ ಜಾರಿಗೊಳಿಸಬಹುದು. ಯಾವುದೇ ದರದಲ್ಲಿ, ಹೊಣೆಯಿಲ್ಲದೆಯೂ ಸಹ ನಿರ್ವಹಣೆಯ ಹಕ್ಕು ಮೊದಲೇ ಅಸ್ತಿತ್ವದಲ್ಲಿರುವ ಹಕ್ಕಾಗಿದೆ, ಆದ್ದರಿಂದ ಅಂತಹ ಹಕ್ಕನ್ನು ಘೋಷಿಸುವ ಅಥವಾ ಗುರುತಿಸುವ ಯಾವುದೇ ವರ್ಗಾವಣೆಯು ಯಾವುದೇ ಹೊಸ

---

[1] ಶಿವ್ದೇವ್ ಕೌರ್ ವಿ. ಗ್ರೇವಲ್ – 2013 (4) ಎಸ್.ಸಿ.ಸಿ 636

[2] ತುಳಸಮ್ಮ ವಿ. ಶೇಷ ರೆಡ್ಡಿ – ಎ.ಐ.ಆರ್ 1977 ಎಸ್.ಸಿ 1944

ಮಾಲೀಕತ್ವವನ್ನು ನೀಡುವುದಿಲ್ಲ ಆದರೆ ಮೊದಲೇ ಅಸ್ತಿತ್ವದಲ್ಲಿರುವ ಹಕ್ಕುಗಳನ್ನು ಅನುಮೋದಿಸುತ್ತದೆ ಅಥವಾ ದೃಡಪಡಿಸುತ್ತದೆ."

(2). "ಕಲಂ 14 (1) ಮತ್ತು ಅದರ ವಿವರಣೆಯನ್ನು ವಿಸ್ತಾರವಾದ ಸಂಭವನೀಯ ಪದಗಳಲ್ಲಿ ಅಳವಡಿಸಲಾಗಿದೆ ಮತ್ತು 1956 ರ ಕಾಯ್ದೆ ಉದ್ದೇಶವನ್ನು ಮುಂದಕ್ಕೆ ತರಲು ಹೆಂಗಸರ ಪರವಾಗಿ ಉದಾರವಾಗಿ ಸಂಯೋಜಿಸಲಾಗಿದೆ ಮತ್ತು ಈ ಮೂಲಕ ಸಾಮಾಜಿಕ–ಆರ್ಥಿಕ ಅವಶ್ಯಕತೆಗಳನ್ನು ಉತ್ತೇಜಿಸಲು ದೀರ್ಘಕಾಲದ ಅಗತ್ಯದ ಶಾಸನ ಸಾದಿಸಿದೆ."

(3). "ಕಲಂ 14(2) ಒಂದು ಷರತ್ತು ಸ್ವರೂಪದಲ್ಲಿದೆ ಮತ್ತು ಕಲಂ 14(1) ರ ಕಾರ್ಯಚಟುವಟಿಕೆಗೆ ಮಧ್ಯ ಬರದೆ ತನ್ನದೇ ಆದ ಕ್ಷೇತ್ರವನ್ನು ಹೊಂದಿದೆ. ಮುಖ್ಯ ನಿಬಂಧನೆಯ ಪರಿಣಾಮವನ್ನು ಅಥವಾ ಕಲಂ 14(1) ರ ಮೂಲಕ ನೀಡುವ ರಕ್ಷಣೆ ಅಥವಾ ಒಂದು ರೀತಿಯಲ್ಲಿ ಮುಖ್ಯವಾದ ನಿಬಂಧನೆಯೊಂದಿಗೆ ಸಂಪೂರ್ಣವಾಗಿ ಅಸಮಂಜಸವಾಗುವುದಕ್ಕಾಗಿ ಈ ನಿಯಮವನ್ನು ರೀತಿಯಲ್ಲಿ ಸಂಯೋಜಿಸಬಾರದು."

(4). "ಡಿಕ್ರಿ, ಅವಾರ್ಡಗಳು, ಉಡುಗೊರೆಗಳು ಇತ್ಯಾದಿಗಳಿಗೆ ಸೆಕ್ಷನ್ 14(2) ಅನ್ವಯಿಸುತ್ತದೆ. ಇದು ಮೊದಲ ಬಾರಿಗೆ ಮಹಿಳೆಯರಿಗೆ ಸ್ವತಂತ್ರವಾಗಿ ಮತ್ತು ಹೊಸ ಮಾಲೀಕತ್ವವನ್ನು ರಚಿಸುತ್ತದೆ ಮತ್ತು ಪ್ರಸ್ತುತವಿರುವ ಹಕ್ಕುಗಳನ್ನು ದೃಢೀಕರಿಸಲು, ಸಮರ್ಥಿಸಲು, ಘೋಷಿಸಲು ಅಥವಾ ಗುರುತಿಸಲು ಕೇಳುವ ಸಾಧನವು ಯಾವುದೇ ಅನ್ವಯಿಸುವಿಕೆಯನ್ನು ಹೊಂದಿಲ್ಲ. ಅಂತಹ ಸಂದರ್ಭಗಳಲ್ಲಿ ಮಹಿಳೆಯ ಪರವಾಗಿ ನಿರ್ಬಂಧಿತ ಎಸ್ಟೇಟ್ ಕಾನೂನುಬದ್ಧವಾಗಿ ಅನುಮತಿಸಲ್ಪಡುತ್ತದೆ ಮತ್ತು ಸೆಕ್ಷನ್ 14 (1) ಈ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವುದಿಲ್ಲ. ಆದಾಗ್ಯೂ, ಒಂದು ದಾಖಲೆ ಕೇವಲ ಮುಂಚಿತವಾಗಿ ಅಸ್ತಿತ್ವದಲ್ಲಿರುವ ಹಕ್ಕನ್ನು ಘೋಷಿಸಿದರೆ ಅಥವಾ ಗುರುತಿಸಿದರೆ, ಉದಾಹರಣೆಗೆ ಪೋಷಣೆ ಅಥವಾ ವಿಭಾಗದ

ಹಕ್ಕನ್ನು ಅಥವಾ ಸ್ತ್ರೀಗೆ ಅರ್ಹವಾಗುವಂತೆ ಹಂಚಿಕೊಳ್ಳುವುದು, ಉಪ-ವಿಭಾಗವು (ಕಲಂ 14(2) ) ಸಂಪೂರ್ಣವಾಗಿ ಅನ್ವಯಿಸುವುದಿಲ್ಲ ಮತ್ತು ಸ್ತ್ರೀಯರ ಸೀಮಿತ ಆಸಕ್ತಿಯು ಸ್ವಯಂಚಾಲಿತವಾಗಿ ವಿಸ್ತರಿಸಲ್ಪಡುತ್ತದೆ ವಿಭಾಗ 14 (1) ರ ಶಕ್ತಿಯಿಂದ ಸಂಪೂರ್ಣವಾದ ಒಂದು ಭಾಗವಾಗಿ ಮತ್ತು ದಾಖಲೆಯ ಅಡಿಯಲ್ಲಿ ಯಾವುದೇ ನಿರ್ಬಂಧವನ್ನು ನಿರ್ಲಕ್ಷಿಸುವುದು. ಆದ್ದರಿಂದ ಆಸ್ತಿಯನ್ನು ವಿಭಾಗ ಅಥವಾ ಪೋಷಣೆಗೆ ಬದಲಾಗಿ ಸ್ತ್ರೀಗೆ ವರ್ಗಾಯಿಸಲು ಅಥವಾ ವರ್ಗಾಯಿಸಿದಾಗ, ದಾಖಲೆಯನ್ನು ಉಪ-ವಿಭಾಗದ 14 (2) ವ್ಯಾಪ್ತಿಯಿಂದ ಹೊರಹಾಕಲಾಗುತ್ತದೆ ಮತ್ತು ಯಾವುದೇ ನಿರ್ಬಂಧಗಳನ್ನು ವರ್ಗಾಯಿತರ ಮೇಲೆ ಹೊಂದಿದ್ದರೂ ಕಲಂ 14 (1) ಅನ್ವಯಿಸುತ್ತದೆ."

(5). "ಸೆಕ್ಷನ್ 14 (1) ಕ್ಕೆ ವಿವರಣೆಯಲ್ಲಿ ಸ್ಪಷ್ಟವಾಗಿ ವಿವರಿಸುವುದರಲ್ಲಿ, "ವಿಭಾಗದಲ್ಲಿ ಮಹಿಳಾ ಹಿಂದೂನಿಂದ ಸ್ವಾಧೀನಪಡಿಸಿಕೊಂಡಿರುವ ಆಸ್ತಿ", ಅಥವ "ನಿರ್ವಹಣೆಯ ಬದಲಿಗೆ", ಅಥವ "ನಿರ್ವಹಣೆಯ ಬಾಕಿ ಅಥವಾ" ಇತರೆ ಸ್ಪಷ್ಟವಾಗಿ 14(2) ಈ ಗುಂಪುಗಳಿಗೆ ಅನ್ವಯಿಸುವುದಿಲ್ಲ ಅವು 14(2) ರ ಕಾರ್ಯಾಚರಣೆಯಿಂದ ಹೊರಬರುತ್ತದೆ."

(6). "ವಿಭಾಗ 14 (1) ರಲ್ಲಿ ಶಾಸಕಾಂಗದ ಮೂಲಕ "ಹೊಂದಿರುವ" ಪದಗಳು ವಿಶಾಲವಾದ ಸಂಭವನೀಯ ವೈಶಾಲ್ಯ ಮತ್ತು ಮಾಲೀಕರು ನಿಜವಾದ ಅಥವಾ ದೈಹಿಕ ಒಡೆತನದಲ್ಲಿಲ್ಲದಿದ್ದರೂ ಆಸ್ತಿಯನ್ನು ಹೊಂದಿದ ಸ್ಥಿತಿಯನ್ನು ಒಳಗೊಂಡಿರುತ್ತದೆ. ಹೀಗಾಗಿ, 1956 ಕಾಯ್ದೆ ಅಂಗೀಕರಿಸಲ್ಪಟ್ಟಿದ್ದಕ್ಕಿಂತ ಮುಂಚಿತವಾಗಿ ಅಥವಾ ಆ ಸಮಯದಲ್ಲಿ ಒಂದು ವಿಧವೆಗೆ ಪ್ರಾರ್ಥಮಿಕ ಡಿಕ್ರಿಯಲ್ಲಿ ಆಸ್ತಿಯಲ್ಲಿನ ಪಾಲನ್ನು ಪಡೆದಿದ್ದು, ಆದರೆ ಅಂತಿಮ ತೀರ್ಪಿನಡಿಯಲ್ಲಿ ನಿಜವಾದ ಸ್ವಾಧೀನವನ್ನು ನೀಡಲಾಗದಿದ್ದರೆ, ಆಸ್ತಿಯನ್ನು ಇಲ್ಲಿ ಆಕೆ ಮತ್ತು ಅವಳ ಮೂಲಕ ಸ್ವಾಧೀನದಲ್ಲಿ ಇದ್ದಾಳೆಂಬ ಪರಿಭಾವನೆ ಇದ್ದು ಮತ್ತು ಸೆಕ್ಷನ್ 14 (1) ರ

ಶಕ್ತಿಯಿಂದ ಅವಳು ಆಸ್ತಿಯಲ್ಲಿ ಸಂಪೂರ್ಣ ಆಸಕ್ತಿಯನ್ನು ಪಡೆಯುತ್ತಾಳೆ. ಆದಾಗ್ಯೂ, ವಿಧವೆ ಹೊಂದಿರುವುದು ಸರಿಯಾದ ಅಥವಾ ಮಾಲೀಕತ್ವಕ್ಕೆ ಹಕ್ಕುಗಳ ಕೆಲವು ಕುರುಹುಗಳ ಅಡಿಯಲ್ಲಿರಬೇಕು, ಏಕೆಂದರೆ ಯಾವುದೇ ಹಕ್ಕು ಅಥವಾ ಮಾಲೀಕತ್ವ ಇಲ್ಲದೆ ಯಾವುದೇ ದರ್ಜೆ ಶ್ರೇಣಿಯ ಅತಿಕ್ರಮಣಕಾರರನ್ನು ಹೊಂದಿರುವುದೆಂದು ಸೆಕ್ಷನ್ 14 ಪರಿಗಣಿಸುವುದಿಲ್ಲ."

(7). "ಕಲಂ 14 (2) ನಲ್ಲಿ ಬಳಸಲಾದ "ನಿರ್ಬಂಧಿತ ಎಸ್ಟೇಟ್" ಪದಗಳು ಸೆಕ್ಷನ್ 14 (1) ರಲ್ಲಿ ಸೂಚಿಸಿರುವ "ಸೀಮಿತ ಆಸಕ್ತಿ" ಗಿಂತ ಹೆಚ್ಚು ವ್ಯಾಪಕವಾಗಿವೆ ಮತ್ತು ಅವುಗಳಲ್ಲಿ ಸೀಮಿತ ಆಸಕ್ತಿ ಮಾತ್ರವಲ್ಲದೇ ವರ್ಗಾಯಿತರಲ್ಲಿ ಇರಿಸಬಹುದಾದ ಯಾವುದೇ ರೀತಿಯ ಮಿತಿಯನ್ನೂ ಒಳಗೊಳ್ಳುತ್ತದೆ."

**ಆಸ್ತಿ ಯಾರ ಹೆಸರಿನಲ್ಲಿ ಖರೀದಿಸಲಾಗಿರುತ್ತದೋ ಅದು ಅವರ ಸ್ವಂತ ಆಸ್ತಿ ಎಂದು ಕಾನೂನು ಪರಿಭಾವಿಸುತ್ತದೆ**

ಆಸ್ತಿಯನ್ನು ಖರೀದಿಸುವ ವ್ಯಕ್ತಿಯು ಅದರ ಮಾಲೀಕನೆಂದು ಕಾನೂನಿನಲ್ಲಿ ಪರಿಭಾವಿಸಲಾಗಿದೆ. ಈ ಊಹೆಯನ್ನು ಯಶಸ್ವಿಯಾಗಿ ಪ್ರತಿಪಾದನೆ ಮಾಡುವ ಮೂಲಕ ಸ್ಥಳಾಂತರಿಸಬಹುದು ಮತ್ತು ಕೆಲವು ಕಾರಣದಿಂದ ಇನ್ನೊಂದು ವ್ಯಕ್ತಿಯ ಹೆಸರಿನಲ್ಲಿ ಈ ದಾಖಲೆಯನ್ನು ಬೆನಾಮಿ ತೆಗೆದುಕೊಳ್ಳಲಾಗಿದೆ ಎಂದು ಸಾಬೀತುಪಡಿಸಬಹುದು ಮತ್ತು ದಾಖಲೆಯಲ್ಲಿ ಹೆಸರು ಕಾಣಿಸುವ ವ್ಯಕ್ತಿ ನಿಜವಾದ ಮಾಲೀಕನಲ್ಲ, ಆದರೆ ಕೇವಲ ಒಂದು ಬೇನಾಮಿ ಮಾತ್ರ. ದಾಖಲಾದ ಮಾಲೀಕರು ಒಂದು ಬೇನಾಮಿ ಹೊಂದಿದವರು ಎಂದು ಪ್ರತಿಪಾದಿಸುವ ವ್ಯಕ್ತಿಯ ಮೇಲೆ ಭಾರಿ ರುಜುವಾತು ಹೊರೆ ಇರುತ್ತದೆ.

ಕೇಸೊಂದರ ವಿವರ ಹೀಗಿದೆ, "ಪಾರ್ಟಿಗಳ ಉದ್ದೇಶವು ಬಿನಾಮಿ ವಹಿವಾಟಿನ ಸಾರವಾಗಿದೆ ಮತ್ತು ಬೆನಾಮಿ ಸಿದ್ಧಾಂತವನ್ನು ಪ್ರತಿಪಾದಿಸುವ

ವ್ಯಕ್ತಿ ಮೂಲಕ ಹಣವನ್ನು ಒದಗಿಸಲಾಗಿದೆ ಎಂದು ಅದು ಚೆನ್ನಾಗಿ ನೆಲೆಗೊಂಡಿರುತ್ತದೆ. ಮೂಲ ವಾದಿ ರಾಮಾಯೀ ಅಮ್ಮಾಲ್ ಹೆಸರಿನಲ್ಲಿ ಆಸ್ತಿಯನ್ನು ಖರೀದಿಸಲು ಯಾವುದೇ ಸಮರ್ಥನೆಯನ್ನು ಹೊಂದಿಲ್ಲ ಎಂದು ಸಾಕ್ಷ್ಯವು ಸ್ಪಷ್ಟವಾಗಿ ತೋರಿಸುತ್ತದೆ. ಅವನು ನೀಡಿದ ಕಾರಣವು ಸ್ವೀಕಾರಾರ್ಹವಲ್ಲ. ಹಣದ ಮೂಲವು ವಾದಿಯಿಂದ ಎಂದು ಪತ್ತೆಯಾಗಿಲ್ಲ. ದಾವೆಯಲ್ಲಿ ಹೆಸರಿಸಿದ ವ್ಯಕ್ತಿಗಳನ್ನು ಅಥವಾ ಬೇರೆ ಯಾರನ್ನೂ ಸಾಕ್ಷಿಯಾಗಿ ಪರೀಕ್ಷಿಸಲ್ಪಟ್ಟಿಲ್ಲ. ಸಂಬಂಧಿತ ಸಾಕ್ಷಿಗಳನ್ನು ಪರೀಕ್ಷಿಸಲು ವಾದಿ ವಿಫಲಗೊಂಡಾಗ ಆತನ ಪ್ರಕರಣವು ಸಂಪೂರ್ಣವಾಗಿ ನಾಶಗೊಳ್ಳುತ್ತದೆ. ಭೂಮಿ ಖರೀದಿಸಲು ತಾನು ಹಣವನ್ನು ಒದಗಿಸಿದ್ದನೆಂದು ಮತ್ತು ಅವರ ಹೆಂಡತಿಯ ಹೆಸರಿನಲ್ಲಿ ಆಸ್ತಿ ಬೇನಾಮಿ ಖರೀದಿಸಿದ ಕಾರಣಗಳು ಏನು ಎಂದು ಮೂಲ ವಾದಿಯು ಸಾಬೀತುಪಡಿಸಲು ವಿಫಲವಾದ ಕಾರಣ, ಹೈಕೋರ್ಟ್ ರಾಮಾಯೀ ಅಮ್ಮಲ್ ಆಕೆಯ ಪತಿ ಮಲಯ ಗೌಂಡರ್ ಪರವಾಗಿ ಆಸ್ತಿ ಬೇನಾಮಿ ಹಿಡಿದಿಲ್ಲ ಎಂದು ಸರಿಯಾದ ತೀರ್ಮಾನಕ್ಕೆ ಬಂದಿದ್ದಾರೆ.[1]

ಕಲಂ 14 ರಲ್ಲಿ ಉಪಯೋಗಿಸಿರುವ "ಸ್ವಾಧೀನದಲ್ಲಿರುವ" ಎಂಬ ಪದಾರ್ಥವನ್ನು ವಿಸ್ತಾರವಾದ ಅರ್ಥದಲ್ಲಿ ವ್ಯಾಖ್ಯಾನಿಸಲಾಗಿದೆ. ಕರ್ನಾಟಕ ಹೈಕೋರ್ಟ್[2] ಹಲವು ತೀರ್ಪುಗಳನ್ನು ಉಲ್ಲೇಕಿಸಿ ಈ ರೀತಿ ಕಾನೂನು ಅಂಶವನ್ನು ಉಚ್ಚರಿಸಿರುತ್ತದೆ. " ಆದ್ದರಿಂದ, ಮೇಲೆ ತಿಳಿಸಿದ ತೀರ್ಪುಗಳಿಂದ ಸ್ಪಷ್ಟವಾಗುವುದೇನೆಂದರೆ, ಒಂದು ವೇಳೆ ಸ್ತ್ರೀಯರ ಹೆಸರಿನಲ್ಲಿ ಆಸ್ತಿಯನ್ನು ಬದಲಿಸಲು ಸಮರ್ಥ ಅಧಿಕಾರಿಗಳಿಗೆ ಪತ್ರದ ಮೂಲಕ ಅಥವಾ ವರದಿ ಮೂಲಕ ಯಾವುದೇ ವಿಧಾನದಲ್ಲಿ ರೂಪಿಸಿದ್ದರೆ, ಅದು ಸ್ತ್ರೀಯರಿಗೆ ಹೇಳುವುದಾದರೆ ಕಾನೂನುಬದ್ಧವಾಗಿ

[1] ವಲ್ಲಿಯಮ್ಮಾಳ್ ವಿ. ಸುಬ್ರಮಣಿಯಮ್ – 2004 (7) ಎಸ್.ಸಿ.ಸಿ 233

[2] ದೌಲತ್ರಾವ್ ರಾಮಚಂದ್ರ ವಿ. ಆನಂದರಾವ್ – 2018 (1) ಕೆ.ಸಿ.ಸಿ.ಆರ್ 893

ತನ್ನ ಪೂರ್ವ ಅಸ್ತಿತ್ವದಲ್ಲಿರುವ ಆಸ್ತಿ ಹಕ್ಕು ಗುರುತಿಸಿ, ಹೊಂದಿರುವವರು ಪ್ರವೇಶಿಸಿದರೆಂದು ಹೇಳಲಾಗುತ್ತದೆ. ಹೇಳಲಾದ ಸೆಕ್ಷನ್ ನಲ್ಲಿ 'ಹೊಂದಿರುವವರು' (ಸ್ವಾಧೀನದಲ್ಲಿರುವವರು) ಎಂಬ ಪದವನ್ನು ಆಕರ್ಷಿಸುವ ಸಲುವಾಗಿ ಮತ್ತು ಈ ಹಕ್ಕನ್ನು ಜಾರಿಗೆ ತರಲು ಮೊದಲು ನೀಡಲಾಗಿದ್ದರೆ ಮತ್ತು ತಿದ್ದುಪಡಿ ಕಾಯಿದೆಯು ಜಾರಿಗೆ ಬರುವ ದಿನಾಂಕದಂದು ಸ್ವಾಮ್ಯದಲ್ಲಿ ಮುಂದುವರಿದರೆ, ನಂತರ ಆಸ್ತಿಯು ಖಂಡಿತವಾಗಿಯೂ ಮಹಿಳೆ ಸಂಪೂರ್ಣ ಆಸ್ತಿಯಾಗಿ ಅರಳುತ್ತದೆ."

**ಕಲಂ 8 ರ ಕೆಳಗೆ ಆರ್ಜಿಸಿದ್ದು ಸ್ವಂತ ಆಗುತ್ತೆ**

ಹಿಂದು ಉತ್ತರಾಧಿಕಾರತ್ವ ಕಾಯ್ದೆ ಕಲಂ 8 ರ ಕೆಳಗೆ ಸ್ವಂತ ಆಸ್ತಿಯನ್ನು ನಿರ್ದರಿಸುವಾಗ ಈ ಮೇಲ್ಕಂಡ ಸಿದ್ದಾಂತ ಗಮನದಲ್ಲಿಟ್ಟುಕೊಳ್ಳಬೇಕು. ಕಲಂ 6 ರ ಕೆಳಗೆ ನೋಷನಲ್ ಪಾರ್ಟೀಷನ್ ಆದಾಗ ಕೋಪಾರ್ಸನರ್ ಬಾಗಾಂಶ ಕಲಂ 8 ರ ಕೆಳಗೆ ಹಂಚಿಕೆಯಾಗುತ್ತದೆ. ಇತರೆ ಕೋಪಾರ್ಸನರ್ ಗಳು ತಮ್ಮ ಬಾಗಾಂಶವನ್ನು ಕಲಂ 6 ರ ರೀತಿಯಲ್ಲಿ ಪಡೆಯುತ್ತಾರೆ. ಅಂತಹ ಕಲಂ 6 ರ ರೀತಿಯಲ್ಲಿ ಪಡೆದದ್ದು ಆ ಕೋಪಾರ್ಸನರ್ ತನ್ನ ಮಕ್ಕಳ ಜೊತೆಯಲ್ಲಿ ಪ್ರತ್ಯೇಕ ಕೋಪಾರ್ಸನರಿಯಾಗಿ ಕಾನೂನು ರೀತ್ಯ ಸ್ಥಾಪಿತವಾಗುತ್ತದೆ. ಇದು 2005 ರ ತಿದ್ದುಪಡಿಯಾಗುವವರೆಗೆ ಇದ್ದ ಪರಿಸ್ಥಿತಿ. ಆದರೆ 2005 ರ ನಂತರ ಕೋಪಾರ್ಸನರ್ ಸತ್ತಾಗ ಅವನ ಹಿಸ್ಸೆ ಕಡ್ಡಾಯ ಪರಿಭಾವನೆಯ ರೀತ್ಯ ಬಾಗವಾಗುತ್ತದೆ. ಸತ್ತಂತಹ ಕೋಪಾರ್ಸನರ್ ಮತ್ತು ಅವನ ವಾರಸ್ಸುದಾರರಿಗೆ ಆ ಕೋಪಾರ್ಸನರಿ ಅಂತ್ಯವಾಗುತ್ತದೆ. ಕೋಪಾರ್ಸನರ್ ಸತ್ತ ದಿನಾಂಕದಲ್ಲಿ ಆ ಕೋಪಾರ್ಸನರಿ ಸ್ವತ್ತುಗಳು ವಿಭಾಗವಾಗಿದೆ ಎಂದು ಪರಿಗಣಿಸಬೇಕಿರುತ್ತದೆ. ಅಲ್ಲಿಗೆ ಎಲ್ಲಾ ಕೋಪಾರ್ಸನರ್ಗಳ ತಮ್ಮ ತಮ್ಮ ಹಿಸ್ಸೆಯು ಅಂದೇ ನಿರ್ದಾರವಾಗಿ ಬಿಡುತ್ತದೆ. ಅದರ ನಂತರ ಕೋಪಾರ್ಸನರಿ ಮುಂದುವರಿಯುವುದು ಬಿಡುವುದು

ಕೋಪಾರ್ಸನರ್ಗಳಿಗೆ ಬಿಟ್ಟಿದ್ದು. ಕೋಪಾರ್ಸನರಿ ಮುಂದುವರಿಯಲು ಆ ವಿಭಾಗವಾದ ದಿನಾಂಕದಲ್ಲಿ ಭಾಗಾಂಶವನ್ನು ಪಡೆದ ಕೋಪಾರ್ಸನರ್ಗೆ ಮಗ ಅಥವ ಮಗಳು ಜೀವಂತ ಇದ್ದರೆ ಮಾತ್ರ ಕೋಪಾರ್ಸನರಿ ಆಗುತ್ತದೆ. ಇಲ್ಲವೆ ಆ ಸ್ವತ್ತು ಆತನ ಸ್ವಂತ ಸ್ವತ್ತು ಆಗುತ್ತದೆ. ಮುಂದೆ ಮಗು ಹುಟ್ಟಿದಾಗ ಕೋಪಾರ್ಸನರಿ ಉದಯವಾಗುತ್ತದೆ. ಹಿಂದು ಉತ್ತರಾಧಿಕಾರತ್ವ ಕಾಯ್ದೆಯಲ್ಲಿ ಕೋಪಾರ್ಸನರಿ ಎಂಬ ಹಿಂದು ಅನಾಧಿಕಾಲದ ಸಿದ್ಧಾಂತದ ಮೂಲವನ್ನು ಬದಲಿಸಲಾಗಿಲ್ಲ, (ಕೋಪಾರ್ಸನರಿ ಸ್ವತ್ತು ಎಂದರೆ ಪೂರ್ವಜರ ಅಥವ ಪಿತ್ರಾರ್ಜಿತ ಸ್ವತ್ತು ಎಂದು ಸಮಾನಾಂತರವಾಗಿ ಬಳಕೆಯಲ್ಲಿದೆ) ಅಂದರೆ ಕೋಪಾರ್ಸನರಿ ಉದಯಕ್ಕೆ ಪೂರ್ವಜರಿಂದ ಅಂದರೆ ತಂದೆಯಿಂದ ಅಥವ ತಾತನಿಂದ ಅಥವ ಮುತ್ತಾತನಿಂದ ಪಡೆದ ಆಸ್ತಿ ಆತನ ಮಗನ, ಮೊಮ್ಮಗನ, ಮುಮ್ಮೊಗನ ಜೊತೆಯಲ್ಲಿ ಕೋಪಾರ್ಸನರಿ ಆಸ್ತಿಯಾಗಿ ಅಥವ ಪುರ್ವಜರ ಆಸ್ತಿಯಾಗಿ ಹೊಂದುತ್ತಾನೆ ಎಂಬುದು ಹಿಂದಿನಿಂದ ಬಂದಂತಾ ಕಾನೂನು ಸಿದ್ಧಾಂತ. ಇಲ್ಲಿ ಆಗಿರುವ ಕಾನೂನು ಬದಲಾವಣೆ ಗಮನಿಸಿ.

1. ಹೆಣ್ಣು ಮಕ್ಕಳಿಗೆ ಕೋಪಾರ್ಸನರ್ ಎಂದು ಪಟ್ಟ ಕೊಡಲು 2005 ರ ಕಾಯ್ದೆ ಜಾರಿ ದಿನಾಂಕದಲ್ಲಿ ಆಕೆಯ ತಂದೆ ಕೋಪಾರ್ಸನರ್ ಆಗಿರಬೇಕು ಆತ ಜೀವಂತ ಇರಬೇಕು, ಆಕೆ ಜೀವಂತ ಇರಬೇಕು ಎಂಬ ನಿಯಮ ವಿಧಿಸಲಾಯಿತು.

2. ಹೆಣ್ಣು ಮಕ್ಕಳು ಕೋಪಾರ್ಸನರಿ ನಿಬ್ಬಂದನೆಗಳಿಗೆ ಒಳಪಟ್ಟು ಆಸ್ತಿ ಪಡೆಯುತ್ತಾರೆ ಎಂದು ನಿಯಮ ವಿಧಿಸಲಾಯಿತು.

3. ಹಿಂದು ಮಿತಾಕ್ಷರ ಕೋಪಾರ್ಸನರ್ ಅರ್ಥದಲ್ಲಿ ಕೋಪಾರ್ಸನರ್ ಮಗಳನ್ನು ಸೇರಿಸಲಾಯಿತು.

4. ಕೋಪಾರ್ಸನರಿ ಎನ್ನುವುದು 2005 ರ ನಂತರ ತಂದೆಯಿಂದ ಮಾತ್ರವಲ್ಲದೆ ತಾಯಿ, ಅಜ್ಜಿ, ಮುತ್ತಜ್ಜಿ ಯಿಂದ ಆರ್ಜಿಸಿದ ಅದು ತಾಯಿ

ಅಥವ ಅಜ್ಜಿ ಅಥವ ಮುತ್ತಜ್ಜಿ ಕೋಪಾರ್ಸನರಿಯಾಗಿ ಪಡೆದಿದ್ದ ಸ್ವತ್ತಿನಿಂದಲೂ ಪ್ರಾರಂಬವಾಗುತ್ತದೆ.

5. ಹಿಂದೆ ಮಿತಾಕ್ಷರ ಕೋಪಾರ್ಸನರಿಯಲ್ಲಿ ತಂದೆ ಮತ್ತು ಗಂಡು ಮಕ್ಕಳು ಮಾತ್ರ ಹುಟ್ಟುತ್ತಲೇ ಹಕ್ಕುದಾರರಾಗಿ ಹುಟ್ಟುತ್ತಿದ್ದರು. 2005 ರ ನಂತರ ಮಿತಾಕ್ಷರ ಕೋಪಾರ್ಸನರಿ ತಂದೆ ಬದುಕಿದ್ದರೆ ಆತನ ಹೆಣ್ಣು ಮಕ್ಕಳು ಕೋಪಾರ್ಸನರ್ ಆಗಿ ಜನ್ಮತಹ ಹಕ್ಕು ಪಡೆಯುತ್ತಾರೆ. ಅಂತಹ ಹೆಣ್ಣು ಕೋಪಾರ್ಸನರ್ಗೆ ಆಕೆಯ ಮಕ್ಕಳು ಆಕೆಯ ಕೋಪಾರ್ಸನರಿಯಲ್ಲಿ ಬಾಗ ಉಳ್ಳವರಾಗಿ ಜನಿಸುತ್ತಾರೆ.

6. 2005 ರ ನಂತರ ಕೋಪಾರ್ಸನರ್ ಸಾವು ಆದಾಗ ಇಡೀ ಕೋಪಾರ್ಸನರಿ ಸ್ವತ್ತು ವಿಭಾಗವಾಗಿಬಿಡಬೇಕು ಕಾಯ್ದೆಯಲ್ಲಿ 'ಶಲ್' ಎಂಬ ಪದವನ್ನು ಉಪಯೋಗಿಸಿ ಕಡ್ಡಾಯಗೊಳಿಸಿದ್ದಾರೆ. ಅಲ್ಲಿಗೆ ಇಡೀ ಕೋಪಾರ್ಸನರಿ ಅಂತ್ಯವಾಗುತ್ತದೆ. ಇತರೆ ಕೋಪಾರ್ಸನರ್ ಗಳು ಕೋಪಾರ್ಸನರಿಯನ್ನು ಮುಂದುವರಿಸುವುದು ಬಿಡುವುದು ಅವರಿಗೆ ಬಿಟ್ಟದ್ದು.

7. ಆದರೆ ಮಗನಾಗಲೀ ಮಗಳಾಗಲೀ ಕೋಪಾರ್ಸನರಿಯ ತಮ್ಮ ಭಾಗವನ್ನು ಆರ್ಜಿಸಿದ ನಂತರ ಆ ಭಾಗದ ಆಸ್ತಿಗಳು ಮತ್ತೆ ತಮ್ಮ ಮಗಳ ಅಥವ ಮಗನ ಜೊತೆಯಲ್ಲಿ ಕೋಪಾರ್ಸನರಿ ಸ್ವತ್ತನ್ನಾಗಿ ಮುಂದುವರಿಸುತ್ತಾರೆ. ಹಾಗೆ ಮುಂದುವರಿಯುವುದಿಲ್ಲ ಎಂದು ಕಾನೂನಿನಲ್ಲಿ ಎಲ್ಲಿಯೂ ಹೇಳಲಾಗಿಲ್ಲ.

8. ಒಮ್ಮೆ ಭಾಗವಾಗಿ ಪಡೆದ ಮೇಲೆ ವ್ಯಕ್ತಿಯ ಆಸ್ತಿಯಲ್ಲಿ ಹುಟ್ಟಿನಿಂದ ಬಾಗಾಂಶ ಪಡೆಯುವ ವಾರಸ್ಸು ಇಲ್ಲವಾದರೆ ಅದು ಆತನ ಸ್ವಂತ ಆಸ್ತಿಯಾಗುತ್ತದೆ. ಅಂತಹ ಸ್ವಂತ ಆಸ್ತಿ ಆತ ಬಿಟ್ಟು ಸತ್ತಾಗ ಮಾತ್ರ ಕಲಂ 8 ಅನ್ವಯವಾಗುವುದರಿಂದ ಆ ಆಸ್ತಿಯಲ್ಲಿ ಆರ್ಜಿಸಿದ ವಾರಸ್ಸುದಾರರು

ಅದನ್ನು ತಮ್ಮ ಸ್ವಂತ ಆಸ್ತಿಯಂತೆ ಆರ್ಜಿಸುತ್ತಾರೆ. ಅದು ಕೋಪಾರ್ಸನರಿ ಸ್ವತ್ತು ಆಗುವುದಿಲ್ಲ.

9. ಕಲಂ 6 (3) ರ ಕೆಳಗೆ 2005 ರ ನಂತರ ಹಿಂದು ಕೋಪಾರ್ಸನರ್ ಸತ್ತರೆ ಆತನ ಬಾಗದ ಆಸ್ತಿ ವಿಲ್ ಮುಖೇನವಾಗಲೀ ವಿಲ್ ಇಲ್ಲದೆ 6(3) ರಲ್ಲಿ ಕೊಟ್ಟಿರುವಂತೆ ಹಂಚಿಕೆಯಾಗುತ್ತದೆ. ಮಗಳು ಮಗನಂತೆ ಬಾಗಾಂಶ ಪಡೆಯುತ್ತಾಳೆ, ಸತ್ತ ಮಗನ ಅಥವ ಮಗಳ ಬಾಗವು ಅವರ ಮಕ್ಕಳಿಗೆ ಸೇರುತ್ತದೆ. ಅಂತಹ ಸತ್ತ ಮಗನ/ಮಗಳ ಯಾರಾದರೂ ಮಕ್ಕಳು ಸಾವಾಗಿದ್ದಲ್ಲಿ ಅವರ ಮಕ್ಕಳಿಗೆ ಪ್ರಾಪ್ತವಾಗುತ್ತದೆ. ಇಲ್ಲಿ ಸತ್ತಂತಹ ಮಗಳ/ಮೊಮ್ಮಗಳ ಗಂಡನನ್ನು ವಾರಸ್ಸುದಾರಿಕೆಯಲ್ಲಿ ತೋರಿಸಿಲ್ಲ. ಸತ್ತಂತಹ ಮಗನ/ಮೊಮ್ಮಗನ ವಿಧವೆಯನ್ನು ವಾರಸ್ಸುದಾರಿಕೆಯಲ್ಲಿ ತೋರಿಸಿಲ್ಲ. ಅಲ್ಲಿಗೆ ಕೋಪಾರ್ಸನರಿ ಸ್ವತ್ತಿನಲ್ಲಿ ಮಕ್ಕಳು ಮತ್ತು ಮೊಮ್ಮಕಳನ್ನು ಮಾತ್ರ ತೋರಿಸಲಾಗಿದೆ. ಕೋಪಾರ್ಸನರಿಯಲ್ಲಿ ಮಕ್ಕಳು ಮತ್ತು ಮೊಮ್ಮಕ್ಕಳು ಮಾತ್ರ ಬರುತ್ತಾರೆಯಾದರೂ ಅಂತಹ ಮಕ್ಕಳ ಮತ್ತು ಮೊಮ್ಮಕ್ಕಳ ಹಿಸ್ಸೆಯಲ್ಲಿ ಅವರ ವಾರಸ್ಸುದಾರರು ಕಲಂ 8 ರಲ್ಲಿ ಹಿಸ್ಸೆ ಪಡೆಯುತ್ತಾರೆ ಎನ್ನುವುದಕ್ಕೆ ಕಲಂ 6(3) ರಲ್ಲಿ ಟೆಸ್ಟಮೆಂಟರಿ ಅಥವ ಇಂಟೆಸ್ಟೇಟ್ (ವಿಲ್ ಮುಖೇನ ಅಥವ ವಿಲ್ ರಹಿತ) ರೀತಿಯಲ್ಲಿ ಹಂಚಿಕೆಯಾಗುತ್ತದೆ ಎಂದು ಹೇಳಿದ ನಂತರ ಮಕ್ಕಳು ಮೊಮ್ಮಕ್ಕಳ ಬಗ್ಗೆ ಹೇಳಿರುವುದರಿಂದ ಇಂಟೆಸ್ಟೇಟ್ (ವಿಲ್ ರಾಹಿತ್ಯ) ಉತ್ತರಾಧಿಕಾರತ್ವ ಕಲಂ 8 ರಲ್ಲಿ ಬರುತ್ತದೆ. ಕಲಂ 8 ರಲ್ಲಿ ಇರುವ ತಾಯಿ/ವಿಧವೆ/ಮಗ/ಮಗಳು ಒಂದನೇ ಹಂತದಲ್ಲಿ ಇವರಿಲ್ಲದಿದ್ದರೆ ಇತರೆ ವಾರಸ್ಸುದಾರರನ್ನು ಪರಿಗಣಿಸುವ ರೀತಿಯಲ್ಲೇ ಹಂಚಿಕೆಯಾಗುತ್ತದೆ.

10. ಕಲಂ 6(3) ರ ವಿವರಣೆಯಲ್ಲಿ ಹೇಳಿರುವಂತೆ ಸತ್ತ ಕೋಪಾರ್ಸನರ್ ಆಸ್ತಿ ಹಂಚಿಕೆಯು ಆತನು ಸಾಯುವ ಮುಂಚೆ, ಆತನಿಗೆ ವಿಭಾಗ

ಕೋರಲು ಅರ್ಹತೆ (ಹಕ್ಕು) ಇರಲಿ ಅಥವ ಇಲ್ಲದಿರಲಿ ಆಸ್ತಿ ಹಂಚಿಕೆಯಾಗುತ್ತದೆ. (ಇದು ಹಿಂದೆಯೂ ಇತ್ತು).

ಕೇಸೊಂದರ ವೃತ್ತಾಂತ ಹೀಗಿದೆ "ತಂದೆ ಮತ್ತು ಅವರ ಮಗನ ನಡುವೆ ವಿಭಜನೆಯಾಗಿತ್ತು ಮತ್ತು ನಂತರ, ಅವರು ಒಂದು ಸಂಸ್ಥೆಯನ್ನು ರೂಪಿಸುವ ಮೂಲಕ ವ್ಯವಹಾರವನ್ನು ಮುಂದುವರೆಸಿದರು. ತಂದೆ ಮರಣಹೊಂದಿದಾಗ ಪ್ರಶ್ನೆಯು ಹುಟ್ಟಿತು, ತಂದೆ ಮೃತಪಟ್ಟವರ ಖಾತೆಯಲ್ಲಿ ಇರುವ ಮೊತ್ತವನ್ನು ಹೇಗೆ ಪರಿಗಣಿಸಬೇಕು?, ಅವನ ಮಗನ ವೈಯಕ್ತಿಕ ವರಮಾನವಾಗಿ ಅದೇ ರೀತಿ ವಿನಿಯೋಗಿಸಬಹುದೆ ಎಂಬ ಬಗ್ಗೆ, ಪ್ರಶ್ನೆ ಆಲಿಸಿದ ಸುಪ್ರೀಮ್ ಕೋರ್ಟ್[1] ಕಲಂ 8 ಹಿಂದು ಉತ್ತರಾಧಿಕಾರಿ ಕಾನೂನಿನ ಅಡಿಯಲ್ಲಿ ಆರ್ಜಿಸಿದ ಸ್ವತ್ತು ಮಗನ ಕೈಯಲ್ಲಿ ಇದ್ದಾಗ ಅದು ಇತರೆ ಹೆಣ್ಣು ವಾರಸ್ಸುದಾರರ ನಡುವೆ ಒಟ್ಟು ಕುಟುಂಬದ ಆಸ್ತಿ ಎಂದು ಪರಿಗಣಿಸಲು ಬರುವುದಿಲ್ಲ, ಅದು ಆತನ (ಮಗನ) ವಾರಸ್ಸು ಮಕ್ಕಳ ಜೊತೆಯಲ್ಲಿಯೂ ಕರ್ತನಾಗಿ ಆರ್ಜಿಸಿರುವುದು ಆಗುವುದಿಲ್ಲ, ಅದು ಆತನ ಸ್ವಂತ ಆಸ್ತಿ ಆಗುತ್ತದೆ."

ಕಲಂ 8 ರಲ್ಲಿ ಸಾಮಾನ್ಯ ಉತ್ತರಾಧಿಕಾರಿ ನಿಯಮವನ್ನು ಕೊಡಲಾಗಿದೆ. ಪುರುಷ ಹಿಂದು ವಿಲ್ ಬರೆಯದೆ ಸತ್ತರೆ ಆತನ ವಾರಸ್ಸುದಾರರಲ್ಲಿ  ಮಗ ಮತ್ತು ಮಗಳನ್ನು ತೋರಿಸಲಾಗಿದೆ ಇಲ್ಲಿ ಮೊಮ್ಮಕ್ಕಳು ಬರುವುದಿಲ್ಲ, ಅಂದರೆ ತಂದೆ ಬದುಕಿರುವವರೆಗೆ ಮೊಮ್ಮಗನನ್ನು ಸೇರಿಸಲಾಗಿಲ್ಲ. ಹುಟ್ಟುತ್ತಲೇ ಆಸ್ತಿಯಲ್ಲಿ ಹಕ್ಕಿನ ಸಿದ್ಧಾಂತ ಇಲ್ಲಿ ನೀಡಲಾಗಿಲ್ಲ. ಹಿಂದು ವ್ಯಕ್ತಿಯು ಕೋಪಾರ್ಸನರ್ ಆಗಿ ಅಂತಹ ವ್ಯಕ್ತಿತ್ವದಲ್ಲಿ ಆರ್ಜಿಸಿದ ಸ್ವತ್ತು ಹಿಂದು ಅವಿಭಕ್ತ ಕುಟುಂಬ ಅಥವ ಕೋಪಾರ್ಸನರಿ ಸ್ವತ್ತು ಆಗುತ್ತದೆ. ಅಂತಹ ಸ್ವತ್ತಿನಲ್ಲಿ ಹುಟ್ಟುವ ಮಗ/ಮಗಳಿಗೆ ಹುಟ್ಟಿನಿಂದಲೇ ಆಸ್ತಿ ಹಕ್ಕು ಪ್ರಾರಂಬವಾಗುತ್ತದೆ. ಅಂತಹ

---

[1] ಸಂಪತ್ತು ತೆರಿಗೆ ಆಯುಕ್ತರು ವಿ. ಚಂದರ್ ಸೇನ್ – ಎ.ಐ.ಆರ್ 1986 ಎಸ್.ಸಿ 1753

ಮಕ್ಕಳು ಹುಟ್ಟುವವರೆಗೆ ಅದು ಆತನ ಸ್ವಂತ ಸ್ವತ್ತಾಗಿ ಅನುಬವಿಸುತ್ತಾನೆ. ಆದರೆ ತಂದೆಯ ಸಾವಿನ ನಂತರ ತಂದೆಯ ಸ್ವತ್ತನ್ನು ಆರ್ಜಿಸುವುದು ಕಲಂ 8 ರಲ್ಲಿ ಸ್ವಯಾರ್ಜಿತ ಸ್ವತ್ತು ಆಗುತ್ತದೆ.

ಭೀಮಾ ಎನ್ನುವ ವ್ಯಕ್ತಿ ತನ್ನ ಆಸ್ತಿಯನ್ನು ಬಿಟ್ಟು ಒಬ್ಬ ಮಗ ಮೂರು ಹೆಣ್ಣು ಮಕ್ಕಳನ್ನು ಬಿಟ್ಟು ಸತ್ತಿರುತ್ತಾನೆ. ಆಗ ಅವರು ಸಮವಾಗಿ ಬಾಗವನ್ನು ಮಾಡಿಕೊಂಡಿರುತ್ತಾರೆ. ಸದರಿ ಆಸ್ತಿ ಕಲಂ 8 ಮತ್ತು ಕಲಂ 19 ಹಿಂದು ಉತ್ತರಾಧಿಕಾರಿತ್ವ ಕಾಯ್ದೆ ಅನ್ವಯ ಆರ್ಜಿಸಿರುವುದಾಗಿದ್ದು ಅದು ಕೋಪಾರ್ಸನರಿ ಆಸ್ತಿಯಾಗಿ ಮುಂದುವರಿಯುವುದಿಲ್ಲ ಎಂಬ ತೀರ್ಪು ಸುಪ್ರೀಮ್ ಕೋರ್ಟ್ ನೀಡಿದೆ.[1]

ಕಲಂ 6 ರಲ್ಲಿ ಕೊಟ್ಟಿರುವಂತೆ ಹಿಂದು ಪುರುಷ ತನ್ನ ಮೊದಲನೇ ದರ್ಜೆ ವಾರಸ್ಸುದಾರರ ಪೈಕಿ ಮಹಿಳೆಯೊಬ್ಬರನ್ನು ಬಿಟ್ಟು ಸತ್ತಿದ್ದರೆ ಅಥವ ಅಂತಹ ಮೊದಲನೇ ದರ್ಜೆ ಮಹಿಳಾ ವಾರಸ್ಸು ಮುಖೇನ ಹಕ್ಕು ಪ್ರತಿಪಾದಿಸುವ ಪುರುಷನ ಬಿಟ್ಟು ಸತ್ತಿದ್ದರೆ, ಅವನ ಕೋಪಾರ್ಸನರಿ ಹಿಸ್ಸೆ ವಿಲ್ ಮುಖೇನವಾಗಲೀ ಅಥವ ವಿಲ್ ರಾಹಿತ್ಯವಾಗಲೀ ಹಂಚಿಕೆಯಾಗಬೇಕು ಎನ್ನುವ ಕಾನೂನು ಅಂಶವನ್ನು ಮತ್ತು ಕಲಂ 4, 8 ಮತ್ತು 19 ರಲ್ಲಿನ ಅಂಶವನ್ನು ಅರ್ಥೈಸುತ್ತ ಅಂತಹ ಆರ್ಜಿಸಿದ ಸ್ವತ್ತು ಕೋಪಾರ್ಸನರಿ ಸ್ವತ್ತು ಆಗದು ಅದು ಪ್ರತ್ಯೇಕ ಸ್ವತ್ತಾಗಿ ಉಳಿಯುತ್ತದೆ ಎನ್ನುತ್ತದೆ ಸುಪ್ರೀಮ್ ಕೋರ್ಟ್.[2] ಪುರಾತನ ಹಿಂದು ಕಾನೂನಿನಲ್ಲಿ ಮಗ ಹುಟ್ಟುತ್ತಲೇ ಆಸ್ತಿಯಲ್ಲಿ ಹಕ್ಕು ಪಡೆಯುತ್ತಾನೆ, ತಂದೆಯ ಪೂರ್ವಜರ ಸ್ವತ್ತಿನಲ್ಲಿ ಬಾಗಾಂಶ ಹೊಂದುತ್ತಾನೆ ಮತ್ತು ಕೋಪಾರ್ಸನರ್ ಆಗುತ್ತಾನೆ ಎನ್ನುವ ಸ್ಥಿತಿ ಕಲಂ 8 ಹಿಂದು ಉತ್ತರಾಧಿಕಾರತ್ವ ಕಾಯ್ದೆ 1956 ರ ನಂತರ ಬದಲಾಯಿಸಲಾಗಿದೆ. ಕುಟುಂಬದಿಂದ ಪ್ರತ್ಯೇಕವಾದ ತಂದೆಯ

---

[1] ಭನ್ವಾರ್ ಸಿಂಗ್ ವಿ. ಪುರಣ್ – 2008 (3) ಎಸ್.ಸಿ.ಸಿ 87

[2] ಉತ್ತಮ್ ವಿ ಸೌಭಾಗ್ – ಎ.ಐ.ಆರ್ 2016 ಎಸ್.ಸಿ 1169

ಸಾವಿನ ನಂತರ ಅವರ ಆಸ್ತಿಯನ್ನು ಅರ್ಜಿಸುವುದು ಪ್ರತ್ಯೇಕ ಆಸ್ತಿ ಆಗುತ್ತದೆ ಮಗನ ಮಗನು ಅದರಲ್ಲಿ ಕೋಪಾರ್ಸನರ್ ಆಗಿ ಹಕ್ಕು ಪಡೆಯುವುದಿಲ್ಲ.[1]

ಕೋಪಾರ್ಸನರಿ ಸ್ವತ್ತಿನಲ್ಲಿ ಪೂರ್ವಜರ ಸ್ವತ್ತು ಅಥವ ಜಂಟಿ ಆರ್ಜಿತ ಸ್ವತ್ತು ಅಥವ ಕೋಪಾರ್ಸನರಿಯಲ್ಲಿ ಸೇರ್ಪಡಿಸಿದ ಸ್ವತ್ತು ಅಥವ ಕೋಪಾರ್ಸನರಿ ಇಡಿಗಂಟಿನಲ್ಲಿ ಅರ್ಜಿಸಿದ ಸ್ವತ್ತುಗಳು ಸೇರಿರುತ್ತವೆ.[2]

ಹಿಂದು ಉತ್ತರಾಧಿಕಾರತ್ವ ಕಾಯ್ದೆ 1956 ಜಾರಿಯಾದ ಮೇಲೆ, ಒಬ್ಬ ವ್ಯಕ್ತಿಯ ಪ್ರತ್ಯೇಕ ಸ್ವತ್ತು ಅಥವ ಸ್ವಯಾರ್ಜಿತ ಸ್ವತ್ತು ಅತನ ನಂತರ ಕಲಂ 8 ರಲ್ಲಿ ಹಂಚಿಕೆಯಾಗುತ್ತದೆ, ಅಂತಹ ಹಂಚಿಕೆಯಾದ ಸ್ವತ್ತು ವಾರಸ್ಸುದಾರರ ಕೈಯಲ್ಲಿ ಪ್ರತ್ಯೆಕ ಸ್ವತ್ತು ಆಗುತ್ತದೆ.[3]

**ಎರಡನೇ ಹೆಂಡತಿ ಇರುವಾಗ ಆಸ್ತಿ ವಿಲೆ ಹೇಗೆ**

ಎರಡನೇ ಹೆಂಡತಿ ಇರುವಾಗ ಒಬ್ಬ ವ್ಯಕ್ತಿಯ ಆಸ್ತಿ ಕಲಂ 8 ಮತ್ತು 10 ರಲ್ಲಿ ಹೇಗೆ ಹಂಚಿಕೆಯಾಗುತ್ತದೆ ಎಂಬ ವಿಚಾರಕ್ಕೆ ಸುಪ್ರೀಮ್ ಕೋರ್ಟ್ ಗಹನವಾಗಿ ಕೇಸೊಂದರಲ್ಲಿ ವಿವರಿಸಿದೆ. "ಆ ವ್ಯಕ್ತಿ ಮಾಡಿಕೊಂಡಿರುವ ಎರಡನೇ ಮದುವೆ ಹಿಂದು ವಿವಾಹ ಕಾಯ್ದೆ ಕಲಂ 5(1) ರಲ್ಲಿ ಅನೂರ್ಜಿತವಾದ ಮದುವೆಯಾಗಿರುತ್ತದೆ. ಅದೇ ಕಾಯ್ದೆ ಕಲಂ 16 ರಲ್ಲಿ ಅಂತಹ ಅನೂರ್ಜಿತ ಮದುವೆಯಲ್ಲಿ ಹುಟ್ಟಿರುವ ಮಕ್ಕಳು ನ್ಯಾಯಸಮ್ಮತ ಅಂತ ಘೋಷಿಸಿದೆ. ಹಿಂದು ಉತ್ತರಾಧಿಕಾರತ್ವ ಕಾಯ್ದೆ ಕಲಂ 8 ಮತ್ತು 10 ರಲ್ಲಿ ಹಿಂದು ಪುರುಷ ವಿಲ್ ಬರೆಯದೆ ಸತ್ತಿರುವಾಗ ಮೊದಲಿಗೆ ಆತನ ವಿಧವೆಗೆ, ತಾಯಿಗೆ ಮತ್ತು ಮಕ್ಕಳಿಗೆ ಪ್ರಾಪ್ತವಾಗುತ್ತದೆ. ಈ ಕೇಸಿನಲ್ಲಿ (ಅದು ಪೆನ್ಶನ್ ವಿಚಾರಕ್ಕೆ ನಡೆದಿರುವ ಕೇಸು) ಎರಡನೇ ಹೆಂಡತಿಯನ್ನು ವಿಧವೆ ಎನ್ನಲಾಗದು ಆಕೆಯ ಮದುವೆ ಕಲಂ 5(1) ರಲ್ಲಿ

---

[1] ಮಲ್ಲಿಕಾ ವಿ. ಚಂದ್ರಪ್ಪ – ಐ.ಎಲ್.ಆರ್ 2007 ಕರ್ನಾಟಕ 3216

[2] ಪಟೇಲ್ ಚಂದ್ರಪ್ಪ ವಿ. ಹನುಮಂತಪ್ಪ – ಐ.ಎಲ್.ಆರ್ 1989 ಕರ್ನಾಟಕ 2384

[3] ಶಕುಂತಲ ವಿ. ಬಸವರಾಜ್ – ಐ.ಎಲ್.ಆರ್ 2016 ಕರ್ನಾಟಕ 3604

ಅನೂರ್ಜಿತ ಮದುವೆಯಾದ್ದರಿಂದ ಎಂದು ಕೋರ್ಟ್ ಹೇಳುತ್ತದೆ. ಮೊದಲನೇ ಹೆಂಡತಿ ಮತ್ತು ಅವರ ಮಕ್ಕಳ ಜೊತೆ ಎರಡನೇ ಹೆಂಡತಿಯ ಮಕ್ಕಳು ಮಾತ್ರ ಸಮಬಾಗವನ್ನು ಪಡೆಯುತ್ತಾರೆ ಎನ್ನುತ್ತದೆ ಸುಪ್ರೀಮ್ ಕೋರ್ಟ್."[1] – ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹಿಂದು ಉತ್ತರಾಧಿಕಾರತ್ವ ಕಾಯ್ದೆ ಕಲಂ 10 ರಲ್ಲಿ ಒಬ್ಬರಿಗಿಂತ ಹೆಚ್ಚು ವಿಧವೆಯರಿದ್ದರೆ ಆ ವಿಧವೆಯರೆಲ್ಲಾ ಸೇರಿ ಒಟ್ಟಾಗಿ ಒಂದು ಬಾಗವನ್ನು ಪಡೆಯುತ್ತಾರೆ ಎಂದು ನೀಡಲಾಗಿದೆ. ಮಕ್ಕಳು ಮತ್ತು ತಾಯಿ ತಲಾ ಒಂದು ಬಾಗ ಪಡೆಯುತ್ತಾರೆ ಎಂದು ನಿಯಮವಿದೆ. ಸತ್ತಂತಹ ಮಗನ ವಿದವೆ ವಿಚಾರದಲ್ಲೂ ವಿಧವೆಯರು ಒಟ್ಟಾಗಿ ಬಾಗ ಪಡೆಯುವ ವಿಚಾರ ಇದೆ.

ಕಲಂ 8 ರಲ್ಲಿ 1ನೇ ದರ್ಜೆ ವಾರಸ್ಸಾಗಿ ತಾಯಿ ಮಾತ್ರ ಇದ್ದರು, ಆದರೆ ತಾಯಿ ಎರಡನೇ ಮದುವೆಯಾಗಿದ್ದರು. ಇಂತಹ ಸಂಧರ್ಬವಿದ್ದ ಕೇಸ್ ಸುಪ್ರೀಮ್ ಕೋರ್ಟ್ ಮುಂದೆ ಬಂದಾಗ ಮದುವೆಯಾದ ಮೇಲೂ ತಾಯಿ ತಾಯಿನೇ ಆಗಿದ್ದಾಳೆ, ಆಕೆ ಕಲಂ 8 ರಂತೆ ಸತ್ತ ಮಗನ ಆಸ್ತಿಗೆ ವಾರಸ್ಸುದಾರಳಾಗುತ್ತಾಳೆ.[2]

ಸರ್ಕಾರಿ ಉದ್ಯೋಗಿಯ ಪೆನ್ಷನ್ ಯಾರಿಗೆ ಸೇರಬೇಕು ಎಂಬ ವಿಚಾರದಲ್ಲಿ ಫ್ಯಾಮಿಲಿ ಪೆನ್ಷನ್ ಸ್ಕೀಮ್ ನಂತೆ ಯಾರು ಫ್ಯಾಮಿಲಿ ಎಂಬ ಪದದಲ್ಲಿ ಸೇರಿರುತ್ತಾರೋ ಅವರಿಗೆ ಸೇರುತ್ತದೆ ಎಂದು ಸುಪ್ರೀಮ್ ಕೋರ್ಟ್ ತೀರ್ಪಿತ್ತಿದೆ. ಇದು ಪಂಜಾಬಿನ ಕೇಸಾಗಿದ್ದು ಅಲ್ಲಿನ ಸರ್ಕಾರದ ಫ್ಯಾಮಿಲಿ ಪೆನ್ಷನ್ ಸ್ಕೀಮ್ ನಲ್ಲಿ ಫ್ಯಾಮಿಲಿ ಎಂಬ ಪದದಲ್ಲಿ ಮದುವೆಯಾಗದ ಅಧಿಕಾರಿಯ ಹೆತ್ತವರು ಎಂದು ಇರುತ್ತದೆ. ಹೈಕೋರ್ಟಿನಲ್ಲಿ ಕಲಂ 8 ಹಿಂದು ಉತ್ತರಾಧಿಕಾರತ್ವ ಕಾಯ್ದೆಯಡಿಯಲ್ಲಿ

---

[1] ರಾಮೇಶ್ವರಿ ದೇವಿ ವಿ. ಬಿಹಾರ ರಾಜ್ಯ – ಎ.ಐ.ಆರ್ 2000 ಎಸ್.ಸಿ 735

[2] ಆತ್ಮ ಸಿಂಗ್ ವಿ. ಗುರ್ಮೆಜ್ ಕೌರ್ – ಎ.ಐ.ಆರ್ 2017 ಎಸ್.ಸಿ 4604

ತಾಯಿ ಉತ್ತರಾಧಿಕಾರಿಯಾದ್ದರಿಂದ ತಾಯಿಗೆ ಅರ್ದ ಪೆನ್ಷನ್ ಸೇರಬೇಕು ಎಂಬ ತೀರ್ಪನ್ನು ರದ್ದು ಮಾಡಿ, ಸದರಿ ಅಧಿಕಾರಿಯ ಇತರೆ ಆಸ್ತಿಗಳಿಗೆ ಕಲಂ 8 ಅನ್ವಯವಾಗುತ್ತದಾದರೂ ಪೆನ್ಷನ್ ವಿಚಾರದಲ್ಲಿ ಸರ್ಕಾರಿ ಸ್ಕೀಮ್ ರೀತಿಯಲ್ಲೇ ಹಂಚಿಕೆಯಾಗಬೇಕು ಎಂದಿದೆ.[1]

**ಮಹಿಳಾ ಆಸ್ತಿ ಹಕ್ಕು ಮತ್ತು ಕರ್ನಾಟಕ ಕಾನೂನು**

ಹಿಂದು ಕಾನೂನು ಮಿತಾಕ್ಷರ ಕುಟುಂಬ ವ್ಯವಸ್ಥೆಯ ಬಗ್ಗೆ ತಿದ್ದುಪಡಿಯನ್ನು ತಂದು ಮಹಿಳೆಯರಿಗೆ ಸಮಾನ ಆಸ್ತಿ ಹಕ್ಕು ನೀಡುವಲ್ಲಿ ಹಲವು ರಾಜ್ಯಗಳು ಮೊದಲಿಗೆ ತಂದವು ಅದರಲ್ಲಿ ಕರ್ನಾಟಕ ರಾಜ್ಯವೂ 1990 ರಲ್ಲಿ ಕಾನೂನು ರೂಪಿಸಿ 31-07-1994 ರಿಂದ ಜಾರಿಗೆ ಬರುವಂತೆ ತಿದ್ದುಪಡಿ ತಂದಿತ್ತು. ಅದರಂತೆ 30-07-1994 ರ ಮುಂಚೆ ಮದುವೆ ಆಗಿರುವ ಹೆಣ್ಣುಮಕ್ಕಳಿಗೆ ಬಾಗ ಇಲ್ಲವೆಂತಲೂ ಒಂದು ನಿರ್ಬಂದವನ್ನು ಹೇರಿತ್ತು. ಸದರಿ ಕಾಯ್ದೆಯಲ್ಲಿ ಮಿತಾಕ್ಷರ ಕಾನೂನು ಅನ್ವಯ ಆಗುವಂತಾ ಹಿಂದು ಅವಿಭಕ್ತ ಕುಟುಂಬದಲ್ಲಿ ಮಗಳಿಗೆ ಮಗನಂತೆ ಆಸ್ತಿಯಲ್ಲಿ ಸಮಾನ ಹಕ್ಕು ನೀಡಬೇಕೆಂದು ಕಾನೂನು ರೂಪಿತವಾಗಿರುತ್ತದೆ. ವಿಭಾಗ ಮಾಡುವಾಗ್ಗೆ ಮಗಳಿಗೆ ಆಕೆ ಸತ್ತಿದ್ದರೆ ಆಕೆಯ ಮಕ್ಕಳಿಗೆ ಆಕೆಯ ಬಾಗಾಂಶವನ್ನು ನೀಡಬೇಕು ಎಂದು ರೂಪಿತವಾಗಿರುತ್ತದೆ. ಆಕಸ್ಮಿಕ ಮಗ ಅಥವ ಮಗಳ ಮಕ್ಕಳಲ್ಲಿ ಯಾರಾದರೂ ಗತಿಸಿದ್ದಲ್ಲಿಯೂ ಕೂಡ ಅಂತಹ ಮಕ್ಕಳ ಮಕ್ಕಳಿಗೆ ಹಂಚಿಕೆ ಕೊಡಬೇಕೆಂತಲೂ ರೂಪಿತವಾಗಿರುತ್ತದೆ. ಸದರಿ ಬಾಗವಾಗಿ ಪಡೆದಂತಹ ಆಸ್ತಿಯನ್ನು ಕೋಪಾರ್ಸನರಿ ಮಾಲೀಕತ್ವದಲ್ಲಿ ಹೊಂದುತ್ತಾಳೆ ಆದರೂ ಆಕೆ ವಿಲ್ ಮುಖೇನ ಅಥವ ಇನ್ನಾವುದೇ ಬರಹದ ವರ್ಗಾವಣೆಯ ಹಕ್ಕನ್ನು ಹೊಂದಿರುತ್ತಾಳೆ ಎಂದು ಹೇಳುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಆಕೆ ಕೋಪಾರ್ಸನರಿ ಮಾಲೀಕತ್ವ ಹೊಂದುತ್ತಾಳೆ ಎಂದರೆ ಅದನ್ನು ಮಾರಲು ತನ್ನ ಮಕ್ಕಳ ಸಹಿ ಬೇಕಿರುತ್ತದೆ.

---

[1] ನೀತು ವಿ. ಶೀಲಾ ರಾಣಿ – ಎ.ಐ.ಆರ್ 2016 ಎಸ್.ಸಿ 4552

ಆಕೆಯ ಬಾಗಕ್ಕೆ ವಿಲ್ ಬರೆಯುವ ಹಕ್ಕುಳ್ಳವಳಾಗಿರುತ್ತಾಳೆ. ಅವಳು ಸಂಪೂರ್ಣ ಮಾಲೀಕಳಾಗುವುದಿಲ್ಲ. ಹಿಂದು ಮಹಿಳೆ ಮಕ್ಕಳಿಲ್ಲದೆ 30–07–1994 ರ ನಂತರ ಗತಿಸಿದರೆ ಅವಳಿಗೆ ಸೇರ ಬೇಕಾದ ಅವಿಭಕ್ತ ಕುಟುಂಬದ ಆಸ್ತಿ ಬೇರೆ ಕೋಪಾರ್ಸನರ್ ಗಳಿಗೆ ಜೀವಂತ ವಾರಸುದಾರತ್ವದಂತೆ ಸೇರುತ್ತದೆ. ಆಕೆಗೆ ಮಕ್ಕಳಿದ್ದರೆ ಅವರಿಗೆ ಸೇರುತ್ತದೆ, ಹಾಗೊಂದು ವೇಳೆ ಆ ಮಕ್ಕಳು ತಾಯಿ ಸಾಯುವುದಕ್ಕೆ ಮುಂಚೆ ಕೋಪಾರ್ಸನರಿ ಇಂದ ಬೇರೆಯಾಗಿದ್ದರೆ ಅವರಿಗೆ ಬಾಗಾಂಶ ಕೇಳುವ ಹಕ್ಕು ಇಲ್ಲವೆಂದು ಕಾನೂನು ರಚಿತವಾಗಿದೆ. ಬಾಗಾಂಶವನ್ನು ಪಡೆದ ವಾರಸ್ಸುದಾರರು ಇತರೆ ಯಾರಿಗಾದರೂ ಸದರಿ ಸ್ವತ್ತು ಮಾರಾಟಮಾಡುವುದಿದ್ದರೆ ಅದನ್ನು ಇತರೆ ವರಸ್ಸುಗಳಿಗೆ ಮಾರಾಟ ಮಾಡಬೇಕೆಂದು ಅದಕ್ಕೆ ಅಗ್ರಿಮೆಂಟ್ ಮಾಡಿಕೊಂಡು ಸ್ವತ್ತಿನ ಮೌಲ್ಯ ನಿರ್ದರಿಸಿಕೊಳ್ಳಬೇಕೇ ಹೊರತು ಅದರಲ್ಲಿ ಇತರೆ ವಾರಸುದಾರರ ಪ್ರಿಫ಼ರೆನ್ಶಿಯಲ್ ರೈಟ್ಸ್ ಕೋರಿ ನ್ಯಾಯಾಲಯಕ್ಕೂ ಅರ್ಜಿ ಸಲ್ಲಿಸಬಹುದೆಂದು ಕಾನೂನು ರಚನೆಯಾಗಿರುತ್ತದೆ. ಈ 1990 ರ ತಿದ್ದುಪಡಿ ಹಿಂದು ಉತ್ತರಾಧಿಕಾರತ್ವ ಕಾಯ್ದೆ 1956 ಅನ್ನು ತಿದ್ದು ಪಡಿ ಮಾಡಿ ಕಲಂ 6 ರ ನಂತರ 6ಎ, 6ಬಿ, 6ಸಿ ಕಲಂ ಗಳನ್ನು ಸೇರಿಸಿ ಈ ಮೇಲೆ ತಿಳಿಸಿದ ಕಾನೂನು ರಚಿತವಾಗಿರುತ್ತದೆ. (ಇಂತಹ ಕಾನೂನಿಗೆ ವಿರುದ್ದವಾಗಿ 2005 ರ ಕೇಂದ್ರ ಸರ್ಕಾರದ ತಿದ್ದುಪಡಿ ಕಾನೂನಿನಲ್ಲಿ ಯಾವುದೇ ಅಂಶವು ಇದ್ದಲ್ಲಿ ಅದು ಊರ್ಜಿತವಾಗುತ್ತದೆ).

ಈ ಬಗ್ಗೆ ತಮಿಳುನಾಡು 1989 ರ ತಿದ್ದುಪಡಿ ಕಾಯ್ದೆಯನ್ನು 2009 ರಲ್ಲಿ ಸುಪ್ರೀಮ್ ಕೋರ್ಟ್ ವ್ಯಾಖ್ಯಾನಿಸಿ 1989 ರ ನಂತರ ಮದುವೆಯಾದ ಹೆಣ್ಣು ಮಕ್ಕಳು ಆಸ್ತಿಯಲ್ಲಿ ಮಗನಂತೆ ಸಮಾನ ಹಕ್ಕು ಪಡೆಯುತ್ತಾರೆ ಎಂದು ಹೇಳಿದೆ.[1] ಅಲ್ಲಿಗೆ ಕರ್ನಾಟಕದಲ್ಲೂ 30–07–1994

---

[1] ಮಹಾಲಕ್ಷ್ಮಿ ವಿ ಅನಂತರಾಮನ್ – ಎ.ಐ.ಆರ್ 2009 ಎಸ್.ಸಿ 1406

ರ ನಂತರ ಮದುವೆಯಾದ ಹೆಣ್ಣುಮಗಳನ್ನು ಸಮಾನ ಹಕ್ಕುದಾರಳು ಎಂದು ಪರಿಗಣಿಸಬಹುದಾಗಿರುತ್ತದೆ. ಅದು 2005 ರ ತಿದ್ದುಪಡಿ ಹಕ್ಕು ಜಾರಿಗೆ ಬರುವವರೆಗೆ ಇರುತ್ತದೆ.

**ಕೇಂದ್ರ ಸರ್ಕಾರದ 2005 ರ ತಿದ್ದುಪಡಿ**

ಮಹಿಳೆಯರಿಗೆ ಆಸ್ತಿ ಹಕ್ಕು 2005 ರ ನಂತರ :- ಹಿಂದು ಮಿತಾಕ್ಷರ ಕುಟುಂಬಗಳಲ್ಲಿ ಜನಿಸಿದ ಹೆಣ್ಣುಮಕ್ಕಳಿಗೆ ಆಸ್ತಿ ಹಕ್ಕು ನೀಡುವಲ್ಲಿ ಜಾರಿಗೆ ಬಂದಿರುವ 2005 ರ ಹಿಂದು ಉತ್ತರಾಧಿಕಾರಿತ್ವ ಕಾಯ್ದೆ ತಿದ್ದುಪಡಿ 2005 ರ ನಂತರ ಕಾನೂನು ಅರ್ಥೈಸುವಿಕೆಯಲ್ಲಿ ವಿವಿದ ಗಂಬೀರ ಚಿಂತನಾ ಬರಹಗಳನ್ನು ನೀಡಿರುವ ನಮ್ಮ ದೇಶದ ಅತ್ಯುನ್ನತ ಕಾನೂನು ಪಂಡಿತರಾದ ಘನ ನ್ಯಾಯಾಧೀಶರ ಸೂಕ್ಷ್ಮ ಮಾರ್ಗದರ್ಶನದಲ್ಲಿ ಅವಲೋಕಿಸುತ್ತ ಮಹಿಳೆಯರಿಗೆ 2005 ರ ನಂತರ ಯಾವ ರೀತಿಯ ಹಕ್ಕು ಬಾಧ್ಯತೆಗಳು ಬದಲಾಗಿದೆ ಎಂಬುದನ್ನು ತಿಳಿಯೋಣ.

ಹಿಂದು ಉತ್ತರಾಧಿಕಾರಿತ್ವ ಕಾಯ್ದೆ 1956, ದಿನಾಂಕ 17-06-1956 ರಿಂದ ಜಾರಿಯಲ್ಲಿ ಇರುತ್ತದೆ. 2005 ರ ತಿದ್ದುಪಡಿ ದಿನಾಂಕ 09-09-2005 ರಿಂದ ಜಾರಿಗೆ ಬಂದಿರುತ್ತದೆ. ಈ ತಿದ್ದುಪಡಿ ಕಾಯ್ದೆಯಂತೆ ಮಿತಾಕ್ಷರ ಕಾನೂನು ಅನ್ವಯವಾಗುವ ಹಿಂದು ಕುಟುಂಬಗಳಲ್ಲಿ ಹೇಗೆ ಕೋಪಾರ್ಸನರಿ ಸ್ವತ್ತು ಹಂಚಿಕೆಯಾಗುತ್ತದೆ ಎಂಬ ಬಗ್ಗೆ ಕಾನೂನು ರಚಿತವಾಗುತ್ತದೆ. ಇಲ್ಲಿ ಕೋಪಾರ್ಸನರ್ ಎಂದರೆ ಕುಟುಂಬದಲ್ಲಿ ಇತರೆ ಕೋಪಾರ್ಸನರ್ ಜೊತೆಯಲ್ಲಿ ಸಮಾನ ಹಕ್ಕು ಇರುವವನು ಎಂದರ್ಥ. ತಂದೆ ಮಕ್ಕಳ ನಡುವಿನ ಕೋಪಾರ್ಸನರಿಯಲ್ಲಿ 1956 ಕ್ಕೆ ಮುಂಚೆ ತಂದೆ, ಮಗ ಕೋಪಾರ್ಸನರ್ ಆಗುತ್ತಿದ್ದರೆ, ಇದರಲ್ಲಿ ಮೊಮ್ಮಗ ಸದರಿ 1956 ರ ನಂತರ ಕೋಪಾರ್ಸನರಿಯಲ್ಲಿ ಸಮಾನ ಹಕ್ಕು ಉಳ್ಳವನಲ್ಲ. 09-09-2005 ರ ನಂತರ ಯಾವ ಕೋಪಾರ್ಸನರಿ ಜೀವಂತವಾಗಿ ಇದೆಯೋ ಅಲ್ಲಿಯ ಕೋಪಾರ್ಸನರ್ ತಂದೆಗೆ ಇರುವ ಮಗಳು ಮಗನ ಸಮಾನವಾಗಿ

ಕೋಪಾರ್ಸನರ್ ಆಗುತ್ತಾಳೆ. ಆಕೆ ತನ್ನ ಹುಟ್ಟಿನಿಂದ ಕೋಪಾರ್ಸನರ್ ಆಗಿರುತ್ತಾಳೆ ಆಕೆಯು ಕೋಪಾರ್ಸನರಿ ಆಸ್ತಿಯ ಬಗೆಗೆ ಇರುವ ಭಾಧ್ಯತೆಗಳಲ್ಲಿಯೂ ಸಮಾನ ಬಾಧ್ಯಳಾಗಿರುತ್ತಾಳೆ ಎಂಬುದು ಕಾನೂನು ಮಾರ್ಗಸೂಚಿ. ಇಲ್ಲಿ ಅಪ್ಪ ಮತ್ತು ಮಗಳು 09–09–2005 ರಲ್ಲಿ ಜೀವಂತವಿರಬೇಕಿರುತ್ತದೆ ಮತ್ತು ಕೋಪಾರ್ಸನರಿಯು ಜೀವಂತವಿರಬೇಕಿರುತ್ತದೆ. ಈ ರೀತಿಯ ಕೋಪಾರ್ಸನರ್ ಮಗಳಿಗೆ ನೀಡಿರುವ ಆಸ್ತಿ ಹಕ್ಕು ಮತ್ತು ಭಾದ್ಯತೆಗಳು 20–12–2004 ಕ್ಕೆ ಮುಂಚೆ ಆಗಿರುವ ಲಿಖಿತ ಆಸ್ತಿ ವರ್ಗಾವಣೆಗಳು (ನೂರು ರೂ ಮೌಲ್ಯಕ್ಕಿಂತ ಹೆಚ್ಚಿನದಾದ ಆಸ್ತಿ ವರ್ಗಾವಣೆ ನೊಂದಾವಣಿ ಕಡ್ಡಾಯ – ನೊಂದಾವಣಿ ಕಾಯ್ದೆ ಸಿದ್ದಾಂತ) ಮತ್ತು ಲಿಖಿತ ನೊಂದಾಯಿತ ವಿಭಾಗ ಪತ್ರಗಳಲ್ಲಿನ ಆಸ್ತಿಗಳಿಗೆ ಮತ್ತು ಡಿಕ್ರಿ ಮುಖಾಂತರ ಆಗಿರುವ ವಿಭಾಗದ ಆಸ್ತಿಗಳಿಗೆ ಬಾದಿಸುವುದಿಲ್ಲ ಎನ್ನುತ್ತದೆ ಕಾನೂನು.

ಆದರೆ ಆರ್. ಕಾಂತ ಕೇಸಿನಲ್ಲಿ[1] 20–12–2004 ಕ್ಕೆ ಮುಂಚಿನ ಕ್ರಯಗಳನ್ನು ಮಗ ಪ್ರಶ್ನಿಸಬಹುದಾದರೆ ಮಗಳು ಏಕೆ ಪ್ರಶ್ನಿಸಬಾರದು ಅಂತಹ ನಿರ್ಬಂದ ಸಂವಿಧಾನದ ಪರಿಚೇದ 14 ರಲ್ಲಿ ಅನೂರ್ಜಿತವಲ್ಲವೆ ಎಂಬುದಕ್ಕೆ ಮಾನ್ಯ ಉಚ್ಚನ್ಯಾಯಾಲಯದ ಗೌರವಾನ್ವಿತ ನ್ಯಾಯಮೂರ್ತಿ ಆನಂದ್ ಬೈರರೆಡ್ಡಿ ರವರು ಅದು ಸಂವಿಧಾನ ಬಾಹಿರ ಎಂದು ತೀರ್ಪಿತ್ತಿದ್ದಾರೆ.

ಸದರಿ ಕಾನೂನು ರೆಟ್ರಾಸ್ಪೆಕ್ಟೀವ್ (ಹಿಂದಿನ ತಾರೀಖಿನಿಂದ) ಅಥವ ಪ್ರಾಸ್ಪೆಕ್ಟೀವ್ (ಜಾರಿಯಾದ ತಾರೀಖಿನಿಂದ) ಅನ್ವಯಿಸುವುದೇ ಅನ್ನುವ ಪ್ರಶ್ನೆಗೆ ಕರ್ನಾಟಕ ಉಚ್ಚನ್ಯಾಯಾಲಯದ ಗೌರವಾನ್ವಿತ ನ್ಯಾಯ ಮೂರ್ತಿಗಳಾದ ಎನ್. ಕುಮಾರ್ ಮತ್ತು ವೇಣುಗೋಪಾಲಗೌಡ ರವರ

---

[1] ಐ.ಎಲ್.ಆರ್. 2009 ಕರ್ನಾಟಕ 3699

ದ್ವಿಸದಸ್ಯ ಪೀಠವು ಪುಷ್ಪಲತಾ ಪ್ರಕರಣದಲ್ಲಿ[1] ತಿದ್ದುಪಡಿಗೆ ಮುಂಚೆ ಆಗಲೀ ತಿದ್ದುಪಡಿಯ ನಂತರವಾಗಲೀ 17–06–1956 ಕ್ಕೆ ಮುಂಚೆ ಹುಟ್ಟಿದ ಮಹಿಳೆಯರಿಗೆ ಸದರಿ ಆಸ್ತಿಯಲ್ಲಿ ಹಕ್ಕು ನೀಡಲು ಪ್ರಯತ್ನ ನಡೆಯದೆ ಇರುವ ಕಾರಣಕ್ಕೆ ತಿದ್ದುಪಡಿ ಕಾಯ್ದೆಯಲ್ಲಿ ಕೋಪಾರ್ಸನರ್ ಮಗಳು ಹುಟ್ಟಿನಿಂದ ಕೋಪಾರ್ಸನರ್ ಆಗುತ್ತಾಳೆ ಅನ್ನುವುದಕ್ಕೆ ಆಕೆ 17–06–1956 ಕ್ಕೆ ನಂತರ ಹುಟ್ಟಿದ್ದರೆ ಮಾತ್ರ ಕೋಪಾರ್ಸನರ್ ಆಗುತ್ತಾಳೆ ಅನ್ನುವಂತೆ ಅರ್ಥ ಕಲ್ಪಿಸಿ ಅರ್ಥೈಸಲಾಗಿದೆ.

ಈ ಬಗ್ಗೆ ಹಲವಾರು ಸುಪ್ರೀಮ್ ಕೋರ್ಟ್ ತೀರ್ಪುಗಳು ಕಾನೂನು ಹಿಂದಿನಿಂದ ಜಾರಿಯಾಗಬೇಕೆ ಅಥವ ಯಾವ ತಾರೀಖಿನಿಂದ ಜಾರಿಯಾಗಬೇಕು ಎಂಬ ಉಲ್ಲೇಕವಿಲ್ಲದೆ ಹೋದಲ್ಲಿ ಸದರಿ ಕಾನೂನನ್ನು ಹಿಂದಿನಿಂದ ಜಾರಿಗೊಳಿಸಲು ಬರುವುದಿಲ್ಲವೆಂಬ ಅನುಮಾನವನ್ನು ಅನೇಕ ನ್ಯಾಯ ಪಂಡಿತರು ವ್ಯಕ್ತಪಡಿಸಿದ್ದು ಸದರಿ ತಿದ್ದುಪಡಿ ಕಾಯ್ದೆ 09–09–2005 ರಿಂದಲೆ ಜಾರಿಯಾಗಬೇಕು ಎಂಬ ಹಲವು ಬೇರೆ ರಾಜ್ಯ ಉಚ್ಚ ನ್ಯಾಯಾಲಯದ ತೀರ್ಪು ಹೊರಬಂದಿವೆ.

ಇದಲ್ಲದೆ ಇನ್ನೊಂದು ಅನುವಾದವು ಶೀಲಾದೇವಿ ಪ್ರಕರಣ[2] ಮತ್ತು ಶೇಖರ್ ಪ್ರಕರಣ[3] ದಲ್ಲಿ ಮಾನ್ಯ ಸುಪ್ರೀಂ ಕೋರ್ಟ್ ಸದರಿ ತಿದ್ದುಪಡಿ ಕಾಯ್ದೆ ಅನ್ವಯ ಆಗುತ್ತದೆಯೇ ಇಲ್ಲವೆ ಎಂಬುದಕ್ಕೆ ಸಕ್ಸೆಷೆನ್ ಯಾವಾಗ ಪ್ರಾರಂಬವಾಯಿತು ಎಂಬ ವಿಚಾರ ಗಹನವಾದದ್ದು ಎಂದು ಅಭಿಪ್ರಾಯ ಪಟ್ಟಿದೆ. 09–09–2005 ಕ್ಕೆ ಮುಂಚೆ ಸಕ್ಸೆಷೆನ್ ಓಪನ್ ಆಗಿದ್ದರೆ 2005 ರ ತಿದ್ದುಪಡಿ ಅಂತಹ ಕೇಸುಗಳಿಗೆ ಅನ್ವಯಿಸುವುದಿಲ್ಲ ಎನ್ನುತ್ತದೆ. ಆ ಹಿಂದಿನ ತಾರೀಖಿನಲ್ಲಿ ಇದ್ದ ಕಾನೂನಿನಂತೆ ಆಸ್ತಿ

---

[1] ಐ.ಎಲ್.ಆರ್ 2010 ಕರ್ನಾಟಕ 1484

[2] 2006 –8–ಎಸ್.ಸಿ.ಸಿ 581

[3] 2009–6–ಎಸ್.ಸಿ.ಸಿ 99

ಹಂಚಿಕೆಯಾಗುತ್ತದೆ ಎನ್ನುತ್ತದೆ ಸದರಿ ಅರ್ತೈಸುವಿಕೆ. ಆ ಕಾರಣಕ್ಕೆ ಕೋಪಾರ್ಸನರ್ ಮಗಳ ಆಸ್ತಿ ಹಕ್ಕು ನಿರ್ಣಯಿಸಲು ಈ ಹಿಂದೆ ಯಾವರೀತಿಯಲ್ಲಿ ಕಾನೂನು ಇತ್ತು ಎನ್ನುವುದೂ ಪರಾಮರ್ಶಿಸಬೇಕಿರುತ್ತದೆ.

2005 ರ ತಿದ್ದುಪಡಿ ಕಾಯ್ದೆಯಲ್ಲಿ ತಿಳಿಸಿರುವಂತೆ, 09–09–2005 ರ ನಂತರ ಮಿತಾಕ್ಷರ ಕಾನೂನು ಅನ್ವಯಿಸುವ ಯಾವ ಹಿಂದು ಸತ್ತರೂ ಕೂಡ ಆತನ ಬಾಗಾಂಶವು ಆತನ ವಾರಸ್ಸುದಾರರಿಗೆ ಅಥವ ಆತ ವಿಲ್ ಬರೆದಿದ್ದರೆ ಆತ ಸೂಚಿಸುವವರಿಗೆ ಹೋಗುತ್ತದೆ ಹೊರತು ಆತನ ಬಾಗವು ಇತರೆ ಕೋಪಾರ್ಸನರ್ ರವರಲ್ಲಿ ವಿಲೀನವಾಗುವುದಿಲ್ಲ. ಸದರಿ ಕೋಪಾರ್ಸನರಿ ಸ್ವತ್ತು ವಿಭಾಗವಾಗಿದೆ ಎಂಬಂತೆ ಅದು ಅಂದು ಬಾಗವಾಗುತ್ತದೆ. ಅದರಲ್ಲಿ ಮಗಳು ಮಗನ ಸಮಾನವಾಗಿ ಬಾಗ ಪಡೆಯುತ್ತಾಳೆ. ಆಕಸ್ಮಿಕ ಮಗಳು ಅಥವ ಮಗ ಸತ್ತಿದ್ದಲ್ಲಿ ಆತನ ಅಥವ ಆಕೆಯ ಮಕ್ಕಳು ಸದರಿ ಬಾಗಾಂಶವನ್ನು ಪಡೆಯುತ್ತಾರೆ.

2005 ರ ತಿದ್ದುಪಡಿ ಕಾಯ್ದೆಯಲ್ಲಿ ತಿಳಿಸಿರುವಂತೆ, 09–09–2005 ಕ್ಕೆ ಮುಂಚೆ ಅಪ್ಪ, ತಾತ, ಮುತ್ತಾತ ಯಾವುದೇ ಸಾಲವನ್ನು ಮಾಡಿದ್ದಲ್ಲಿ ಅದರ ವಿಷಯವಾಗಿ ಮಗ, ಮೊಮ್ಮಗ, ಮರಿಮೊಮ್ಮಗನ ಮೇಲೆ ದಾವ ಹೂಡಲು ಸಾಲಕೊಟ್ಟವನು ಅರ್ಹನಾಗಿರುತ್ತಾನೆ. ಆದರೆ 09–09–2005 ರ ನಂತರ ನೀಡುವ ಸಾಲಗಳಿಗೆ ಸದರಿ ಮಗ, ಮೊಮ್ಮಗ, ಮರಿಮೊಮ್ಮಗನ ಮೇಲೆ ದಾವ ಹೂಡಲು ಬರುವುದಿಲ್ಲ. 09–09–2005 ರ ನಂತರ ದತ್ತು ತೆಗೆದುಕೊಂಡವರ ಮೇಲೂ ಅಂತಹ ದಾವೆ ಹೂಡಲು ಬರುವುದಿಲ್ಲ. 09–09–2005 ರ ನಂತರ ಕೋಪಾರ್ಸನರ್ ಮಗಳೂ ಕೂಡ ಮಗನ ಸಮಾನವಾಗಿ ಕೋಪಾರ್ಸನರಿ ಸ್ವತ್ತಿನ ಬಾಧ್ಯತೆಗಳಿಗೆ ಬಾಧ್ಯಳಾಗಿರುತ್ತಾಳೆ.

ಸದರಿ ರಾಜ್ಯ ತಿದ್ದುಪಡಿಯಲ್ಲಿ ಕೇಂದ್ರ ತಿದ್ದುಪಡಿ ಅಂಶಗಳಿಗೆ ವಿರುದ್ಧವಾಗಿ – 30–07–1994 ಕ್ಕೆ ಅಥವ ಅದಕ್ಕಿಂತ ಮುಂಚೆ ಮದುವೆ ಆದವರಿಗೆ ಅವಿಭಕ್ತ ಕುಟುಂಬದಲ್ಲಿ ಪಾಲು ಇಲ್ಲ ಎಂಬ ಸಿದ್ಧಾಂತವನ್ನು ಈಗಾಗಲೇ ಅದು ಹಾಲಿ ಅನ್ವಯಿಸುವುದಿಲ್ಲ ಎಂಬ ಹಲವು ತೀರ್ಪಿನಲ್ಲಿ ವ್ಯಕ್ತವಾಗಿದೆ.

ಆದರೆ ರಾಜ್ಯ ತಿದ್ದುಪಡಿ ಮತ್ತು ಕೇಂದ್ರ ತಿದ್ದುಪಡಿಗಳನ್ನು ಅರ್ಥ ಮಾಡಿಕೊಳ್ಳುವ ಮುಂಚೆ ಹಿಂದು ಕೋಪಾರ್ಸನರಿ ಮತ್ತು ಹಿಂದು ಅವಿಭಕ್ತ ಕುಟುಂಬ ಇವುಗಳ ವ್ಯತ್ಯಾಸವನ್ನು ತಿಳಿಯುವುದು ಅವಶ್ಯವಾಗಿರುತ್ತದೆ. ಹಿಂದು ಕೋಪಾರ್ಸನರಿ ಅವಿಭಕ್ತ ಕುಟುಂಬದೊಳಗಿನ ಒಂದು ಘಟಕ. ಅವಿಭಕ್ತ ಕುಟುಂಬದಲ್ಲಿ ಎಲ್ಲರೂ ಸದಸ್ಯರೇ. ಆದರೆ ಕೋಪಾರ್ಸನರಿಯಲ್ಲಿ ಹಾಗಲ್ಲ. ಹಿಂದು ವ್ಯಕ್ತಿಯ ಕೋಪಾರ್ಸನರಿಯಲ್ಲಿ ಸದಸ್ಯರಾಗಿ ಅಂದರೆ ಕೋಪಾರ್ಸನರ್ ಆಗಿ ಕೆಲವರೇ ಇರುತ್ತಾರೆ. ಈ ಕೋಪಾರ್ಸನರ್ ನಡುವೆ ಆಸ್ತಿಯಲ್ಲಿ ಸಮಾನ ಹಕ್ಕು ಇರುತ್ತದೆ. 09–09–2005 ಕ್ಕೆ ಮುಂಚೆ ಒಂದು ಕೋಪಾರ್ಸನರಿಯಲ್ಲಿ ಕೋಪಾರ್ಸನರ್ ಆಗುವ ಹಕ್ಕು ಅಪ್ಪ, ಮಗ ಇವರಿಗೆ ಮಾತ್ರ ಇತ್ತು. 17–06–1956 ಕ್ಕೆ ಮುಂಚೆ ಕೋಪಾರ್ಸನರಿಯಲ್ಲಿ ಕೋಪಾರ್ಸನರ್ ಆಗುವ ಹಕ್ಕು ಅಜ್ಜ, ಅಪ್ಪ, ಮಗ, ಮೊಮ್ಮಗ ಇವರಿಗೆಲ್ಲಾ ಇತ್ತು. ಹುಟ್ಟುತ್ತಲೆ ಮಗು ತನ್ನ ಇತರೆ ಕೋಪಾರ್ಸನರ್ ಜೊತೆಯಲ್ಲಿ ಸಮಾನ ಹಕ್ಕು ಪಡೆಯುತ್ತಿದ್ದನು. 1956 ರ ನಂತರ ಮೊಮ್ಮಗನ ಸದರಿ ಕೋಪಾರ್ಸನರ್ ಆಗುವ ಹಕ್ಕನು ಮೊಟಕು ಗೊಳಿಸಲಾಯಿತು. ಮೊಮ್ಮಗ ತನ್ನ ತಂದೆಯ ಬಾಗಾಂಶದಲ್ಲಿ ಕೋಪಾರ್ಸನರ್ ಆಗುತ್ತಿದ್ದನು. 2005 ರ ನಂತರ ಸದರಿ ಕೋಪಾರ್ಸನರಿಯಲ್ಲಿ ಕೋಪಾರ್ಸನರ್ ಆಗಲು ಕೋಪಾರ್ಸನರ್ ಮಗಳಿಗೆ ಹಕ್ಕನ್ನು ನೀಡಲಾಯಿತು. ಇಲ್ಲಿ ಸದರಿ ಮಗಳು ತನ್ನ ಸಮಾನ ಇತರೆ ಕೋಪಾರ್ಸನರ್ ಜೊತೆಯಲ್ಲಿ ಸಮಾನ ಆಸ್ತಿ ಹಕ್ಕನ್ನು ಪಡೆಯುತ್ತಾಳೆ.

ರಾಜ್ಯ ತಿದ್ದುಪಡಿಯಲ್ಲಿ ಹಿಂದು ಮಿತಾಕ್ಷರ ಕಾನೂನು ಅನ್ವಯವಾಗುವ ಅವಿಭಕ್ತ ಕುಟುಂಬದಲ್ಲಿ ಮಗಳಿಗೆ ಮಗನಂತೆ ಆಸ್ತಿಯಲ್ಲಿ ಸಮಾನ ಹಕ್ಕು ನೀಡಲು ಕಾನೂನು ರಚನೆಯಾಗಿರುತ್ತದೆ. ಆದರೆ ಕೇಂದ್ರ ಸರ್ಕಾರದ ತಿದ್ದುಪಡಿಯಲ್ಲಿ ಮಿತಾಕ್ಷರ ಕಾನೂನು ಅನ್ವಯ ಆಗುವ ಹಿಂದು ಕೋಪಾರ್ಸನರ್ ಮಗಳಿಗೆ ಮಗನ ಸಮಾನವಾಗಿ ಕೋಪಾರ್ಸನರಿ ಸ್ವತ್ತಿನಲ್ಲಿ ಬಾಗಾಂಶ ನೀಡಲು ಕಾನೂನು ರಚನೆಯಾಗಿರುತ್ತದೆ. ಹಿಂದು ಕಾನೂನಿನಲ್ಲಿ ಕೋಪಾರ್ಸನರಿಯಲ್ಲಿ ಒಬ್ಬ ಕೋಪಾರ್ಸನರ್ ಸತ್ತ ನಂತರ ಅದು ಮುಂದುವರಿಯುವುದಿಲ್ಲ. ಅಲ್ಲಿ ನೋಷನಲ್ ಪಾರ್ಟೀಷನ್ ಎಂದು ಆಗುತ್ತದೆ, ಅ ದಿನಕ್ಕೆ ಎಲ್ಲಾ ಕೋಪಾರ್ಸನರ್ ರವರ ಬಾಗಾಂಶ ನಿರ್ದಾರವಾಗುತ್ತದೆ.

ಇಂತಹ ಕೋಪಾರ್ಸನರಿಯಲ್ಲಿ 2005 ರ ತಿದ್ದುಪಡಿ ಕಾಯ್ದೆಯಲ್ಲಿ ಮಗಳಿಗೆ ಸಮಾನ ಹಕ್ಕು ನೀಡಲಾಯಿತು. ಇಲ್ಲಿ ಕೋಪಾರ್ಸನರಿ ಜೀವಂತ ಇದೆಯೇ ಎನ್ನುವುದೇ ಗಹನವಾದ ಪ್ರಶ್ನೆ. ಕೋಪಾರ್ಸನರಿ ಜೀವಂತವಿಲ್ಲವಾದರೆ, ಕೋಪಾರ್ಸನರ್ 09–09–2005 ಕ್ಕೆ ಜೀವಂತ ಇಲ್ಲವಾದರೆ ಆತನ ಮಗಳು ಕೋಪಾರ್ಸನರ್ ಆಗುತ್ತಾಳೆಯೇ ಎಂಬುದು ನೋಡಬೇಕಿರುತ್ತದೆ. 09–09–2005 ರ ನಂತರ ಹಿಂದು ಸತ್ತಲ್ಲಿ ಹೇಗೆ ಕೋಪಾರ್ಸನರಿ ಸ್ವತ್ತು ಹಂಚಿಕೆ ಆಗಬೇಕು ಎಂದು ಕಲಂ 6(3) ರಲ್ಲಿ ವಿವರವಾಗಿ ನೀಡಲಾಗಿದೆ. ಅಂದರೆ ಕಲಂ 6(1) ರಲ್ಲಿ ಹೇಳಿರುವ ಕೋಪಾರ್ಸನರ್ ಮಗಳು ಮಗನ ಸಮಾನವಾಗಿ ಕೋಪಾರ್ಸನರ್ ಆಗುತ್ತಾಳೆ ಎಂದರೆ ಅಲ್ಲಿ ಕೋಪಾರ್ಸನರಿ ಜೀವಂತ ಇದೆ ಎಂದರ್ಥ, ಅಂದರೆ ತಂದೆ ಜೀವಂತ ಇದಾರೆ ಎಂಥರ್ಥ. 09–09–2005 ಕ್ಕೆ ಮುಂಚೆ ಕೋಪಾರ್ಸನರ್ ಸತ್ತಿದ್ದರೆ ಅದಕ್ಕೆ ಮುಂಚೆ ಯಾವ ರೀತಿಯಲ್ಲಿ ಕಾನೂನು ಜಾರಿಯಲ್ಲಿತ್ತು ಎಂಬುದು ಗಹನವಾಗುತ್ತದೆ. ಹಾಗಾಗಿ ಕೋಪಾರ್ಸನರಿಯ ಮಗಳಿಗೆ ಸಮಾನ ಹಕ್ಕು ನೀಡಲು 2005 ರ ತಿದ್ದು ಪಡಿ ಸಮಯಕ್ಕೆ ಸದರಿ

ಮತ್ತು ಅದನ್ನು ಮಾಡಲು ಸಾಧ್ಯವಾಗದಿದ್ದಾಗ ಮಾತ್ರ, ಹಿಂದಿನ ನಿಬಂಧನೆಯು ಮೇಲುಗೈ ಸಾಧಿಸುತ್ತದೆ ಮತ್ತು ಎರಡನೆಯದು ಶೂನ್ಯ ಆಗುತ್ತದೆ ... ಹಿಂದಿನ ದಾವಾಗಳಲ್ಲಿನ ಮನವಿಗಳ ಪರಿಶೀಲನೆಯಿಂದ ಮತ್ತು ತ್ವರಿತ ಪ್ರಕರಣದಲ್ಲಿನ ಮುಖ್ಯ ಸಾಕ್ಷಿಯಿಂದ, ಪಾರ್ಟಿಗಳು ಉದ್ದೇಶಪೂರ್ವಕವಾಗಿ ದಾವಾ ಸ್ವತ್ತುಗಳನ್ನು ವಿಭಜನೆಯ ವ್ಯಾಪ್ತಿಯಿಂದ ಹಿಂದಿನ ದಾವೆಯಲ್ಲಿ ಹೊರಗಿಟ್ಟಿವೆ ಎಂದು ಸೂಚಿಸುತ್ತದೆ, ಈ ಸ್ವತ್ತುಗಳು ದತ್ತಿಗಳಿಗೆ ಮೀಸಲಾಗಿವೆ ಮತ್ತು ಅವು ಭಾಗಶಃ ಅಥವಾ ವಿಭಜನೆಗೆ ಲಭ್ಯವಿಲ್ಲ. ಅಂತೆಯೇ, ಹೊಂದಾಣಿಕೆ ಅರ್ಜಿಯ ಷರತ್ತು (2) ದಾವಾ ಸ್ವತ್ತುಗಳಲ್ಲಿ ವಾದಿಗಳನ್ನು ಕೈಬಿಡುವಂತೆ ಓದಲು ಸಾಧ್ಯವಿಲ್ಲ ... ಉಲ್ಲೇಖಿತ ಪ್ರಕರಣದಲ್ಲಿನ ಸ್ವತ್ತುಗಳನ್ನು ಹಿಂದಿನ ಮೊಕದ್ದಮೆಯಲ್ಲಿ ಹೊರಗಿಡಲು ಕಾರಣ, ವಿಭಜನೆಯನ್ನು ಜಾರಿಗೆ ತರಲು ಚಾರಿಟಿ ಕಮಿಷನರ್ ಅನುಮತಿ ಅಗತ್ಯವಿತ್ತು, ಮತ್ತು ಅಂತಹ ಆಕ್ಷೇಪಣೆಯನ್ನು ತೆಗೆದುಹಾಕಿದಾಗ ಎರಡನೇ ವಿಭಾಗದ ಮೊಕದ್ದಮೆ ಹೂಡಲಾಯಿತು. ತ್ವರಿತ ಕೇಸಿನಲ್ಲಿ, ಪಾರ್ಟಿಗಳ ಒಪ್ಪಿಗೆಯಿಂದ, ದಾವಾ ಸ್ವತ್ತುಗಳನ್ನು ಉದ್ದೇಶಪೂರ್ವಕವಾಗಿ ಮತ್ತು ಬೇಕೆಂತಲೇ ಹಿಂದಿನ ಮೊಕದ್ದಮೆಯ ವ್ಯಾಪ್ತಿಯಿಂದ ಹೊರಗಿಡಲಾಗಿತ್ತು. ಅದರಂತೆ, ಅದರ ವಿಭಜನೆಗಾಗಿ ಎರಡನೇ ದಾವಾ ಸ್ಪಷ್ಟವಾಗಿ ನಿರ್ವಹಿಸಬಹುದಾಗಿದೆ.[1]

---

[1] ವೆಂಕಟರಾವ್ ವಿ. ನಾರಾಯಣ – ಮನು/ಕೆ.ಎ/0306/1993 (ಡಿ.ಬಿ)

# ತಂದೆಯ ವಿಭಾಗಿಸುವ ವ್ಯವಸ್ಥಾಪನೆ ಮಾಡುವ ಹಕ್ಕು

ತಂದೆಯಾದವನು ತನ್ನ ಕರ್ತ ಸ್ಥಾನದಲ್ಲಿ ನಿಂತು ಹಿಂದು ಅವಿಭಕ್ತ ಕುಟುಂಬವಾನ್ನು ವಿಭಾಗಿಸ ಬಹುದಾಗಿರುತ್ತದೆ. ಇದು ಎಲ್ಲರೂ ಒಪ್ಪಿಕೊಂಡಾಗ ಸಂಪೂರ್ಣ ಜಾರಿಯಾಗುತ್ತದೆ. ಕೋಪಾರ್ಸನರ್ ರವರು ತಮಗೆ ಬಂದಿರುವ ಅಂತಹ ಸಂಧರ್ಬಿಕ ಹಿಸ್ಸೆಯನ್ನು ಸಮಾನವಾಗಿ ಮಾಡಿಲ್ಲವೆಂದು ಪುನರ್ ವಿಭಾಗಕ್ಕೆ ದಾವೆ ಸಲ್ಲಿಸ ಬಹುದಾಗಿರುತ್ತದೆ. ಆದರೆ ಇಂತಹ ಅಧಿಕಾರವುಳ್ಳ ಕರ್ತ (ತಂದೆ) ರವರ ಅಧಿಕಾರ ವ್ಯಾಪ್ತಿ ವಿಭಾಗವನ್ನು ವಿಲ್ ಮಾದರಿಯಲ್ಲಿ ಮುಂದೆ ಹೀಗೆ ವಿಭಾಗವಾಗಬೇಕು ಎಂಬಂತೆ ಪತ್ರ ರಚಿಸಲು ಬರುವುದಿಲ್ಲ....... ಹಿಂದೂ ತಂದೆ ಮಿತಕ್ಷರ ಕಾನೂನಿನಿಂದ ಆಡಳಿತ ನಡೆಸುತ್ತಿರುವ ತನ್ನ ಪುತ್ರರೊಂದಿಗೆ ಜಂಟಿ ಕುಟುಂಬ ಆಸ್ತಿಯನ್ನು ತನ್ನ ಜೀವಿತಾವಧಿಯಲ್ಲಿ ಯಾವುದೇ ಕ್ಷಣದಲ್ಲಿ ವಿಭಜಿಸುವ ಅಧಿಕಾರವನ್ನು ಹೊಂದಿದ್ದಾನೆ. ಆ ಅಧಿಕಾರವನ್ನು ಚಲಾಯಿಸಲು ಪುತ್ರರ ಒಪ್ಪಿಗೆ ಅಗತ್ಯವಿಲ್ಲ ...... .. ಈ ಶಕ್ತಿಯು ಜಂಟಿ ಕುಟುಂಬ ಸ್ಥಾನಮಾನವನ್ನು ಅಡ್ಡಿಪಡಿಸುವ ಶಕ್ತಿಯನ್ನು ಗ್ರಹಿಸುತ್ತದೆ. ಜಂಟಿ ಕುಟುಂಬ ಆಸ್ತಿಯ ಭಾಗವನ್ನು ತನ್ನ ಕೈಯಲ್ಲಿ ಮಾಡಲು ತಂದೆಗೆ ಹಕ್ಕು ಇದ್ದರೂ, ಕುಟುಂಬದ ವಿವಿಧ ಸದಸ್ಯರ ನಡುವೆ ಜಂಟಿ ಕುಟುಂಬ ಆಸ್ತಿಯನ್ನು ಅವನ ಇಚ್ಛೆಯಂತೆ ವಿಭಜನೆ ಮಾಡಲು ಅವನಿಗೆ ಹಕ್ಕಿಲ್ಲ, ಖಂಡಿತವಾಗಿಯೂ, ಅವರ ಒಪ್ಪಿಗೆಯೊಂದಿಗೆ.... ಎಲ್ಲಾ ವಯಸ್ಕ ಸದಸ್ಯರಿಂದ ಸಮ್ಮತಿಸಲ್ಪಟ್ಟರೆ, ಪರಿಣಾಮಕಾರಿಯಲ್ಲದಿದ್ದರೂ ಅದು ಯಾವಾಗಲೂ ಕುಟುಂಬ ವ್ಯವಸ್ಥೆಯಾಗಿ ಪರಿಣಾಮಕಾರಿಯಾಗಬಹುದು, ಆದರೆ ಜಂಟಿ ಹಿಂದೂ ಕುಟುಂಬದ ತಂದೆಗೆ ವಿಭಜನೆಯ ಶಕ್ತಿಯನ್ನು ಚಲಾಯಿಸುವ ಸೋಗಿನಲ್ಲಿ ಕುಟುಂಬ ವ್ಯವಸ್ಥೆಯನ್ನು ವಿಧಿಸುವ ಅಧಿಕಾರವಿಲ್ಲ. ನಿಸ್ಸಂದೇಹವಾಗಿ ಅವನು ಹೊಂದಿದ್ದ ಆದರೆ

ಪರಿಣಾಮಕಾರಿಯಾಗಿ ಪ್ರಯೋಗ ಮಾಡಲು ಅವನು ವಿಫಲನಾಗಿದ್ದಾನೆ, ಎಲ್ಲಾ ಪುರುಷ ಸದಸ್ಯರ ಒಪ್ಪಿಗೆಯ ಅನುಪಸ್ಥಿತಿಯಲ್ಲಿ ಅವರನ್ನು ಕುಟುಂಬ ವ್ಯವಸ್ಥೆಯಾಗಿ ಬಂಧಿಸಲು ಸಾಧ್ಯವಿಲ್ಲ.... ಕುಟುಂಬ ನಿರ್ವಹಣೆಯು ಕುಟುಂಬದ ವಿವಿಧ ಸದಸ್ಯರ ನಡುವೆ ಸಾಮಾನ್ಯವಾಗಿ ಮತ್ತು ಸಮಂಜಸವಾಗಿ ಕುಟುಂಬದ ಹಿತದೃಷ್ಟಿಯಿಂದ ಇರಲು ಉದ್ದೇಶಿಸಿರುವ ಒಪ್ಪಂದವಾಗಿರಬೇಕು ಮತ್ತು ಎರಡನೆಯದಾಗಿ ಒಪ್ಪಂದವು ಅನುಮಾನಾಸ್ಪದ ಅಥವಾ ವಿವಾದಿತ ಹಕ್ಕುಗಳನ್ನು ರಾಜಿ ಮಾಡಿಕೊಳ್ಳುವ ಅಥವಾ ಕುಟುಂಬದ ಆಸ್ತಿಯನ್ನು ಅಥವಾ ಕುಟುಂಬದ ಸ್ಥಳ ಮತ್ತು ಸುರಕ್ಷತೆ ಸಂರಕ್ಷಿಸುವ ಉದ್ದೇಶದಿಂದ ಇರಬೇಕು. ... ಕುಟುಂಬ ವ್ಯವಸ್ಥೆಯಾಗಿ ಪರಿಣಾಮಕಾರಿಯಾಗಲು ಪತ್ರವು ಕಾರ್ಯಗತ ದಿನಾಂಕದಿಂದ ಕಾರ್ಯನಿರ್ವಹಿಸಲು ಉದ್ದೇಶಿಸಿರಬೇಕು, ಮತ್ತು ಅದನ್ನು ಎಲ್ಲಾ ಪೀಡಿತ ಪಾರ್ಟಿಗಳು ಒಪ್ಪಿಕೊಳ್ಳಬೇಕು ಮತ್ತು ಅಂಗೀಕರಿಸಬೇಕು ಮತ್ತು ಕಾರ್ಯನಿರ್ವಹಿಸಬೇಕು ...... .. [1]

ಮಿತಾಕ್ಷರ ಶಾಲೆಯಿಂದ ಆಡಳಿತ ನಡೆಸುವ ಜಂಟಿ ಕುಟುಂಬದಲ್ಲಿ, ತನ್ನ ಉನ್ನತ ಹಕ್ಕನ್ನು ಚಲಾಯಿಸುವ ತಂದೆಗೆ ಉನ್ನತ ಹಕ್ಕುಗಳಿವೆ, ಪ್ರಾಚೀನ ಹಿಂದೂ ಕಾನೂನಿನಲ್ಲಿ ಗುರುತಿಸಲ್ಪಟ್ಟಿದೆ. ತನ್ನನ್ನು ಮತ್ತು ಅಪ್ರಾಪ್ತ ಪುತ್ರರ ಒಳಗೊಂಡ ಜಂಟಿ ಕುಟುಂಬದ ಸಂಪೂರ್ಣ ಅಡ್ಡಿ ತರಲು ಅರ್ಹನಾಗಿರುತ್ತಾನೆ. ಅಪ್ರಾಪ್ತ ಪುತ್ರರು ಮತ್ತು ಅವರ ಇಚ್ಛೆಗೆ ವಿರುದ್ಧವಾಗಿ ಜಂಟಿ ಕುಟುಂಬ ಸ್ವತ್ತುಗಳ ಸಂಪೂರ್ಣ ವಿಭಜನೆಯನ್ನು ಉಂಟುಮಾಡುವುದು.[2]

---

[1] ಎ.ಐ.ಆರ್ 1980 ಎಸ್.ಸಿ 1173 – ಕಲ್ಯಾಣಿ ವಿ. ನಾರಾಯಣನ್

[2] ಅಪೂರ್ವ ವಿ. ಕಮೀಷನರ್ – 1983 (2) ಎಸ್.ಸಿ.ಸಿ 155

ಮದ್ರಾಸ್ ಹೈಕೋರ್ಟಿನ ಪ್ರಕರಣವೊಂದರ [1] ವ್ಯಾಖ್ಯಾನ ಗಮನಿಸಿ, ಹಿಂದೂ ಕಾನೂನಿನ ಪ್ರಕಾರ, ಒಂದು ಜಂಟಿ ಕುಟುಂಬದ ಸ್ವತ್ತುಗಳ ಭೌತಿಕ ವಿಭಜನೆಯಿಂದ, ವಿಭಜನೆಯನ್ನು ರೂಪಿಸುವ ಅಗತ್ಯವಿಲ್ಲ. ಸದಸ್ಯರ ಷೇರುಗಳನ್ನು ವ್ಯಾಖ್ಯಾನಿಸಿದ ನಂತರ ಮತ್ತು ನಿಗದಿಪಡಿಸಿದ ನಂತರ, ಜಂಟಿ ಸ್ಥಿತಿಯನ್ನು ಬೇರ್ಪಡಿಸುವುದು ಕಂಡುಬರುತ್ತದೆ. ಷೇರುದಾರರು ನಂತರ ಆಸ್ತಿಯ ಭೌತಿಕ ವಿಭಜನೆಯನ್ನು ಮಾಡಬಹುದು, ಅಥವಾ ಅವರು ಅದನ್ನು ಸಾಮಾನ್ಯವಾಗಿ ಆನಂದಿಸಲು ನಿರ್ಧರಿಸಬಹುದು. ಆದರೆ ಆಸ್ತಿ ತಕ್ಷಣವೇ ಜಂಟಿ ಆಗುವುದನ್ನು ನಿಲ್ಲಿಸುತ್ತದೆ, ಷೇರುಗಳನ್ನು ವ್ಯಾಖ್ಯಾನಿಸಲಾಗುತ್ತದೆ ಮತ್ತು ನಂತರ ಷೇರುದಾರರು ಅದನ್ನು ಸಾಮಾನ್ಯ-ಬಾಡಿಗೆದಾರಂತೆ ಹಿಡಿದಿರುತ್ತಾರೆ. ಆಸ್ತಿಯ ಭೌತಿಕ ವಿಭಜನೆಯ ಮೂಲಕ ಅಥವಾ ಅದರಲ್ಲಿರುವ ಷೇರುಗಳ ವ್ಯಾಖ್ಯಾನದಿಂದ ಒಂದು ವಿಭಾಗವು ಸಂಪೂರ್ಣ ಅಥವಾ ಭಾಗಶಃ ಇರಬಹುದು. ಜಂಟಿ ಕುಟುಂಬ ಸ್ವತ್ತುಗಳ ಒಂದು ಭಾಗದ ವಿಭಜನೆಯು ಸದಸ್ಯರಲ್ಲಿ ಸ್ಥಾನಮಾನದಲ್ಲಿ ಒಂದು ವಿಭಾಗವನ್ನು ಸೂಚಿಸಬೇಕಾಗಿಲ್ಲ ಮತ್ತು ಭಾಗಶಃ ವಿಭಾಗದ ಸಂದರ್ಭದಲ್ಲಿ ಸ್ಥಾನಮಾನದಲ್ಲಿ ಬೇರ್ಪಡಿಕೆ ನಡೆದಿದೆಯೆ ಎಂದು ವಿಭಜನೆಯ ಮೇಲೆ ಪರಿಣಾಮ ಬೀರುವ ದಾಖಲಾತಿ ನಿಯಮಗಳಿಂದ ಅಥವಾ ಪಾರ್ಟಿಗಳ ನಡವಳಿಕೆಯಿಂದ ಸಂಗ್ರಹಿಸಬೇಕು. ತಂದೆ ಮತ್ತು ಅವನ ಪುತ್ರರನ್ನು ಒಳಗೊಂಡ ಜಂಟಿ ಹಿಂದೂ ಕುಟುಂಬದಲ್ಲಿ, ತಂದೆಯು ತನ್ನ ಪುತ್ರರ ಒಪ್ಪಿಗೆಯನ್ನು ಲೆಕ್ಕಿಸದೆ, ಅವರ ಮತ್ತು ತನ್ನ ನಡುವೆ ಮಾತ್ರವಲ್ಲದೆ ಗಂಡುಮಕ್ಕಳ ನಡುವೆ ವಿಭಜನೆಯನ್ನು ಉಂಟುಮಾಡಲು ಅಧಿಕಾರವನ್ನು ಹೊಂದಿದ್ದಾನೆ ....... ...... ತಂದೆಯ ಶಕ್ತಿಯು ಮಿತಿ ಮತ್ತು ಗಡಿಗಳ ಮೂಲಕ ಒಂದು ವಿಭಾಗವನ್ನು ಪರಿಣಾಮ ಬೀರುವುದಕ್ಕೆ ಮಾತ್ರವಲ್ಲದೆ ಅವನ ಮತ್ತು

---

[1] ಮೇಯಪ್ಪ ವಿ. ಕಮೀಷನರ್ – ಮನು/ಟಿ.ಎನ್./0130/1951 (ಡಿ.ಬಿ)

ಅವನ ಪುತ್ರರ ನಡುವಿನ ಸ್ಥಾನಮಾನವನ್ನು ವಿಭಜಿಸುತ್ತದೆ ........... ಒಂದು ವಿಭಾಗ ಹಿಂದೂ ಕಾನೂನಿನಿಂದ ತಂದೆಗೆ ನೀಡಲಾದ ಅಧಿಕಾರವನ್ನು ಚಲಾಯಿಸುವಾಗ ತಂದೆಯಿಂದ ಪ್ರಭಾವಿತವಾಗಿದ್ದರೆ, ನ್ಯಾಯಯುತವಾಗಿರಬೇಕು ಮತ್ತು ಹಂಚಿಕೆಗಳು ಗಣನೀಯವಾಗಿ ಸಮಾನವಾಗಿರಬೇಕು. .... ಎಲ್ಲಿ ಹಿಂದೂ ತಂದೆಯು ತನ್ನ ಅಧಿಕಾರವನ್ನು ಚಲಾಯಿಸುವಾಗ ತನ್ನ ಮತ್ತು ಅವನ ಪುತ್ರರ ನಡುವೆ ಒಂದು ವಿಭಜನೆಯನ್ನು ಪರಿಣಾಮ ಬೀರುತ್ತಾನೆ ಮತ್ತು ಗಂಡುಮಕ್ಕಳಿಗೆ ಜಂಟಿ ಆಸ್ತಿಯಲ್ಲಿ ಅವರಿಗೆ ಸೇರಬೇಕಾದಕ್ಕಿಂತ ಬದಲಾಗಿ ಅವರ ವಂಚನೆಗಾಗಿ ಒಂದು ಸಣ್ಣ ಪಾಲನ್ನು ಹಂಚಲಾಗುತ್ತದೆ, ಸಮಾನ ಮತ್ತು ನ್ಯಾಯಸಮ್ಮತ ಹಕ್ಕುಗಳನ್ನು ವಂಚಿಸಿದ್ದಕ್ಕೆ, ಸಮಗ್ರ ಅಸಮಾನತೆ ಅಥವಾ ವಂಚನೆಯ ಆಧಾರದ ಮೇಲೆ ವಿಭಜನೆಯನ್ನು ಪಕ್ಕಕ್ಕೆ ಇಡುವುದು ಪುತ್ರರಿಗೆ ಮುಕ್ತವಾಗಿರುತ್ತದೆ. ವಿಭಜನೆಯ ಸಮಯದಲ್ಲಿ ಪುತ್ರರು ಅಪ್ರಾಪ್ತ ವಯಸ್ಕರಾಗಿದ್ದರೆ, ಅವರು ತಮ್ಮ ಮೆಜಾರಿಟಿಗೆ ಬಂದ ನಂತರ ಅವರು ವಿಭಾಗವನ್ನು ರದ್ದುಪಡಿಸಬಹುದು ............ ಬೇರೆ ರೀತಿಯಲ್ಲಿ ಹೇಳುವುದಾದರೆ, ವ್ಯವಹಾರವು ಶೂನ್ಯವಲ್ಲ ಆದರೆ ಪುತ್ರರ ಆಯ್ಕೆ ಮಾಡಿದರೆ ಕೇವಲ ಅನೂರ್ಜಿತಗೊಳಿಸಬಹುದು, ಮತ್ತು ಪುತ್ರರು ಅದರೊಂದಿಗೆ ನಿಲ್ಲಲು ಅಥವಾ ಅದರ ನಿಯಮಗಳನ್ನು ಜಾರಿಗೊಳಿಸಲು ಬಯಸಿದರೆ, ಹಂಚಿಕೆಗಳ ಅಸಮಾನತೆಯ ಆಧಾರದ ಮೇಲೆ ವ್ಯವಸ್ಥೆಯ ಅಮಾನ್ಯತೆಯನ್ನು ಸಮರ್ಥಿಸಲು ಅದು ತಂದೆಗೆ ಮುಕ್ತವಾಗುವುದಿಲ್ಲ. ..... ಎಲ್ಲಿ ಯಾವುದನ್ನಾದರೂ ಸೇರಿಸಿದ ಶಕ್ತಿಯ ಅನುಷ್ಠಾನವು ಅಸಮರ್ಪಕವಾಗಿದೆ, ಕಾರ್ಯಗತ ಒಳ್ಳೆಯದೇ ಆದರೆ, ಹೆಚ್ಚುವರಿ ಕೆಟ್ಟದು, ಕಾರ್ಯಗತ ಮಾಡಿದ್ದು ಮೂಲವಾಗಿ ಶೂನ್ಯವಲ್ಲ. ವಿಭಜನೆಯ ವ್ಯವಸ್ಥೆಯಲ್ಲಿನ ಇತರ ನಿಯಮಗಳಿಗೆ ತೊಂದರೆಯಾಗದಂತೆ ತಂದೆಯಿಂದ ಉಳಿಸಿಕೊಂಡಿರುವ ಹೆಚ್ಚುವರಿ ಆಸ್ತಿಯ ಮರು

ಹಂಚಿಕೆಯಿಂದ ವಿಭಾಗದಲ್ಲಿನ ಅಸಮಾನತೆಯನ್ನು ಪರಿಹರಿಸಬಹುದು. ತಂದೆಯಿಂದ ಪ್ರಭಾವಿತವಾದ ಆಸ್ತಿಗಳ ವಿಭಜನೆಯು ಅವನ ಅಪ್ರಾಪ್ತ ಪುತ್ರರಿಗೆ ಪೂರ್ವಾಗ್ರಹ ಪೀಡಿತವಾಗಿದ್ದರೂ ಮತ್ತು ಅವರ ನಿದರ್ಶನದಲ್ಲಿ ಪಕ್ಕಕ್ಕೆ ಇಡಬೇಕಾದರೆ, ತಂದೆ ಮತ್ತು ಅವನ ಪುತ್ರರ ನಡುವಿನ ಸ್ಥಾನಮಾನದ ವಿಭಜನೆಯು ವಹಿವಾಟಿನಿಂದ ಉಂಟಾಗುತ್ತಿತ್ತು. ...... ವಿಭಜನೆಯ ಸ್ವಾಮ್ಯತೆ, ಅದು ಎಲ್ಲದರಲ್ಲೂ ಪರಿಣಾಮ ಬೀರಬೇಕೇ, ಒಂದು ನಿರ್ದಿಷ್ಟ ಸಮಯದಲ್ಲಿ ಅದು ಪರಿಣಾಮ ಬೀರಬೇಕೇ, ಬೇರೆ ಸದಸ್ಯರಿಗೆ ಯಾವ ಸ್ವತ್ತುಗಳನ್ನು ನೀಡಬೇಕು ಮತ್ತು ಕುಟುಂಬದ ಸ್ವತ್ತುಗಳನ್ನು ಹೇಗೆ ವಿಂಗಡಿಸಬೇಕು, ಎಲ್ಲಾ ವಿಷಯಗಳು ಅವರು ವಯಸ್ಕರಾಗಿದ್ದರೆ ಕೋಪಾರ್ಸನರ್ ಗಳು ನಿರ್ಧರಿಸಬೇಕು, ಕುಟುಂಬವು ತನ್ನನ್ನು ಮತ್ತು ಅವನ ಅಪ್ರಾಪ್ತ ಪುತ್ರರನ್ನು ಒಳಗೊಂಡಿದ್ದರೆ ಅವರ ಪಾಲಕರು, ಅವರು ಅಪ್ರಾಪ್ತ ವಯಸ್ಕರಾಗಿದ್ದರೆ ಅಥವಾ ಅವರ ತಂದೆಗೆ ನಿರ್ಧರಿಸಬೇಕು. ನಿಜವಾದ ಮತ್ತು ವಾಸ್ತವಿಕ ವಿಭಜನೆಯು ಪರಿಣಾಮಕಾರಿಯಾಗಿದೆ ಎಂದು ಕಂಡುಬಂದ ನಂತರ, ವಿಭಾಗದಲ್ಲಿನ ಆಪಾದಿತ ಅಸಮಾನತೆಗಳನ್ನು ಪರಿಹರಿಸಲು ಕಂದಾಯ ಪ್ರಾಧಿಕಾರಕ್ಕೆ ಇಲ್ಲ, ಅದನ್ನು ಸಣ್ಣ ಕೋಪಾರ್ಸನರ್ ಹಿತದೃಷ್ಟಿಯಿಂದ ನಿರ್ಲಕ್ಷಿಸಬೇಕು.

# ಅಧ್ಯಾಯ–9 (ಅಗತ್ಯ ಬದಲಾವಣೆ)

## ವಿಭಾಗ ದಾವೆಗಳಲ್ಲಿ ಬದಲಾವಣೆ ಬಯಸಿರುವ ಕೋರ್ಟ್

ವಿಭಾಗದ ಬಗ್ಗೆ ಚರ್ಚೆ ಮತ್ತು ಕಾನೂನು ರಚಿಸುವವರ ಕಾರ್ಯ ಆಗಲಿ ಎಂಬ ಬಗ್ಗೆ ಗಹನವಾದ ಅಂಶಗಳನ್ನು ಮಾನ್ಯ ಸುಪ್ರೀಮ್ ಕೋರ್ಟಿನ ಜಸ್ಟೀಸ್ ಆರ್.ವಿ. ರವೀಂದ್ರನ್ ಮತ್ತು ಜಸ್ಟೀಸ್ ಬಿ ಸುದರ್ಶನ್ ರೆಡ್ಡಿ ಅವರ ವಿಭಾಗ ಪೀಠ ಹೀಗೆ ಅಭಿಪ್ರಾಯ ಮಂಡಿಸಿದೆ.[1]

1. "ಶತಮಾನಗಳ ಹಳೆಯ ನಾಗರಿಕ (ಸಿವಿಲ್) ಕಾರ್ಯವಿಧಾನವು ತೀರ್ಪುಗಳು, ಆದೇಶಗಳು, ಪ್ರಾಥಮಿಕ ಆದೇಶಗಳು ಮತ್ತು ಅಂತಿಮ ಆದೇಶಗಳು ಮತ್ತು ತೀರ್ಪುಗಳನ್ನು ಅಮುಲ್ಜಾರಿಗೆ ಒಳಪಡಿಸುವ ಚಿಂತನೆಯಿದೆ.

2. ಅದು ತೀರ್ಪು ಮತ್ತು ಅಮುಲ್ಜಾರಿ ನಡುವೆ 'ವಿರಾಮ'ವನ್ನು ಒದಗಿಸುತ್ತದೆ. ಪ್ರಾಥಮಿಕ ತೀರ್ಪು ಮತ್ತು ಅಂತಿಮ ತೀರ್ಪುಗಳ ನಡುವಿನ ನಮ್ಮ ಅಭ್ಯಾಸದಿಂದ 'ವಿರಾಮ' ಕೂಡ ಅಭಿವೃದ್ಧಿಯಾಗಿದೆ.

3. ಪ್ರಾಥಮಿಕ ತೀರ್ಪಿನಲ್ಲಿ ಒಳಗೊಂಡಿರುವ ತೀರ್ಪು ಅಥವಾ ಘೋಷಣೆಯನ್ನು ಸ್ವಯಂಪ್ರೇರಿತವಾಗಿ ಅನುಸರಿಸಲು ಪ್ರತಿವಾದಿಯನ್ನು ಸಕ್ರಿಯಗೊಳಿಸುವುದಕ್ಕೆ 'ವಿರಾಮ'. ಅಮುಲ್ಜಾರಿಯ ವಾಸ್ತವತೆಯೆಂದರೆ, ಪ್ರತಿವಾದಿಗಳು ಸಾಮಾನ್ಯವಾಗಿ ಡಿಕ್ರಿ ಅನುಸಾರವಾಗಿ ಆಜ್ಞೆಗಳನ್ನು ಅನುಸರಿಸುವುದಿಲ್ಲ. ಕೆಲವೇ ಸಂದರ್ಭಗಳಲ್ಲಿ, ಒಂದು ವಿಭಜನಾ ಮೊಕದ್ದಮೆಯಲ್ಲಿ ಪ್ರತಿವಾದಿಗಳು, ಪ್ರಾಥಮಿಕ ಆಜ್ಞೆಯಲ್ಲಿ ಆಗಿರುವಂತೆ ಆಸ್ತಿಯನ್ನು ಸ್ವಯಂಪ್ರೇರಣೆಯಿಂದ ವಿಭಾಗಿಸುತ್ತಾರೆ.............

---

[1] ಶುಬ್ ಕರಣ್ ಬಬ್ಲಾ ವಿ. ಸೀತಾ ಸರನ್ ಬುಬ್ಲಾ – ಎ.ಐ.ಆರ್ 2009 ಎಸ್.ಸಿ 2863

4. ನ್ಯಾಯಾಲಯಕ್ಕೆ ಬಂದ ವ್ಯಾಜ್ಯಕಾರರು ಪರಿಹಾರ ಪಡೆಯಲು ಬಯಸುತ್ತಾರೆ, ಅವರ ಪ್ರಕರಣವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದಾಗ ಬರೀ ಕಾಗದದ ತೀರ್ಪು ಪಡೆಯುವಲ್ಲಿ ಆಸಕ್ತಿ ಇರುವುದಿಲ್ಲ. ಅವರು ಏನು ಬಯಸುತ್ತಾರೆಂದರೆ ಪರಿಹಾರ.

5. ಅದು ಹಣಕ್ಕಾಗಿ ಒಂದು ದಾವೆ ಆಗಿದ್ದರೆ, ಅವರು ಹಣವನ್ನು ಬಯಸುತ್ತಾರೆ. ಅದು ಆಸ್ತಿಯ ಒಂದು ದಾವೆ ಆಗಿದ್ದರೆ, ಆಸ್ತಿಯನ್ನು ಅವನು ಬಯಸುತ್ತಾನೆ.

6. ಹಣವನ್ನು ವಸೂಲಿ ಮಾಡಿಕೊಳ್ಳಲು ಮೊಕದ್ದಮೆ ಹೂಡುವಾಗ ಅವರು ಮೊದಲು ವಕೀಲರನ್ನು ತೊಡಗಿಸಿಕೊಳ್ಳಬೇಕು ಮತ್ತು ತೀರ್ಪು ಪಡೆಯಬೇಕು ಮತ್ತು ಆಜ್ಞೆಯನ್ನು ಕಾರ್ಯಗತಗೊಳಿಸಲು ಮತ್ತೆ ವಕೀಲರನ್ನು ತೊಡಗಿಸಿಕೊಳ್ಳಬೇಕು ಇದು ಏಕೆ ಹೀಗೆಂದು ಅವರು ವಾಸ್ತವವಾಗಿ ಆಶ್ಚರ್ಯ ಪಡುತ್ತಾರೆ.

7. ಅಂತೆಯೇ, ಅವರು ವಿಭಜನೆಗೆ ಮೊಕದ್ದಮೆ ಹೂಡಿದಾಗ, ಅವರು ಮೊದಲಿಗೆ ಒಂದು ಪ್ರಾಥಮಿಕ ತೀರ್ಪು ಪಡೆಯಲು, ನಂತರ ಅರ್ಜಿ ಸಲ್ಲಿಸಬೇಕು ಮತ್ತು ಅಂತಿಮ ತೀರ್ಪು ಪಡೆಯಬೇಕು ಮತ್ತು ನಂತರ ನಿಜವಾದ ಪರಿಹಾರವನ್ನು ಪಡೆಯಲು ಅಮುಲ್ಜಾರಿ ನಡೆಸಬೇಕು, ಇದು ಏಕೆ ಎಂದು ಆಶ್ಚರ್ಯ ಪಡುತ್ತಾರೆ.

8. ಸಾಮಾನ್ಯವಾದ ಪ್ರಶ್ನೆ: ಏಕೆ ನಿರಂತರ ಪ್ರಕ್ರಿಯೆಯಿಲ್ಲ? ಹಣದ ತೀರ್ಪು ಜಾರಿಗೆ ಬಂದಾಗ, ನ್ಯಾಯಾಲಯವು ಪಾವತಿಯ ದಿನಾಂಕವನ್ನು ಮತ್ತು ಪಾವತಿಸದಿದ್ದಲ್ಲಿ, ಅಮುಲ್ಜಾರಿಯೊಂದಿಗೆ ಮುಂದುವರಿಯಿರಿ ಎಂದು ಏಕೆ ಸ್ಪಷ್ಟಪಡಿಸುವುದಿಲ್ಲ;

9. ಒಂದು ವಿಭಾಗದ ಮೊಕದ್ದಮೆಯಲ್ಲಿ ಪ್ರಾಥಮಿಕ ತೀರ್ಪು ಅಂಗೀಕರಿಸಲ್ಪಟ್ಟಾಗ, ನ್ಯಾಯಾಲಯವು ನಿಯೋಜಿತರನ್ನು (ಕಮಿಷನರ್ ಅನ್ನು) ನೇಮಿಸುವುದಕ್ಕೆ ದಿನಾಂಕವನ್ನು ನಿಗದಿಪಡಿಸುವುದಿಲ್ಲ ಮತ್ತು

ಅಂತಿಮ ತೀರ್ಪು ಮಾಡಿ ಮತ್ತು ಅವರ ಬೇರ್ಪಡಿಸಿದ ಪಾಲನ್ನು ನಿಜವಾದ ಸ್ವಾಮ್ಯವನ್ನು ತಲುಪಿಸುವುದಿಲ್ಲ.

10. ಅವರು ವಿವಿಧ ಹಂತಗಳಲ್ಲಿ ನ್ಯಾಯಾಲಯವನ್ನು ನೆನಪಿಸಲು ಮತ್ತು ನ್ಯಾಯಾಲಯವನ್ನು ಸಂಪರ್ಕಿಸಲು ಯಾಕೆ ಅಗತ್ಯ?

11. ದಾವೆಗಳ ಕೃತಕ ವಿಭಾಗದ ಪ್ರಾಥಮಿಕ ತೀರ್ಪು ಪ್ರಕ್ರಿಯೆಗಳು, ಅಂತಿಮ ತೀರ್ಪು ವಿಚಾರಣೆಗಳು ಮತ್ತು ಅಮುಲ್ಜಾರಿ ವಿಚಾರಣೆಗಳ ಕಾರಣದಿಂದಾಗಿ, ಹಲವು ವಿಚಾರಣಾ ನ್ಯಾಯಾಧೀಶರು ನ್ಯಾಯಾಂಗ ಕಾರ್ಯವು ಹಕ್ಕನ್ನು ತೀರ್ಮಾನವನ್ನು ಅವರು ಆ ಭಾಗದಲ್ಲಿ ಮಾತ್ರ ಕೇಂದ್ರೀಕರಿಸಬೇಕು ಎಂದು ನಂಬುತ್ತಾರೆ.

12. ಪರಿಣಾಮವಾಗಿ, ಸಹಾಯಕವಾದ ಕಾರ್ಯಗಳೆಂದು ಪರಿಗಣಿಸಲ್ಪಡುವ ಅಂತಿಮ ತೀರ್ಪು ಮತ್ತು ಅಮುಲ್ಜಾರಿ ಪ್ರಕ್ರಿಯೆಗಳಿಗೆ ಸಾಕಷ್ಟು ಪ್ರಾಮುಖ್ಯತೆಯನ್ನು ನೀಡಲಾಗುವುದಿಲ್ಲ.

13. ದಾವೆದಾರನು ಪರಿಹಾರವನ್ನು ಪಡೆಯುತ್ತಾನೆ ಎಂದು ಖಾತರಿಪಡಿಸುವುದಿಲ್ಲ, ಕೇಸುಗಳನ್ನು ವಿಲೇವಾರಿ ಮಾಡುವುದರ ಮೇಲೆ ಗಮನ ಕೇಂದ್ರೀಕರಿಸಿರುತ್ತೆ. ಆದರೆ ಗಮನ ಕೇಂದ್ರೀಕೃತವಾಗಿಸಿ ಪ್ರಕರಣಗಳನ್ನು ಮಾತ್ರ ವಿಲೇವಾರಿ ಮಾಡಬಾರದು, ಆದರೆ ಪಕ್ಷಕಾರನು ನ್ಯಾಯಾಲಯಕ್ಕೆ ಬಂದಿರುವ ಪರಿಹಾರದ ಆರಂಭಿಕವಾಗಿ ಮತ್ತು ಸುಲಭವಾಗಿ ಪಡೆಯುವಿಕೆ ಸಹಾ ಇರಬೇಕು.

14. ವಕೀಲರಲ್ಲಿ ಸಹ, ಪರಿಹಾರವನ್ನು ಪಡೆದುಕೊಳ್ಳದೆ, ತೀರ್ಪು ಪಡೆಯಲು ಮಾತ್ರ ಪ್ರಾಮುಖ್ಯತೆಯನ್ನು ನೀಡಲಾಗುತ್ತಿದೆ. ಅನೇಕ ವಕೀಲರು ಪ್ರಾಥಮಿಕ ತೀರ್ಪಿನವರೆಗೆ ವಕೀಲರು ದಾವೆಗಳನ್ನು ನಿಭಾಯಿಸುತ್ತಾರೆ, ನಂತರ ಅಂತಿಮ ತೀರ್ಪು ನಡೆಸಲು ತಮ್ಮ ಕಿರಿಯ ವಕೀಲರಿಗೆ ಅದನ್ನು ಒಪ್ಪಿಸುತ್ತಾರೆ ಮತ್ತು ನಂತರ ಅಮುಲ್ಜಾರಿ ಪ್ರಕ್ರಿಯೆಗಳನ್ನು ನಡೆಸಲು ಅವರ ಗುಮಾಸ್ತರಿಗೆ ಅದನ್ನು ಕೊಡುತ್ತಾರೆ.

15. ಅನೇಕ ಬಾರಿ, ಒಂದು ಪಕ್ಷಕಾರ ಪ್ರಾಥಮಿಕ ತೀರ್ಪು ಪಡೆದುಕೊಳ್ಳುವ ಹೊತ್ತಿಗೆ ತನ್ನ ಹಣಕಾಸಿನ ಮತ್ತು ಶಕ್ತಿಯನ್ನು ಕಾಲಿಮಾಡಿಕೊಂಡಿರುತ್ತಾನೆ ಮತ್ತು ಅಂತಿಮ ಪರಿಹಾರ ಪಡೆಯಲು ವಿಷಯವನ್ನು ಹಿಡಿಯಲು ಸಾಮರ್ಥ್ಯ ಅಥವಾ ಶಕ್ತಿಯನ್ನು ಹೊಂದಿರುವುದಿಲ್ಲ.

16. ಇದರ ಪರಿಣಾಮವಾಗಿ, ಒಂದು ಮೊಕದ್ದಮೆ ಒಂದು ವರ್ಷ ಅಥವಾ ಎರಡು ಒಳಗೆ ತೀರ್ಪು ಅಥವ ಪ್ರಾಥಮಿಕ ತೀರ್ಪು ನೀಡಲಾಗುವುದು ಎಂಬುದು ನಿಗದಿಪಡಿಸಲ್ಪಟ್ಟ ಪ್ರಕರಣಗಳಲ್ಲಿ ನಾವು ಕಂಡುಹಿಡಿದೇವೆ, ಅಂತಿಮ ತೀರ್ಪು ಮುಂದುವರಿದು ಮತ್ತು ಅಮುಲ್ಜಾರಿ ಪೂರ್ಣಗೊಳ್ಳುವವರೆಗೆ ದಶಕಗಳು ತೆಗೆದುಕೊಳ್ಳುತ್ತದೆ.

17. ಇದು ನಾಗರಿಕ (ಸಿವಿಲ್) ನ್ಯಾಯ ವ್ಯವಸ್ಥೆಯ ವಿಶ್ವಾಸಾರ್ಹತೆಯ ಗಣನೀಯ ವಿಳಂಬ ಮತ್ತು ಪರಿಣಾಮಕಾರಿ ನಷ್ಟಕ್ಕೆ ಕಾರಣವಾಗುವ ಪ್ರದೇಶವಾಗಿದೆ. ನ್ಯಾಯಾಲಯಗಳು ಮತ್ತು ವಕೀಲರು ಅಂತಿಮ ತೀರ್ಪು ಮತ್ತು ಅಮುಲ್ಜಾರಿಗಳಿಗೆ ಮುಖ್ಯ ದಾವೆಗಳಿಗೆ ನೀಡಿದಂತೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಬೇಕು.

18. ಪ್ರಸ್ತುತ ವ್ಯವಸ್ಥೆಯಲ್ಲಿ, ವಿಭಜನೆಗಾಗಿ ಪ್ರಾಥಮಿಕ ತೀರ್ಪು ಅಂಗೀಕರಿಸಲ್ಪಟ್ಟಾಗ, ವಾದಿ ತೀರ್ಪುಗಳ ಫಲವನ್ನು ನೋಡುತ್ತಾನೆ ಎಂಬುದಕ್ಕೆ ಯಾವುದೇ ಗ್ಯಾರಂಟಿ (ಖಾತರಿ) ಇಲ್ಲ. ಪ್ರೈವಿ ಕೌನ್ಸಿಲ್ನ ನುಡಿಗಟ್ಟುಗಳ ಪ್ರಕಾರ, "ಒಂದು ತೀರ್ಪು ಪಡೆದಾಗ ವ್ಯಾಜ್ಯಕಾರನ ತೊಂದರೆಗಳು ಪ್ರಾರಂಭವಾಗುತ್ತದೆ."

19. ಅವರು ದಾವೆಯಲ್ಲಿ ಪರಿಹಾರವನ್ನು ಪಡೆಯದ ಹೊರತು ಒಂದು ಪಕ್ಷಕಾರನಿಗೆ ದಾವೆಯಲ್ಲಿ ಯಶಸ್ಸು ಸಾಧಿಸಲು ಸಾಧ್ಯವಿಲ್ಲವೆಂದು ನೆನಪಿಟ್ಟುಕೊಳ್ಳುವುದು ಅವಶ್ಯಕ. ಆದ್ದರಿಂದ ನಿಜವಾಗಿಯೂ ಅರ್ಥಪೂರ್ಣ ಮತ್ತು ಪರಿಣಾಮಕಾರಿಯಾಗಬೇಕಾದರೆ, ಸಂಹಿತೆಯ ಯೋಜನೆಯು ಪಕ್ಷಕಾರರು ತ್ವರಿತವಾಗಿ ತೀರ್ಪು ಪಡೆಯಲು

ಸಕ್ರಿಯಗೊಳಿಸಬೇಕು, ಆದರೆ ಹಾಗೆಯೇ ತ್ವರಿತವಾಗಿ ಪರಿಹಾರವನ್ನು ಪಡೆಯಬೇಕು.

20. ಇದಕ್ಕೆ ನಾಗರಿಕ (ಸಿವಿಲ್) ಮೊಕದ್ದಮೆಗೆ ಸಂಬಂಧಿಸಿದ ಒಂದು ಪರಿಕಲ್ಪನಾತ್ಮಕ ಬದಲಾವಣೆಯ ಅಗತ್ಯವಿರುತ್ತದೆ, ಆದ್ದರಿಂದ ದಾವೆಗಳಲ್ಲಿನ ಒತ್ತು ವಿಲೇವಾರಿ ಮಾಡುವುದರ ಮೇಲೆ ಮಾತ್ರವಲ್ಲದೇ ದಾವೆದಾರರಿಗೆ ಪರಿಹಾರವನ್ನು ಪಡೆದುಕೊಳ್ಳುವುದರಲ್ಲೂ ಸಹ ಭದ್ರತೆ ಇರಬೇಕು.

21. ಕಾನೂನಿನ ಆಯೋಗ ಮತ್ತು ಸಂಸತ್ತು ಈ ವಿಷಯದ ಬಗ್ಗೆ ತಮ್ಮ ಗಮನವನ್ನು ಹರಿಸುತ್ತವೆ ಮತ್ತು ಸೂಕ್ತವಾದ ಶಿಫಾರಸುಗಳನ್ನು / ತಿದ್ದುಪಡಿಗಳನ್ನು ಮಾಡುತ್ತವೆ ಎಂದು ಆಶಿಸುತ್ತೇವೆ ಹಾಗಾದರೆ ಅದರ (ದಾವೆ) ಪ್ರಾರಂಭದ ಹಂತದಿಂದ ನಿಜವಾದ ಪರಿಹಾರವನ್ನು ಪಡೆದುಕೊಳ್ಳುವ ಹಂತಕ್ಕೆ ದಾವೆ ನಿರಂತರ ಪ್ರಕ್ರಿಯೆ ಆಗುತ್ತದೆ.

22. ಹಕ್ಕಿನ ಘೋಷಣೆಗಾಗಿ ಮುಂದುವರಿಯುವ ಪ್ರಸ್ತುತ ವ್ಯವಸ್ಥೆಯನ್ನು, ಪರಿಹಾರದ ಪರಿಮಾಣ ಅಥವಾ ದೃಡೀಕರಣ ಪ್ರತ್ಯೇಕ ವ್ಯವಸ್ಥೆ, ಪರಿಹಾರವನ್ನು ಪಡೆಯಲು ಪ್ರತ್ಯೇಕವಾಗಿ ವ್ಯವಸ್ಥೆಯನ್ನು ಮುಂದುವರಿಸುವುದು, ಪ್ರಸ್ತುತ ಅವಶ್ಯಕತೆಗಳಿಗೆ ಅನುಗುಣವಾಗಿಲ್ಲ.

23. ಅಂತಿಮ ತೀರ್ಪು ಪ್ರಕ್ರಿಯೆಗಳಿಗೆ ಪ್ರತ್ಯೇಕ ಸಂಖ್ಯೆಗಳನ್ನು ನಿಯೋಜಿಸುವ ಒಂದು ಅಭ್ಯಾಸ ಇದ್ದರೆ ಅದನ್ನು ತಪ್ಪಿಸಬೇಕು. ಪ್ರತಿ ಹಂತದಲ್ಲಿ ಪ್ರತಿವಾದಿಗಳಿಗೆ ಹೊಸ ಸೂಚನೆಗಳನ್ನು ನೀಡುವುದು ಸಹ ತಪ್ಪಿಸಬೇಕು. ಸಿವಿಲ್ ಪ್ರಕ್ರಿಯಾ ನಿಯಮವು ಪರಿಹಾರವನ್ನು ಪಡೆಯುವ ಹಂತಕ್ಕೆ ದಾವೆಯನ್ನು ಸಲ್ಲಿಸುವ ಹಂತದಿಂದ ನಿರಂತರ ಮತ್ತು ತಡೆರಹಿತ ಪ್ರಕ್ರಿಯೆ ಒದಗಿಸಬೇಕು.

## ಪೂರ್ವಾಪೇಕ್ಷಿತಗಳ ಸಂಶೋಧನೆ ದಾಖಲಿಸುವ ಅಗತ್ಯವಿದೆ

"ಕಾನೂನಿಗೆ ತಕ್ಕಂತೆ ನೆಲೆಸಿದ ತತ್ವ ಎಂಬ ಸ್ಥಿತಿಯನ್ನು ಆದರ್ಶವಾಗಿ ಹೇಳಿ ನಾವು ಪರಿಗಣಿಸಬಹುದಾದದ್ದೇನೆಂದರೆ, ಸಹ–ಪಾಲುದಾರ, ಕೋಪಾರ್ಸೆನರ್, ಸಹ–ಮಾಲೀಕ ಅಥವಾ ಜಂಟಿ ಮಾಲೀಕ, ಈ ಸಂದರ್ಭದಲ್ಲಿ, ಇತರೆ ಪಾಲುದಾರರ ಮೇಲೆ ವಿಭಾಗಕ್ಕಾಗಿ ಮತ್ತು ಪ್ರತ್ಯೇಕ ಸ್ವಾಧೀನಕ್ಕಾಗಿ ದಾವೆಯನ್ನು ಸಲ್ಲಿಸಿರುವಾಗ, ನ್ಯಾಯಾಲಯವು ಮೊದಲಹಂತದಲ್ಲಿ ದಾವೆಯ ಆಸ್ತಿಗಳ ಸ್ವಭಾವ (ಪ್ರಕೃತಿ) ಮತ್ತು ಲಕ್ಷಣವನ್ನು ಶೋಧಿಸಬೇಕಿರುತ್ತದೆ, ಉದಾಹರಣೆಗೆ ದಾವ ಸ್ವತ್ತುಗಳ ಮೂಲ ಮಾಲೀಕನು ಯಾರು, ಆತ/ ಆಕೆ ಯಾವ ದ್ರವ್ಯ ಮೂಲದಿಂದ ಅಂತಹ ಆಸ್ತಿಯನ್ನು ಆರ್ಜಿಸಿದ್ದು, ಅದು ಆಕೆ/ಆತನ ಸ್ವಯಾರ್ಜಿತ ಆಸ್ತಿಯೇ ಅಥವ ಪೂರ್ವಜರ ಆಸ್ತಿಯೇ ಅಥವ ಜಂಟಿ ಆಸ್ತಿಯೇ ಅಥವ ಆತನ/ಆಕೆಯ ಕೈಯಲ್ಲಿರುವ ಕೋಪಾರ್ಸನರಿ ಆಸ್ತಿಯೆ (ಸಹ–ಸಮಾನಾಧಿಕಾರಿ ಆಸ್ತಿಯೇ), ಹಾಗಿದ್ದಲ್ಲಿ, ಯಾರು ಇದ್ದರು/ಇದ್ದಾರೆ ಆ ಕೋಪಾರ್ಸನರಿಯಲ್ಲಿ ಅಥವ ಜಂಟಿ ಮಾಲೀಕತ್ವದಲ್ಲಿ ಆತನ/ಆಕೆಯ ಜೊತೆ ಸಂಧರ್ಬದಲ್ಲಿ ಇರಬಹುದು. ಎರಡನೆಯದಾಗಿ, ಆತ/ಆಕೆ ಸತ್ತ ನಂತರ ಹೇಗೆ ಆಸ್ತಿಯಲ್ಲಿನ ಹಕ್ಕು ಉಳಿದಿರುವ ಕುಟುಂಬದ ಜನರಲ್ಲಿ ವಿತರಣೆ ಆಯಿತು, ಯಾವ ಪ್ರಮಾಣದಲ್ಲಿ, ಆತ/ಆಕೆ ವಿಲ್ ಬರೆಯದೆ ಸತ್ತರೆ ಅಥವ ಯಾವುದಾದರೂ ಉಯಿಲು (ವಿಲ್) ಕುಟುಂಬದವರ ಹೆಸರಿನಲ್ಲಾಗಲೀ ಅಥವ ಆಚೆಯವರ ಹೆಸರಿನಲ್ಲಿ ಆತನ/ಆಕೆಯ ಭಾಗಾಂಶ ಆರ್ಜಿಸಲು ಬಿಟ್ಟು ಹೋದರೆ, ಅದರ ಪರಿಣಮ ಏನು. ಮೂರನೆಯದಾಗಿ, ದಾವೆಯಲ್ಲಿನ ಆಸ್ತಿಗಳು ಪರಿಣಾಮಕಾರಿಯಾಗಿ ವಿಭಜನೆಗೊಳ್ಳುವ ಸಾಮರ್ಥ್ಯವನ್ನು ಹೊಂದಿದೆಯೇ ಮತ್ತು ಹಾಗಿದ್ದಲ್ಲಿ, ಯಾವ ರೀತಿಯಲ್ಲಿ? ಕೊನೆಯದಾಗಿ, ಎಲ್ಲಾ ಆಸ್ತಿಗಳನ್ನು ದಾವೆಯಲ್ಲಿ ಸೇರಿಸಲಾಗಿದೆಯೆ ಮತ್ತು ಎಲ್ಲಾ ಸಹ–ಪಾಲುದಾರರು,

ಕೋಪಾರ್ಸೆನರ್ಗಳು, ಸಹ–ಮಾಲೀಕರು ಅಥವಾ ಜಂಟಿ–ಮಾಲೀಕರು, ಅಂತಹ ಸಂದರ್ಭದಲ್ಲಿ, ಪಕ್ಷಕಾರರನ್ನಾಗಿ ಮೊಕದ್ದಮೆಯಲ್ಲಿ ಸೇರಿಸಲಾಗಿದೆಯೇ?. ಈ ವಿವಾದಾಂಶಗಳು ವಿಭಜನಾ ಮೊಕದ್ದಮೆಯ ಸರಿಯಾದ ವಿಲೇವಾರಿಗಾಗಿ ಮೂಲವಸ್ತುಗಳಾಗಿದ್ದು, ಇದನ್ನು, ಕುಟುಂಬ ವೃಕ್ಷದ ಆಧಾರದ ಮೇಲೆ, ಕುಟುಂಬದ ಸದಸ್ಯರ ನಡುವಿನ ಸಂಬಂಧಗಳು, ಲಭ್ಯವಾದ ಸಾಕ್ಷ್ಯವನ್ನು ಮತ್ತು ಕಾನೂನಿನ ತತ್ವಗಳು ಈ ಪ್ರಕರಣಕ್ಕೆ ಅನ್ವಯವಾಗುವುದರ ಅನ್ವಯ ನ್ಯಾಯಾಲಯವು ಉತ್ತರಿಸಬೇಕಾಗಿರುತ್ತದೆ."[1]

## ವಿಭಾಗ ದಾವೆ ಹಾಕುವವರ ಕರ್ತವ್ಯ

ಹಿಂದು ಅವಿಭಕ್ತ ಕುಟುಂಬದ ಬಗ್ಗೆ ಯಾರೇ ಪಕ್ಷಕಾರನು ದಾವೆ ಹಾಕಿ ಮುಂದಾದಾಗ ಆತನೇ ಸದರಿ ಆಸ್ತಿಗಳು ಹೇಗೆ ಅವಿಭಕ್ತ ಕುಟುಂಬಕ್ಕೆ ಸೇರ್ಪಡೆಯಾದವು ಆ ರೀತಿ ಸೇರ್ಪಡೆಯಾಗಲು ಒಟ್ಟು ಕುಟುಂಬಕ್ಕೆ ಸೇರಿದ ಆಧಾಯವನ್ನು ತರುತ್ತಿದ್ದ ಹಿಡಿಗಂಟು (ನ್ಯೂಕ್ಲಿಯಸ್) ಯಾವುದು, ಅದರಲ್ಲಿ ಎಷ್ಟು ಆಧಾಯ ಬರುತ್ತಿತ್ತು, ಖರ್ಚು ವೆಚ್ಚ ಕಳೆದು ಉಳಿತಾಯ ಶೇಖರಣೆ ಆಗುತ್ತಿದುದ್ದು ಎಷ್ಟು ಅದರಲ್ಲಿ ಆರ್ಜಿತವಾದ ಆಸ್ತಿಯಲ್ಲಿ ಹೇಗೆ ಹಿಡಿಗಂಟಿನ ಸ್ವಾಧೀನ ಹೊಂದಿರುವ ಕರ್ತನು ಆರ್ಜಿಸಿದ್ದಾನೆ ಎಂದು ತನ್ನ ವಾದ ಪತ್ರದಲ್ಲಿ ವಿವರವಾಗಿ ಬರೆಸಿ ರುಜುವಾತು ಪಡಿಸುವ ಕರ್ತವ್ಯ ಎಲ್ಲಾ ವಿಭಾಗವನ್ನು ಕೋರುವ ಕಕ್ಷಿದಾರನದ್ದಾಗಿರುತ್ತದೆ. ಬರೀ ಮಾತಿನಲ್ಲಿ ಇದು ಅವಿಭಕ್ತ ಕುಟುಂಬದ ಸ್ವತ್ತು ಇದರಲ್ಲಿ ಬಾಗ ಕೊಡಿ ಎಂದು ದಾವೆ ಹಾಕಿದ ಮಾತ್ರಕ್ಕೆ ಬಾಗಾಂಶ ಸಿಗುವುದಿಲ್ಲ.[2] ಸ್ವಯಾರ್ಜಿತ ಆಸ್ತಿಯಲ್ಲಿ ಅನುಕಂಪಕ್ಕೆ ಸ್ವಾಧೀನ ಮತ್ತು ಉಪಯೋಗದ ಹಕ್ಕನ್ನು ಕೊಟ್ಟಿದ್ದರೂ ಎಂಬ ಮಾತ್ರಕ್ಕೆ

---

[1] ಶಶಿಧರ್ ವಿರುದ್ಧ ಅಶ್ವಿನಿ – 2015 (11) ಎಸ್.ಸಿ.ಸಿ 269

[2] ಎ.ಐ.ಆರ್. 2003 ಎಸ್.ಸಿ 3800

ಅದು ಅವಿಭಕ್ತ ಕುಟುಂಬದ ಸ್ವತ್ತು ಆಗುವುದಿಲ್ಲ. ಕುಟುಂಬಕ್ಕೆ ಸಾಕಷ್ಟು ಆಧಾಯ ತರುವಂತಹ ಪಿತ್ರಾರ್ಜಿತ ಆಸ್ತಿ ಮತ್ತು ಅಂತಹ ಮೂಲಗಳು ಯಾವ ಕರ್ತನ ಹಿಡಿತದಲ್ಲಿ ಇದೆಯೋ ಅದನ್ನು ರುಜುವಾತು ಮಾಡಿದೆಡೆ ಆ ಕರ್ತನ ಸ್ವಾಧೀನದ ಆಸ್ತಿ ಒಟ್ಟುಕುಟುಂಬಕ್ಕೆ ಸೇರಿದ್ದು ಎಂಬಂತೆ ಕಾನೂನಿನಲ್ಲಿ ಪರಿಬಾವಿಸಲಾಗುತ್ತದೆ. ಆಗ ಕರ್ತನಾದವನು ಹೇಗೆ ತಾನು ಸ್ವಯಾರ್ಜಿತ ಮತ್ತು ಪಿತ್ರಾರ್ಜಿತ ಸ್ವತ್ತನ್ನು ಬೇರೆ ಬೇರೆಯಾಗಿ ಅನುಭವಿಸುತ್ತ ಲೆಕ್ಕ ಇಟ್ಟಿರುವುದನ್ನು ರುಜುವಾತು ಪಡಿಸುವ ಪುರಾವೆಯೊಂದಿಗೆ ಆತನ ಸ್ವಯಾರ್ಜಿತ ಸಂಪಾದನೆ ಮೂಲದ ಆಸ್ತಿಯನ್ನು ಬೇರ್ಪಡಿಸಬಹುದಿರುತ್ತದೆ.[1]

ಒಮ್ಮೆ ವಿಭಾಗವಾದ ಮೇಲೆ ಮತ್ತೆ ಅವಿಭಕ್ತ ಕುಟುಂಬ ಒಂದಾಗಿತ್ತು ಎಂಬಂತೆ ಜರುಗುವುದು ಅಪರೂಪದ ಘಟಣೆ ಆಗಿದ್ದು, ಹಾಗೇನಾದರೂ ವಿಭಾಗವಾದ ನಂತರವೂ ಅವಿಭಕ್ತ ಕುಟುಂಬ ಎಲ್ಲರ ಒಪ್ಪಿಗೆಯೊಂದಿಗೆ ಮುಂದುವರಿದಿತ್ತು ಎಂದು ಪ್ರತಿಪಾದಿಸಿದರೆ ಅದನ್ನು ರುಜುವಾತು ಪಡಿಸುವ ಬದ್ದತೆ ಪ್ರತಿಪಾದಕನದ್ದಾಗಿರುತ್ತದೆ.[2] ವಿಭಾಗವಾದ ನಂತರವೂ ಜೊತೆಯಲ್ಲಿ ವಾಸಿಸಿದರು, ಸದರಿ ಸ್ವತ್ತಿನ ಬಗ್ಗೆ ಜಂಟಿಯಾಗಿ ವ್ಯವಹರಿಸಿದ್ದರು, ವ್ಯಾಪಾರ ವ್ಯವಹಾರಕ್ಕಾಗಿ ಒಂದಾಗಿದ್ದರು, ಎಂಬ ಮಾತ್ರಕ್ಕೆ ಅವಿಭಕ್ತ ಕುಟುಂಬ ಮುಂದುವರಿದಿದೆ ಎಂದಾಗುವುದಿಲ್ಲ.[3]

ವಿಭಾಗಕ್ಕಾಗಿ ಮೊಕದ್ದಮೆಯಲ್ಲಿ, ಪ್ರತಿವಾದಿಯು ತನ್ನಲ್ಲಿ ಮಾಲೀಕತ್ವವನ್ನು ಹೊಂದಲು ಯಾವುದೇ ದಾಖಲಾತಿಗಳನ್ನು ರಚಿಸಿಕೊಂಡಿದ್ದರೆ, ವಾದಿಯು ತನ್ನ ಮೇಲೆ ಬಂಧನವಿಲ್ಲ ಅಥವಾ ಅದು

---

[1] ಎ.ಐ.ಆರ್. 1961 ಎಸ್.ಸಿ 1268

[2] ಎ.ಐ.ಆರ್. 1962 ಎಸ್.ಸಿ 287

[3] ಎ.ಐ.ಆರ್ 1952 ಎಸ್.ಸಿ 72

ಮೋಸ ಅಥವಾ ಅನೂರ್ಜಿತ ಎಂದು ಘೋಷಿಸಲು ಯಾವುದೇ ಘೋಷಣಾತ್ಮಕ ತೀರ್ಪನ್ನು ಪಡೆಯಬೇಕಾಗಿಲ್ಲ.[1]

[1] ಲೋಕನಾಥ ವಿ. ವರಲಕ್ಷ್ಮಿ – ಐ.ಎಲ್.ಆರ್ 2013 ಕರ್ 5063

## ಅಧ್ಯಾಯ-10 (ಪೂರ್ವ ಖರೀದಿ ಹಕ್ಕು)

## ಆಸ್ತಿಯನ್ನು ಮುಂಚಿತವಾಗಿ ಪಡೆದುಕೊಳ್ಳುವ ಆದ್ಯತೆಯ ಹಕ್ಕು

1. ಪ್ರೀ-ಎಂಪ್ಶನ್ (ಪೂರ್ವಾಧಿಕಾರ) - ಇಂತಹ ಆದ್ಯತೆಯನ್ನು ಕಾನೂನಿನಲ್ಲೇ (ಕೆಲವು ಸಂಧರ್ಬಗಳಿಗೆ) ನೀಡಲಾಗಿದೆ. ಕಲಂ 22 ಹಿಂದು ಉತ್ತರಾಧಿಕಾರಿತ್ವ ಅಧಿನಿಯಮ 1956 ರಲ್ಲಿ ಇಂತಹ ಹಕ್ಕನ್ನು ನೀಡಲಾಗಿದೆ. "ಈ ಕಾಯ್ದೆ ಪ್ರಾರಂಬವಾದ ನಂತರ, ಉಯಿಲನ್ನು, ಮೃತ್ಯುಪತ್ರವನ್ನು ಯಾ ಮರಣಪತ್ರವನ್ನು-ಬರೆದಿಟ್ಟಿಲ್ಲದ ಸ್ಥಿತಿಯಲ್ಲಿ ಆರ್ಜಿಸಿದ ಯಾವುದೇ ಸ್ಥಿರ ಸ್ವತ್ತಿನಲ್ಲಿ ಹಕ್ಕು ಇದ್ದಲ್ಲಿ ಅಥವ ಯಾವುದೇ ವ್ಯವಹಾರವನ್ನು ಅವನನ್ನು ಅಥವಾ ಅವಳ ಮೂಲಕ ನಡೆಸಲಾಗುತ್ತಿದ್ದರೆ, ಏಕಮಾತ್ರರಾಗಿಯಾಗಲೀ ಅಥವಾ ಇತರರ ಜೊತೆಗೂಡಿಯಾಗಲೀ, ಷೆಡ್ಯೂಲ್ ನ ವರ್ಗ 1 ರಲ್ಲಿ ನಿರ್ದಿಷ್ಟಪಡಿಸಿದ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಉತ್ತರಾಧಿಕಾರಿಗಳಲ್ಲಿ ವಿತರಿಸುವುದಿದ್ದರೆ, ಮತ್ತು ಅಂತಹ ಉತ್ತರಾಧಿಕಾರಿಗಳಲ್ಲಿ ಯಾವುದಾದರೂ ಆಸ್ತಿ ಅಥವಾ ವ್ಯವಹಾರದಲ್ಲಿ ತನ್ನ ಅಥವಾ ಅವಳ ಆಸಕ್ತಿಗಳನ್ನು ವರ್ಗಾಯಿಸಲು ಪ್ರಸ್ತಾಪಿಸಿದ್ದರೆ, ಇತರ ಉತ್ತರಾಧಿಕಾರಿಗಳು ವರ್ಗಾವಣೆ ಮಾಡಲು ಪ್ರಸ್ತಾಪಿಸಿದ ಆಸ್ತಿಯನ್ನು ಪಡೆದುಕೊಳ್ಳುವ ಆದ್ಯತೆಯ ಹಕ್ಕು ಇರಬೇಕು." - ಅಂತಹ ಹಕ್ಕು ಜಾರಿ ಮಾಡಲು ಕಲಂ 22(2) ರ ಅಡಿಯಲ್ಲಿ ಅರ್ಜಿಯನ್ನು ಸಕ್ಷಮ ನ್ಯಾಯಾಲಯಕ್ಕೆ ಸಲ್ಲಿಸಬೇಕಾಗುತ್ತದೆ. ಆ ವರ್ಗಾವಣೆಗೆ ಮಾನ್ಯ ನ್ಯಾಯಾಲಯ ಮೊತ್ತವನ್ನು ನಿಗದಿ ಪಡಿಸುತ್ತದೆ. ಪಾರ್ಟಿಗಳ ಮಧ್ಯೆ ಅಂತಹ ಮೊತ್ತದ ಬಗ್ಗೆ ಕರಾರು ಮಾಡಿಕೊಳ್ಳಬಹುದಾಗಿರುತ್ತದೆ. ಇಬ್ಬರಿಗಿಂತ ಹೆಚ್ಚು ಉತ್ತರಾಧಿಕಾರಿಗಳು ಖರೀದಿ ಮಾಡಲು ಬಯಸಿರುವಾಗ್ಗೆ ಹೆಚ್ಚು ಮೊತ್ತ ಯಾರು ನೀಡುತ್ತಾರೆ ಅವರಿಗೆ ಸೇರುತ್ತದೆ.

2. ಇಂತಹ ಆಧ್ಯತೆಯ ಹಕ್ಕು ವ್ಯವಸಾಯ ಜಮೀನಿಗೆ ಅನ್ವಯಿಸುತ್ತದೆಯೇ ಎಂಬ ವಿಚಾರಕ್ಕೆ ಕರ್ನಾಟಕ,(1971 ಮತ್ತು 1974) ಒರಿಸ್ಸಾ, (1974, 1957) ಪಂಜಾಬ್–ಹರಿಯಾಣ(1960), ಮಹಾರಾಷ್ಟ್ರ, (1994,2007) ರಾಜ್ಯದ ಹೈಕೋರ್ಟುಗಳು ಅನ್ವಯಿಸುತ್ತದೆ ಎಂದು ತೀರ್ಪು ಕೊಟ್ಟರೆ, ರಾಜಸ್ಥಾನ,(1981) ತಮಿಳುನಾಡು,(2010) ಪಂಜಾಬ್–ಹರಿಯಾಣ (1970, 2006), ಮಧ್ಯಪ್ರದೇಶ (1974), ಅಲಾಹಾಬಾದ್(1970) ಹೈಕೋರ್ಟುಗಳಲ್ಲಿ ಇದು ವ್ಯವಸಾಯ ಜಮೀನಿಗೆ ಅನ್ವಯಿಸುವುದಿಲ್ಲ ಎಂದು ತೀರ್ಪು ಕೊಟ್ಟಿದ್ದವು, ಕೊನೆಗೆ (07–03–2019 ರಲ್ಲಿ) ಮಾನ್ಯ ಸುಪ್ರೀಮ್ ಕೋರ್ಟ್[1] ಇತಿಶ್ರೀ ಹಾಡಿ ಇಂತಹ ಹಕ್ಕು ವ್ಯವಸಾಯ ಜಮೀನಿಗೂ ಅನ್ವಯಿಸುತ್ತದೆ ಎಂದು ತೀರ್ಪಿತ್ತಿದೆ. ಈ ಕೇಸಿನಲ್ಲಿ ವಿವರಣೆ ನೀಡುವಾಗ ಕೆಲವು ವಿಷಯವನ್ನು ಉದಾಹರಣೆಯೊಂದಿಗೆ ಸ್ಪಷ್ಟ ಪಡಿಸಿದ್ದಾರೆ

(1). ಒಬ್ಬರಿಗೊಬ್ಬರು ಸಂಬಂಧವಿಲ್ಲದ ಮೂವರು ವ್ಯಕ್ತಿಗಳು ಜಂಟಿಯಾಗಿ ಒಂದು ಕೃಷಿ ಹಿಡುವಳಿ ಖರೀದಿಸಿದರು, ನಂತರ ಅವರಲ್ಲಿ ಒಬ್ಬರು ತಮ್ಮ ಆಸಕ್ತಿಯನ್ನು ಮಾರಲು ಬಯಸಿದರು. ಮುಂಚಿತವಾಗಿ ಆಸ್ತಿ ಪಡೆದುಕೊಳ್ಳುವ ಹಕ್ಕಿನ ಸಾಮಾನ್ಯ ತತ್ವವು ಈ ವಿಷಯದಲ್ಲಿ ಅನ್ವಯಿಸಬಹುದು ಮತ್ತು ಇತರ ಜಂಟಿ ಹೊಂದಿರುವವರು ಆ ಪರವಾಗಿ ಸೂಕ್ತವಾದ ರಾಜ್ಯ ಕಾನೂನು ಶಾಸನದಿಂದ ನೀಡಲಾದ ಹಕ್ಕುಗಳಿಗೆ ಅನುಗುಣವಾಗಿ ಮಾರಾಟವನ್ನು ಮುಂದೂಡಬಹುದಾಗಿದೆ.

(2). ಆ ಮೂರು ವ್ಯಕ್ತಿಗಳು ನಿಜವಾದ ಸಹೋದರರು ಅಥವಾ ಸಹೋದರಿಯರು ಆಗಿದ್ದರೆ ಮತ್ತು ತಮ್ಮ ಸ್ವಂತ ಹಣವನ್ನು ಹೂಡಿಕೆ ಮಾಡುವ ಮೂಲಕ, ಕೃಷಿ ಹಿಡುವಳಿಗಳನ್ನು ಜಂಟಿಯಾಗಿ ಖರೀದಿಸಿದರೆ,

---

[1] ಬಾಬು ರಾಮ್ ವಿರುದ್ಧ ಸಂತೋಕ್ ಸಿಂಗ್ – ಎ.ಐ.ಆರ್ 2019 ಎಸ್.ಸಿ 1506

ಮೇಲಿನ ಸನ್ನಿವೇಶದಲ್ಲಿ ಮತ್ತೊಮ್ಮೆ ಮುಂತಾದವುಗಳು, ಮುಂಚಿತವಾಗಿ ಆಸ್ತಿ ಪಡೆದುಕೊಳ್ಳುವ ಹಕ್ಕನ್ನು ರಾಜ್ಯ ಶಾಸನದ ಸಂಬಂಧಿತ ನಿಬಂಧನೆಗಳಿಗೆ ಅನುಗುಣವಾಗಿರಬೇಕು.

(3). ಆದರೆ, ಒಂದು ವೇಳೆ, (2) ವಿವರಣೆಯಲ್ಲಿರುವ ಅದೇ ಮೂರು ವ್ಯಕ್ತಿಗಳು ಕೃಷಿ ಹಿಡುವಳಿಯನ್ನು ಪೂರ್ವಜರಿಂದ ಅನುವಂಶಿಕವಾಗಿ ಪಡೆದಿದ್ದರೆ ಮತ್ತು ಅವರಲ್ಲಿ ಒಬ್ಬರು ಹಿಡುವಳಿಯಲ್ಲಿ ಅವನ ಅಥವಾ ಅವಳ ಆಸಕ್ತಿಯನ್ನು ಮಾರಾಟಮಾಡಲು ಬಯಸುತ್ತಿದ್ದರೆ ಆಗ, ಆ ಕಾಯ್ದೆಯ ಕಲಂ 22 ರ ನಿಯಮಗಳು ಅನ್ವಯವಾಗುತ್ತದೆ.

3. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ, ಕಲಂ 22 ರಲ್ಲಿ ಇರುವ ಅಂತದ್ದೇ ಕಾನೂನನ್ನು ಕರ್ನಾಟಕ ಹಿಂದು ಉತ್ತರಾಧಿಕಾರಿ ತಿದ್ದುಪಡಿ ಅಧಿನಿಯಮ 1994 ರಲ್ಲಿ ಕಲಂ 6ಸಿ ನಂತೆ ಸೇರಿಸಲಾಗಿರುತ್ತದೆ. ಅಲ್ಲಿ ಕಲಂ 6ಎ ಮತ್ತು 6ಬಿ ಅಡಿಯಲ್ಲಿ ಆರ್ಜಿತವಾದ ಆಸ್ತಿಗಳಿಗೂ (ಪಿತ್ರಾರ್ಜಿತ/ಒಟ್ಟುಕುಟುಂಬದ ಆಸ್ತಿಗಳಿಗೂ) ವಿಸ್ತರಿಸಿ ಕಾನೂನು ರಚನೆಯಾಗಿದೆ. 2005 ರ ತಿದ್ದುಪಡಿಯಲ್ಲಿನ ಕಾನೂನಿನಲ್ಲಿ ಇರುವ ಅಂಶಗಳಿಗೆ ವ್ಯತಿರಿಕ್ತವಾಗಿ ಇರುವ ಅಂಶಗಳು ಮಾತ್ರವೇ ಅನೂರ್ಜಿತವಾಗುತ್ತದೆ. ಆದರೆ 6ಸಿ ಅನೂರ್ಜಿತವಾಗುವುದಿಲ್ಲ. ಇಲ್ಲಿನ ಅಂಶಗಳನ್ನು ಮತ್ತು ಮೇಲಿನ ಅಂಶಗಳನ್ನು ಗಮನಿಸಿದಾಗ ರಾಜ್ಯ ಶಾಸನದಲ್ಲೂ ಇಂತಹ ಮುಂಚಿತವಾಗಿ ಆಸ್ತಿ ಪಡೆದುಕೊಳ್ಳುವ ಹಕ್ಕನ್ನು ಕಾನೂನು ಬದ್ಧಗೊಳಿಸಿರುವುದರಿಂದ, ಪಿತ್ರಾರ್ಜಿತ (ಕಲಂ 6 ರಲ್ಲಿ ಆರ್ಜಿತ ಆಸ್ತಿಗಳಿಗೂ), ಕಲಂ 8 ರಲ್ಲಿ ವಾರಸ್ಸುದಾರರಾಗಿ ಪಡೆದಿರುವ ಆಸ್ತಿಗಳಲ್ಲೂ, (1ನೇ ದರ್ಜೆ ವಾರಸುದಾರರಲ್ಲಿ ಮಾತ್ರ), ಒಟ್ಟು ಕುಟುಂಬದ ಆಸ್ತಿಗಳಲ್ಲೂ, ಪಾಲುದಾರಿಕೆ ಆಸ್ತಿಗಳಲ್ಲೂ, ಮುಂಚಿತವಾಗಿ ಆಸ್ತಿ ಪಡೆದುಕೊಳ್ಳುವ ಹಕ್ಕು ಇರುತ್ತದೆ, ಅಂತಹ ಹಕ್ಕು ಜಾರಿ ಮಾಡಬಹುದಾದ ಕಾನೂನು ಸಾಧ್ಯತೆ ಬಗ್ಗೆ ಎಚ್ಚರ ಸೂಕ್ತವಾಗಿದೆ. 2005 ರ ತಿದ್ದುಪಡಿ

ನಂತರ ಒಬ್ಬ ಕೋಪಾರ್ಸನರ್ ಸತ್ತಾಗ ಒಟ್ಟು ಕುಟುಂಬ ಭಾಗವಾಗುತ್ತದೆ. ಅದು ಕಲಂ 8 ರ ರೀತಿಯಲ್ಲಿಯೇ ಭಾಗವಾಗುತ್ತದೆ.

4. ರಾಜ್ಯ ಸಭಾ ಮುಂದೆ ಬಂದಂತಾ ಹಿಂದು ಉತ್ತರಾಧಿಕಾರತ್ವ ಬಿಲ್ 1954 ರಲ್ಲಿ ಕ್ಲಾಸ್ 24 ಎಂದು ಈಗಿನ ಕಲಂ 22 ರಂತೆ ಇತ್ತು. ಅದರಲ್ಲಿ ಒಬ್ಬ ವಾರಸ್ಸುದಾರ ತನ್ನ ಸ್ಥಿರ ಸ್ವತ್ತಿನ ಅಥವ ವ್ಯಾಪಾರದ ಭಾಗಾಂಶವನ್ನು ಮಾರಾಟಮಾಡಲನುವಾದಾಗ, ಅನುವಂಶಿಕ ಇನ್ನಿತರೆ ವಾರಸ್ಸುದಾರರು ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕನ್ನು ಹೊಂದಿರಬೇಕು ಮಾತ್ರವಲ್ಲದೆ ಅಂತಹ ಹಕ್ಕನ್ನು ಅನುಭವಿಸಲು ಆತನ/ಆಕೆಯ ಮತ್ತು ಮದುವೆಯಾದ ಹೆಣ್ಣುಮಗಳ ಆಸ್ತಿಯನ್ನು ಕೂಡ ಅವರ ಭಾಗದ ಬಾಗಾಂಶವನ್ನು ಕೊಂಡುಕೊಳ್ಳುವ ಮೂಲಕ ಅನುಭವಿಸಬಹುದು. ಇದು ವ್ಯಾಪಾರಿ ಸಮುದಾಯದಲ್ಲಿ ಹೆಣ್ಣುಮಗಳಿಗೆ ನೀಡುವ ಬಾಗಾಂಶದಿಂದ ಅಳಿಯನು ಆ ವ್ಯವಹಾರದ ಸ್ವಾಧೀನ ಹೊಂದಿ ವ್ಯಾಪಾರದಲ್ಲಿ ತೊಂದರೆ ಕೊಡುವುದನ್ನು ತಪ್ಪಿಸಲು ರಚಿತವಾಗಿತ್ತು. ನಂತರ ಅನೇಕ ಸಲಹೆ, ತಿದ್ದುಪಡಿ ಒಳಗೊಂಡು ಅಂತಿಮವಾಗಿ ಕಲಂ 22 ರ ರೂಪ ಪಡೆಯಿತು. ಆದ್ದರಿಂದ ಈ ಕಾನೂನಿನ ಮೂಲ ಉದ್ದೇಶ ಆಸ್ತಿಯನ್ನು ತುಂಡು ತುಂಡಾಗುವುದನ್ನು ತಪ್ಪಿಸಲು ಮತ್ತು ಹೊರಗಿನವರನ್ನು ಆಸ್ತಿಯಲ್ಲಿ ಮತ್ತು ವ್ಯಾಪಾರದಲ್ಲಿ ಸೇರ್ಪಡೆ ತಪ್ಪಿಸುವ ಉದ್ದೇಶ ಒಳಗೊಂಡಿತ್ತು. ... ಮತ್ತು ಇದರ ಇನ್ನೊಂದು ಮೂಲ ಉದ್ದೇಶ ಸತ್ತ ಪೂರ್ವಿಕರ ಆತ್ಮಕ್ಕೆ ಶಾಂತಿಯನ್ನು ನೀಡುವುದಕ್ಕೆ, ಮನುಜನ ಬಯಕೆಯಾದ ಆತ ಸತ್ತ ನಂತರ ಮೂರನೆಯವರ ಪಾಲಾಗದಿರಲಿ ತನ್ನ ಆಸ್ತಿ ಎಂಬ ಇಚ್ಚೆಯನ್ನು ಪಾಲಿಸಲು. ವ್ಯವಸಾಯಗಾರರು ತಮ್ಮ ಪೂರ್ವಪಿತೃಗಳಿಂದ ತಮ್ಮ ಕೈಗೆ ಬಂದಂತಹ ಹಿಡುವಳಿ ಜಮೀನುಗಳ ಬಗ್ಗೆ ಬಾವನಾತ್ಮಕ ನಂಟನ್ನು ಹೊಂದಿರುತ್ತಾರೆ. ಯಾರೂ ಅದನ್ನು ಅಪರಿಚಿತರಿಗೆ ವರ್ಗಾಯಿಸಲು ಬಯಸುವುದಿಲ್ಲ. ಒಬ್ಬರಿಗಿಂತ ಹೆಚ್ಚು

ವಾರಸ್ಸುದಾರರ ಅಂತಹ ಉತ್ತರಾಧಿಕಾರದಲ್ಲಿ, ಕೆಲವು ಬಾರಿ ಎಚ್ಚರದಿಂದಿರುವ ಮತ್ತು ಕುತಂತ್ರಿ ವಾರಸ್ಸುದಾರ ತನ್ನ ಜಂಟಿ ಆಸ್ತಿಯ ಬಾಗಾಂಶವನ್ನು ಅಪರಿಚಿತನಿಗೆ ಮಾರಾಟ ಮಾಡಿ, ಹಿಂಸೆಯನ್ನು ಇತರೆ ವಾರಸ್ಸುಗಳಿಗೆ ಕೊಡಲಾಗಲೀ ಅಥವ ಪ್ರತೀಕಾರ ತೀರಿಸಲಾಗಲೀ ಅಥವ ಬುದ್ದಿಯನ್ನು ಕಲಿಸಲಾಗಲೀ, ವಿವಿದ ಕಾರಣಗಳಿಗೆ ಮುಂದಾದಾಗ ಅದು ಅವರೊಡನೆ ಈರ್ಶೆಯಿಂದಿರಬಹುದು ಅಥವ ವೈರತ್ವದ ಸಂಬಂದದಿಂದಿರಬಹುದು. ಅದಕ್ಕಾಗಿ ಕಾಯ್ದೆಯ ಕಲಂ 22 ವಾರಸ್ಸುದಾರರ ಆಸ್ತಿಯ ಹಕ್ಕನ್ನು ರಕ್ಷಿಸುವುದಲ್ಲದೆ ಅವರನ್ನು ಮಾನಸಿಕ ಹಿಂಸೆಯಿಂದ ಪಾರು ಮಾಡುತ್ತದೆ, ಹಾಗೆ ಎಚ್ಚರದಿಂದಿರುವ ಆ ವಾರಸ್ಸುದಾರನ ಮೇಲೆ ಅಪರಿಚಿತನಿಗೆ ವರ್ಗಾಯಿಸಲು ತೊಡರು ನಿರ್ಮಿಸುತ್ತದೆ." – (ರೋಷನ್ ಲಾಲ್ ವಿರುದ್ದ ಪ್ರಿತಮ್ ಸಿಂಗ್[1] – ಹಿಮಾಚಲ ಪ್ರದೇಶ ಹೈಕೋರ್ಟ್ – 01–03–2018)

5. ಸುಪ್ರೀಮ್ ಕೋರ್ಟ್ ಸಂವಿಧಾನಿಕ ಪೀಠ[2] ಪ್ರಕಾರ ಪದ್ದತಿ ಮತ್ತು ರೂಡಿಯಲ್ಲಿರುವ ಪ್ರೀಎಮ್ಶನ್ (ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು) ಹಕ್ಕು ವಿಧಿ 13(1) ರಲ್ಲಿ ಕಾನೂನು ಭಾಹಿರವಾಗುತ್ತದೆ. ಯಾಕೆಂದರೆ ಅದು ಮೂಲಭೂತ ಹಕ್ಕಾದ 19(1) ಎಫ್ ವಿಧಿಯನ್ವಯ ಆಸ್ತಿಯನ್ನು ಹೊಂದಲು ಮತ್ತು ಅದನ್ನು ವಿಲೆ ಮಾಡುವ ಹಕ್ಕು ಆ ಸಂಧರ್ಬದಲ್ಲಿ ಇತ್ತು ಅದರ ಅನ್ವಯ ಕಾನೂನು ಭಾಹಿರ ಅಂತ ಆದೇಶಿಸಲಾಗಿತ್ತು. ಆದರೆ 20–06–1979 ರಿಂದ ಅಂತಹ 44ನೇ ಸಂವಿಧಾನ ತಿದ್ದುಪಡಿಯಂತೆ ಅಂತಹ ಆಸ್ತಿ ಹಕ್ಕನ್ನೇ ರದ್ದು ಮಾಡಲಾಗಿದೆ.

---

[1] https://indiankanoon.org/doc/120216693/

[2] ಸಂತ ರಾಮ್ ವಿರುದ್ದ ಲಬ್ ಸಿಂಗ್ – ೧೯೬೪ (೭) ಎಸ್.ಸಿ.ಆರ್ ೭೫೬

6. ಹಿಂದು ಉತ್ತರಾಧಿಕಾರಿತ್ವ ಕಾಯ್ದೆ 1956 ಕಲಂ 4(2) ರ ಪ್ರಕಾರ ಸದರಿ ಕಾಯ್ದೆಯ ಅಂಶಗಳು ಹಾಲಿ ಜಾರಿಯಲ್ಲಿ ಇದ್ದ ವ್ಯವಸಾಯ ಜಮೀನು ಹಿಡುವಳಿಯನ್ನು ತುಂಡುಪಡಿಸುವಿಕೆ ತಡೆಯ ಬಗ್ಗೆ ಅಥವ ಹಿಡುವಳಿ ಮಿತಿ ಸ್ಥಿರೀಕರಣ ಅಥವ ಅಂತಹ ಹಿಡುವಳಿಯಲ್ಲಿ ಗೇಣಿದಾರಿಕೆ ಹಕ್ಕು ವಿತರಿಸುವ ಬಗ್ಗೆ ಅನ್ವಯಿಸುವುದಿಲ್ಲ ಎಂದು ಹೇಳಲಾಗಿತ್ತು. ಹಾಗಾಗಿ ಕಲಂ 22 ರ ಪ್ರಕಾರ ಕೊಂಡುಕೊಳ್ಳುವ ಆದ್ಯತೆ ಹಕ್ಕು ಕಲಂ 22 ರಲ್ಲಿ ಅಂತಹ ವಿಷಯದಲ್ಲಿ ಅನ್ವಯಿಸುತ್ತಿರಲಿಲ್ಲ. ಆದರೆ 2005 ರ ತಿದ್ದುಪಡಿಯಂತೆ ಕಲಂ 4(2) ತೆಗೆದುಹಾಕಲಾಗಿರುವುದರಿಂದ ಕಲಂ 22 ರ ಪ್ರಕಾರ ಅಂತಹ ವಿಚಾರಗಳಲ್ಲೂ ಅಧ್ಯತೆ ಹಕ್ಕು ಇರುತ್ತದೆ.[1]

**ಮುಂಚಿತವಾಗಿ ಆಸ್ತಿ ಪಡೆದುಕೊಳ್ಳುವ ಹಕ್ಕಿನ ಕಾಲಮಿತಿ**

1. ಕಾಲ ಮಿತಿ ಕಾಯ್ದೆ 1963 ವಿಧಿ 97 ರ ಪ್ರಕಾರ ಮುಂಚಿತವಾಗಿ ಆಸ್ತಿ ಪಡೆದುಕೊಳ್ಳುವ ಹಕ್ಕನ್ನು ಕ್ರಯ ಪತ್ರ ನೊಂದಣಿ ದಿನಾಂಕದಿಂದ ಅಥವ ಕ್ರಯಕ್ಕೆ ಪಡೆದವನು ಸ್ವಾಧೀನಕ್ಕೆ ಪಡೆದ ದಿನಾಂಕದಿಂದ ಒಂದು ವರ್ಷದ ಒಳಗೆ ಅಂತಹ ಅಧಿಕಾರವನ್ನು ಚಲಾಯಿಸಲು ಕೋರ್ಟಿಗೆ ಅರ್ಜಿ ಸಲ್ಲಿಸಬೇಕು.[2]

2. ಈ ವಿಚಾರವಾಗಿ ವಿಮರ್ಶಿಸಿರುವ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಕಾಲ ಮಿತಿ ಕಾಯ್ದೆ 1963 ವಿಧಿ 97 ಉಲ್ಲೇಕಿಸಿ ಇದರಲ್ಲಿ ಕಾಲಮಿತಿ ನಿರ್ದರಿಸಲು ಎರಡು ಸಂಧರ್ಬಗಳನ್ನು ನೀಡಲಾಗಿದೆ. ಒಂದನೇ ಸಂಧರ್ಬ, ಯಾವ ಕ್ರಯವನ್ನು ಪ್ರಶ್ನಿಸಲಾಗಿರುತ್ತದೋ ಅದರಲ್ಲಿ ಖರೀದಿದಾರನು ದೈಹಿಕ ಸ್ವಾಧಿನವನ್ನು ಪೂರ್ತಿಯಾಗಲಿ ಅಥವ ಬಾಗಾವಾಗಲೀ ಕ್ರಯದ ಸ್ವತ್ತಿನ ಸ್ವಾಧೀನ ಪಡೆದಿದ್ದರೆ, ಅಂತಹ ಸ್ವಾಧೀನ ಪಡೆದ ತಾರೀಖಿನಿಂದ 1 ವರ್ಷದ ಒಳಗೆ ಕೇಸು ಹಾಕಬೇಕಿರುತ್ತದೆ.

[1] ಬಾಬು ರಾಮ್ ವಿರುದ್ದ ಸಂತೋಖ್ ಸಿಂಗ್ – ಮನು/ಎಸ್.ಸಿ/0396/2019

[2] (ಮನು/ಕೆ.ಎ./1090/2017) – ಬಸವಂತಪ್ಪ ವಿರುದ್ದ ಬಸವಣ್ಣೆಪ್ಪ

ಎರಡನೆಯದು, ಅಂತಹ ಆಸ್ತಿ ಕ್ರಯವು ದೈಹಿಕ ಸ್ವಾಧೀನ ಹಸ್ತಾಂತರವನ್ನು ಪೂರ್ಣವಾಗಲಿ ಅಥವ ಬಾಗವಾಗಲಿ ಒಪ್ಪಿಕೊಳ್ಳದಿದ್ದಲ್ಲಿ, ಅಂತಹ ಕ್ರಯ ನೊಂದಾವಣಿ ತಾರೀಖಿನಿಂದ 1 ವರ್ಷದಲ್ಲಿ ಕೇಸು ದಾಖಲಿಸಬೇಕಿರುತ್ತದೆ.[1]

**ಕೊಂಡುಕೊಳ್ಳುವ ಪೂರ್ವಾಧಿಕಾರದ ಸಿದ್ಧಾಂತಗಳು**

ಸುಪ್ರೀಮ್ ಕೋರ್ಟಿನ ಸಂವಿಧಾನ ಪೀಠದ ಮುಂದೆ ಬಂದಂತಹ ಕೇಸಿನಲ್ಲಿ ಈ ಬಗ್ಗೆ ಕೊಂಡುಕೊಳ್ಳುವ ಪೂರ್ವಾಧಿಕಾರದ ಬಗ್ಗೆ ಸಿದ್ಧಾಂತಗಳನ್ನು ಉಲ್ಲೇಕಿಸಿ ತೀರ್ಪಿತ್ತಿದ್ದಾರೆ.[2]

1. ಕೊಂಡುಕೊಳ್ಳುವ ಪೂರ್ವಾಧಿಕಾರಿಯು ಕ್ರಯದ ದಿನಾಂಕದಂದು, ದಾವಾ ಹಾಕುವ ದಿನಾಂಕದಂದು, ಮೊದಲ ಹಂತದ ನ್ಯಾಯಾಲಯದ ತೀರ್ಪಿನ ದಿನಾಂಕದಲ್ಲಿ, ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕನ್ನು ಹೊಂದಿರಬೇಕು.

2. ಮಾರಾಟದ ದಿನಾಂಕದಂದು ಅದನ್ನು ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕನ್ನು ಕೋರುವ ಮುಂಚೆ ಮೊದಲ ನ್ಯಾಯಾಲಯದ ತೀರ್ಪು ಆಗುವ ತನಕ ಅಂತಹ ಹಕ್ಕು ಜಾರಿಯಲ್ಲಿರುವುದನ್ನು ಸಾಬೀತು ಮಾಡಬೇಕು. ಹಕ್ಕುದಾರನು ಆ ಹಕ್ಕು ಕಳೆದುಕೊಂಡರೆ ಅಥವಾ ಮಾರಾಟಗಾರನು ತೀರ್ಮಾನಕ್ಕೆ ಮುಂಚಿತವಾಗಿ ಹಕ್ಕುದಾರನ ಬಲಕ್ಕೆ ಸಮಾನವಾಗಿ ಅಥವಾ ಅದರ ಮೇಲ್ಪಟ್ಟು ಬಲವನ್ನು ಅಭಿವೃದ್ಧಿಪಡಿಸಿದ್ದರೆ, ಕೊಂಡುಕೊಳ್ಳುವ ಪೂರ್ವಾಧಿಕಾರ ದಾವೆ ವಿಫಲಗೊಳ್ಳುತ್ತದೆ.

3. ದಾವೆ ಪ್ರಾರಂಬಿಸುವ ದಿನಾಂಕದಂದು ಮತ್ತು ಮೊದಲ ಹಂತದ ನ್ಯಾಯಾಲಯ ತೀರ್ಪು ಕೊಡುವ ದಿನಾಂಕದಂದು

---

[1] ನಾಗೇಂದ್ರ ವಿರುದ್ಧ ರಾಮ್ ಪ್ರಸಾದ್ – ಮನು/ಕೆ.ಎ/2977/2015

[2] ಶ್ಯಾಮ್ ಸುಂದರ್ ವಿರುದ್ಧ ರಾಮ್ ಕುಮಾರ್ 2001 (8) ಎಸ್.ಸಿ.ಸಿ 24

ಕೊಂಡುಕೊಳ್ಳುವ ಪೂರ್ವಾಧಿಕಾರಿಯು ಅಂತಹ ಹಕ್ಕು ಹೊಂದಿದ್ದರೆ, ಮೊದಲ ನ್ಯಾಯಾಲಯದ ತೀರ್ಪಿನ ನಂತರ ಹಕ್ಕನ್ನು ಕಳೆದುಕೊಂಡರೆ ಅದು ಅವನು ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಅಥವ ದಾವೆಯನ್ನು ಸಲ್ಲಿಸುವ ಕಳೆದುಕೊಳ್ಳುವುದಿಲ್ಲ.

4. ಕೊಂಡುಕೊಳ್ಳುವ ಪೂರ್ವಾಧಿಕಾರಿಯು ಮಾರಾಟದ ದಿನಾಂಕದಲ್ಲಿ, ಮೊದಲ ನ್ಯಾಯಾಲಯದ ತೀರ್ಪಿನ ತಾರೀಖು, ಆತನಿಗೆ ಹಕ್ಕು ಇತ್ತು ಎಂದು ಸಾಬೀತು ಪಡಿಸಿ, ಮೊದಲ ನ್ಯಾಯಾಲಯದಲ್ಲಿ ಕೊಂಡುಕೊಳ್ಳುವ ಪೂರ್ವಾಧಿಕಾರದ ತೀರ್ಪನ್ನು ಪಡೆದಿರುವಾಗ, ಅಂತಹ ತೀರ್ಪಿನ ವಿರುದ್ಧ ಮೇಲ್ಮನವಿ ಬಾಕಿ ಇದ್ದಾಗ ಯಾವುದಾದರೂ ಹಕ್ಕು ತೆಗೆದುಹಾಕುವ ಕಾನೂನು ಜಾರಿಯಾದರೆ ಅಂತಹ ಹಕ್ಕು ಅನೂರ್ಜಿತಗೊಳಿಸುವುದಿಲ್ಲ, ಆದರೆ ಆ ಕಾನೂನು ಹಿಂದಿನಿಂದ ಜಾರಿಯಾದರೆ ಮಾತ್ರ ಅದು ಅನೂರ್ಜಿತವಾಗುತ್ತದೆ.

**ಇತರೆ ಸಿದ್ಧಾಂತಗಳು ವಿವಿದ ಕೇಸುಗಳಿಂದ**

1. ಸಿವಿಲ್ ಪ್ರಕ್ರಿಯಾ ಸಂಹಿತೆ ಕಲಂ 146 ರ ಪ್ರಕಾರ ಯಾವುದೇ ವ್ಯಕ್ತಿಯ ವಿರುದ್ಧ ತೆಗೆದ್ಕೊಳ್ಳಬಹುದಾದ ಕ್ರಮಗಳನ್ನು ಅವನ ಅಡಿಯಲ್ಲಿರುವ ಯಾವುದೇ ವ್ಯಕ್ತಿಯ ವಿರುದ್ಧ ತೆಗೆದುಕೊಳ್ಳಬಹುದು. ಇದು ಕೊಂಡುಕೊಳ್ಳುವ ಪೂರ್ವಾಧಿಕಾರದ ದಾವೆಯಲ್ಲಿ ನ ತೀರ್ಪು ಅಮುಲ್ಜಾರಿಯಲ್ಲಿ ಕೂಡ ಆತನ ಆಸ್ತಿಯ ನಿಯೋಜಕ (ಆತನಿಂದ ಖರೀದಿಸಿದವ) ಕಲಂ 146 ರಲ್ಲಿ ಕ್ರಮ ಜರುಗಿಸಬಹುದು ಎನ್ನುತ್ತದೆ ಸುಪ್ರೀಮ್ ಕೋರ್ಟಿನ ತೀರ್ಪು.[1]

2. ಸ್ವತ್ತು ವರ್ಗಾವಣೆ ಕಾಯ್ದೆ 1888 ಕಲಂ 44 ರಲ್ಲಿ ಜಂಟಿ ಮಾಲೀಕರಲ್ಲಿ ಒಬ್ಬರಿಂದ ಅವನ ಹಕ್ಕನ್ನು ಖರೀದಿಸಿದವನಿಗೆ ಹೇಗೆ ಸೀಮಿತ ಹಕ್ಕನ್ನು ಅಂದರೆ ಆತ ವಿಭಾಗಕ್ಕಾಗಿ ದಾವೆ ಸಲ್ಲಿಸಿ ಆ ಮಾರಾಟ

---

[1] ಜಿಲಾ ಸಿಂಗ್ ವಿರುದ್ಧ ಹಜಾರಿ ಎ.ಐ.ಆರ್ 1979 ಎಸ್.ಸಿ 1066

ಮಾಡಿದವನ ಭಾಗದ ಹಕ್ಕಿನ ಆಸ್ತಿಯನ್ನು ಬೇರ್ಪಡಿಸಿಕೊಳ್ಳುವ ಹಕ್ಕು ಹೇಗೆ ಇದೆಯೋ ಅಂತಹ ವರ್ಗಾವಣೆ ದಿನಾಂಕದಲ್ಲಿ ಅಂತಹ ಭಾಗಾಂಶದ ಮೇಲೆ ಇದ್ದ ನಿಬಂದನೆ ಮತ್ತು ಬಾಧ್ಯತೆಗಳು ಅನ್ವಯವಾಗುತ್ತವೆ. ಹಾಗೆಯೇ ಅವಿಭಕ್ತ ಕುಟೂಂಬದ ಮನೆಯನ್ನು ಕೊಂಡುಕೊಂಡಿದ್ದಾಗ ಆತನು ಜಂಟಿ ಸ್ವಾಧೀನಕ್ಕೆ ಕೋರುವ ಹಕ್ಕು ಕೊಡುವುದಿಲ್ಲ. ಇಂತಹ ಕಾನೂನು ಮತ್ತು ಕಲಂ 4 ಪಾರ್ಟೀಷನ್ (ವಿಭಜನೆ) ಕಾಯ್ದೆ 1893 ಯಲ್ಲಿನ ಕಾನೂನು ಅಂತಹ ಖರೀದಿದಾರನಿಂದ ಒಟ್ಟು ಕುಟುಂಬದ ಮನೆಯನ್ನು ರಕ್ಷಿಸಿ ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕಿನಂತೆ ಬಾಕಿ ಭಾಗಸ್ತರಿಗೆ ವರ್ಗಾಯಿಸುವ ಎರಡೂ ಕಾನೂನು ಒಂದಕ್ಕೊಂದು ಪೂರಕವಾಗಿವೆ.[1]

3. ಈ ಮೇಲ್ಕಂಡ ಕೇಸಿನಲ್ಲಿ ಈ ಎರಡೂ ಕಾನೂನು ಅಂಶಗಳನ್ನು ಉಲ್ಲೇಕಿಸಿ ನಾಲ್ಕು ವಾಸ್ತವಿಕತೆಗಳನ್ನು ವ್ಯಾಖ್ಯಾನಿಸಿದ್ದಾರೆ (1) ಸಹ ಮಾಲೀಕನು ಭಾಗವಾಗಿಲ್ಲದ ತನ್ನ ಮನೆಯಲ್ಲಿನ ಹಕ್ಕನ್ನು ಮಾರಾಟ ಮಾಡಿರಬೇಕು, (2) ಆ ರೀತಿಯ ಭಾಗವಾಗದೆ ಇರುವ ಹಕ್ಕನ್ನು ಸಹ ಮಲೀಕನಿಂದ ಕೊಂಡುಕೊಂಡಿರುವವನು ಆ ಕುಟುಂಬಕ್ಕೆ ಹೊರಗಿನವನು ಅಥವ ಅಪರಿಚಿತನು, (3) ಅಂತಹ ಖರೀದಿದಾರನು ತಾನು ಕೊಂಡುಕೊಂಡ ವಿಭಜನೆಯಾಗದ ಭಾಗಾಂಶವನ್ನು ವಿಭಾಗಕ್ಕಾಗಿ ಮತ್ತು ಪ್ರತ್ಯೇಕ ಸ್ವಾಧೀನಕ್ಕಾಗಿ ದಾವ ಸಲ್ಲಿಸಿರಬೇಕು. (4) ಆತನ ಹಕ್ಕು ಮಂಡನೆ ವಿರುದ್ದವಾಗಿ ಬೇರೆ ಜಂಟಿ ಮಾಲೀಕನು ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕನ್ನು ಮಂಡಿಸಿ ತಾನು ಅಂತಹಹೊರಗಿನವನ ಭಾಗಾಂಶದ ಹಕ್ಕನ್ನು ಕೊಂಡುಕೊಳ್ಳುವುದಾಗಿ ವಹಿಸಿಕೊಳ್ಳಬೇಕು. (5) ಅಂತಹ ಹಕ್ಕನ್ನು ಒಪ್ಪಿಕೊಳ್ಳುವ ಮುಂಚೆ ನ್ಯಾಯಾಲಯವು ಸದರಿ ಭಾಗಾಂಶದ ಮೌಲ್ಯವನ್ನು ನಿರ್ದರಿಸಿ ಅಂತಹ ಮೌಲ್ಯವನ್ನು

---

[1] ಘಂಟೇಷೆರ್ ಘೋಷ್ ವಿರುದ್ಧ ಮದನ್ ಮೋಹನ್ ಘೋಷ್ –1996 (11) ಎಸ್.ಸಿ.ಸಿ 446

ಪಾವತಿಸುವಂತೆ ಕ್ರಮ ಕೈಗೊಳ್ಳಬೇಕು. (6) ಅಂತಹ ಕಲಂ 4 ರಲ್ಲಿನ ಅರ್ಜಿಯನ್ನು ಅಂತಿಮ ತೀರ್ಪು ಆಗಿ ಅಮುಲ್ಜಾರಿಯಲ್ಲಿ ಅಂತಹ ಸ್ವಾಧೀನವನ್ನು ಹಸ್ತಾಂತರಿಸುವ ಮುನ್ನ ಯಾವಾಗ ಬೇಕಾದರೂ ಸಲ್ಲಿಸಬಹುದು.

4. ಸುಪ್ರೀಮ್ ಕೋರ್ಟ್ ಈ ಮೇಲಿನ ಕೇಸನ್ನು ಉಲ್ಲೇಕಿಸಿ ಕೊಂಡುಕೊಳ್ಳುವ ಪೂರ್ವಾಧಿಕಾರಿಗೆ ಈ ಮೂರು ದಿನಾಂಕದಲ್ಲಿ ಕೊಂಡುಕೊಳ್ಳುವ ಪೂರ್ವಾಧಿಕಾರ ಇತ್ತು ಎನ್ನುವುದು ಮುಖ್ಯವಾಗುತ್ತದೆ (1) ಮಾರಾಟವಾದ ತಾರೀಖಿನಲ್ಲಿ, (2) ದಾವ ಸಲ್ಲಿಸಿದ ದಿನಾಂಕದಲ್ಲಿ (3) ಮೊದಲ ಹಂತದ ನ್ಯಾಯಾಲಯ ತೀರ್ಪು ನೀಡಿದ ದಿನಾಂಕದಲ್ಲಿ.[1]

5. ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ರೂಢಿಯಲ್ಲಿ ಅಥವ ಕಾಯ್ದೆಯಲ್ಲಿ ಅಥವ ಕರಾರಿನಲ್ಲಿ ಉದಯವಾಗಿದ್ದಾಗಿದೆ. ಆದರೆ ಸುಪ್ರೀಮ್ ಕೋರ್ಟ್ ತೀರ್ಪು ಎ.ಐ.ಆರ್ 1996 ಎಸ್.ಸಿ 2146 ರಲ್ಲಿ ವರದಿಯಾದಂತೆ ಶ್ರೀಮತಿ ವಿಜಯಲಕ್ಷ್ಮಿ ವಿರುದ್ದ ಹಿಮಂತರಾಜ ಚೆಟ್ಟಿ ಕೇಸಿನಲ್ಲಿ ಹೇಳಿದ್ದೇನೆಂದರೆ, ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಒಂದಾನೊಂದು ಅವದಿಯಲ್ಲಿ ಗುರುತಿಸಲಾಗಿರುವ ಉದ್ದೇಶವೆಂದರೆ, ಗ್ರಾಮದ, ಸಮುದಾಯದ ಐಕ್ಯತೆಯನ್ನು ನಿರೀಕ್ಷಿಸಿ, ಅಥವ ಪಿತೃಸಂಬಂದಿ ಉತ್ತರಾಧಿಕಾರಿ ಸಿದ್ಧಾಂತವನ್ನು ಜಾರಿಗೊಳಿಸಲು ಅಥವ ಕುಟುಂಬದ ಐಕ್ಯತೆ ಮತ್ತು ಪೂರ್ಣತೆಯನ್ನು ಕಾಪಾಡಲು ಇದದ್ದು ಈಗ ಕೈಗಾರೀಕರಣ, ವಿವಿದತೆಯಲ್ಲಿ ವ್ಯಾಪಾರ ಮತ್ತು ಸೇವೆ, ಮತ್ತು ವ್ಯವಸಾಯದಲ್ಲಿ ಯಾಂತ್ರೀಕರಣದಿಂದ ಮತ್ತು ಇನ್ನಿತರೆಯದ್ದರಿಂದ ಇದು ಪುರಾತನವಾಗಿದ್ದು, ಒಡೆತನ ಆಧಿಪತ್ಯದಿಂದ ಕೂಡಿದ್ದು, ರೂಢಿ ತಪ್ಪಿದ ಹಕ್ಕು ಆಗಿರುತ್ತದೆ. ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಈಗ ಕಾಯ್ದೆ ಹಕ್ಕಾಗಿ ಕೊನೆಯಾಗಿರುತ್ತದೆ, ಅದು ಪದ್ದತಿ ಅಥವ ಖಾಸಗಿ

---

[1] ವಿಜಯ್ ಕುಮಾರ್ ವಿರುದ್ಧ ಶಾಂತಿ ದೇವಿ – 2017(8) ಎಸ್.ಸಿ.ಸಿ 837

ಕಾನೂನಿಂದ ಬೇರಪಟ್ಟಿದೆ. ವಿಭಾಗದ ದಾವೆ ಸಲ್ಲಿಸಿದ ತಕ್ಷಣ ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ತನಗೆ ತಾನೆ ಕೊನೆಯಾಗುತ್ತದೆ, ಕುಟುಂಬದ ಆಸ್ತಿಯ ಐಕ್ಯತೆಯನ್ನು ಕಾಪಾಡುವುದು, ಜಂಟಿ ಸ್ವಾಧೀನವನ್ನು ಕಾಪಾಡುವುದು, ಹೊರಗಿನವರನ್ನು ಕುಟುಂಬದಿಂದ ಹೊರಗಿಡುವುದು, ದಾವೆ ಸಲ್ಲಿಸಿದ ನಂತರದಲ್ಲಿ ನಿರರ್ಥಕವಾಗುತ್ತದೆ.[1]

6. ಹಿಂದು ಉತ್ತರಾಧಿಕಾರಿ ಕಾಯ್ದೆ ಕಲಂ 22 ರಲ್ಲಿ ಖರೀದಿಸಲು ಇರುವ ಅಧ್ಯತೆ ಹಕ್ಕು ಬಗ್ಗೆ ವಿಮರ್ಶಿಸುವಾಗ ಮಾನ್ಯ ಸುಪ್ರೀಮ್ ಕೋರ್ಟ್ ಹೀಗೆನ್ನುತ್ತದೆ, "ಕಾಯ್ದೆ ಅನ್ವಯ ಆಸ್ತಿಯ ಮೇಲಿನ ಅಧ್ಯತೆ ಹಕ್ಕು ಸಾಮಾನ್ಯವಾಗಿ ದುರ್ಬಲ (ಅಜಾರಿ) ಹಕ್ಕಾಗಿರುತ್ತದೆ. ಲಿಮಿಟೇಷನ್ (ಕಾಲಮಿತಿ) ಕಾಯ್ದೆ 1963 ವಿಧಿ 97 ರಂತೆ ಒಂದು ವರ್ಷದೊಳಗೆ ಅಂತಹ ಹಕ್ಕು ಪ್ರತಿಪಾದಿಸಬೇಕಿರುತ್ತದೆ.".... "ಕಲಂ 22 ರಲ್ಲಿನ ಹಕ್ಕು ಜಾರಿ ಮಾಡಲು ಯಾವುದೇ ವಿಶೇಷ ಪ್ರಕ್ರಿಯೆ ಇಲ್ಲ, ಸಿವಿಲ್ ಹಕ್ಕು ಜಾರಿ ಮಾಡುವ ರೀತಿಯಲ್ಲೇ ಮೂಲ ದಾವೆಯನ್ನು ಹೂಡಬೇಕು. ಆಸ್ತಿಯನ್ನು ಮಾರಿಬಿಟ್ಟಿದ್ದರೂ ಕೂಡ, ಪೂರ್ಣ ಮತ್ತು ನ್ಯಾಯೋಚಿತ ವಿಚಾರಣೆ ಅವಶ್ಯವಿರುತ್ತದೆ ಯಾಕೆಂದರೆ ವರ್ಗಾವಣೆ ಮಾಡಿದವನು ಅಂತಹ ಹಕ್ಕು ಉಲ್ಲಂಘಿಸಿದನೆ ಎಂಬುದು ಮುಖ್ಯವಾಗುತ್ತದೆ.[2]

7. ಸುಪ್ರೀಮ್ ಕೋರ್ಟಿನ ಸಂವಿಧಾನ ಪೀಠದ ಕೇಸಿನಲ್ಲಿ[3] ಹೇಳುವಂತೆ ಕೊಂಡುಕೊಳ್ಳುವ ಪೂರ್ವಾಧಿಕಾರದ ಕಾನೂನು ಭಾರತದಲ್ಲಿ ಬೆಳೆದು ಬಂದದ್ದು ಮೊಘಲ್ ಸಾಮ್ರಾಜ್ಯದ ಕಾಲದಿಂದ, ಇದು ಅಂದು ಮುಸ್ಲಿಮರಿಗೆ ಮುಸ್ಲಿಮೇತರರಿಗೆ ಸಾಮಾನ್ಯ ಕಾನೂನಿನಂತೆ ಜಾರಿ ಮಾಡಲಾಗುತ್ತಿತ್ತು, ಬ್ರಿಟಿಷ್ ಆಡಳಿತ ಬಂದ ಮೇಲೆ ಅದು

---

[1] ಶ್ರೀ ಅಲ್ಲಮ್ಮ ಪ್ರಭು ವಿ. ಬಾಬುರಾವ್ – ಐ.ಎಲ್.ಆರ್ 2008 (3) ಕರ್ 3775 (ಡಿ.ಬಿ)

[2] ಅಶುತೋಷ್ ಚತುರ್ವೇದಿ ವಿ. ಪ್ರಣೋ ದೇವಿ –ಎ.ಐ.ಆರ್ 2008 ಎಸ್.ಸಿ 2171

[3] ಶ್ರೀ ಔದ್ ಬೆಹಾರಿ ವಿ. ಗಜಾಧರ್ ಜೈಪುರಿಯಾ – ಎ.ಐ.ಆರ್. 1954 ಎಸ್.ಸಿ 417

ಮೊಹಮ್ಮಡನರಿಗೆ ಮಾತ್ರ ಅನ್ವಯಿಸುವಂತೆ ನ್ಯಾಯದ, ಸಮಾನತೆಯ ಮತ್ತು ಉತ್ತಮ ಆತ್ಮಸಾಕ್ಷಿಯ ತಳಹದಿಯಲ್ಲಿ ಜಾರಿ ಮಾಡಲಾಗುತ್ತಿತ್ತು, ಎನ್ನುತ್ತಾರೆ.

8. ವಾದಿಯು ತನ್ನ ಹಕ್ಕು ಮಾರಾಟಗಾರನಂತೆಯೇ ಉತ್ತಮವಾದುದೆಂದು ಮಾತ್ರವಲ್ಲದೆ ಮಾರಾಟಗಾರನಿಗಿಂತ ಅದು ಮೇಲ್ಮಟ್ಟದಲ್ಲಿ ಇದೆ ಎಂದು ತೋರಿಸಬೇಕು. ಅಂತಹ ಪುರ್ವಾಧಿಕಾರ ಹಕ್ಕು ಚಲಾಯಿಸುವ ವೇಳೆಯಲ್ಲಿ ಮೇಲ್ಮಟ್ಟದ ಹಕ್ಕು ಜೀವಂತವಾಗಿರಬೇಕಿರುತ್ತದೆ, ಹಾಗೊಂದು ವೇಳೆ ಹಕ್ಕು ಇಲ್ಲವಾಗಿದ್ದರೆ, ಆ ಸಮಯದಲ್ಲಿ ಸಮಾನ ಅಥವ ಮೇಲ್ಮಟ್ಟದ ಹಕ್ಕು ಹೊಂದಿರುವ ಇನ್ನೊಬ್ಬರನ್ನು ಮೂಲ ಮಾರಾಟಗಾರನ ಜಾಗಕ್ಕೆ ಬದಲಿಸಬೇಕಿರುತ್ತದೆ ಎಂಬುದು ಅನೇಕ ನ್ಯಾಯ ತೀರ್ಮಾನಗಳಿಂದ ಕಂಡುಬರುತ್ತದೆ. ನ್ಯಾಯಾಲಯಗಳು ಈ ಹಕ್ಕಿನ ಬಗ್ಗೆ ಹೆಚ್ಚು ಪರವಾಗಿ ಇಲ್ಲದ ಕಾರಣವೆಂದರೆ, ಇದು ಮಾಲೀಕರ ಸ್ವತ್ತು ವರ್ಗಾವಣೆ ಹಕ್ಕನ್ನು ಅಡ್ಡಿಪಡಿಸುತ್ತದೆ ಎಂಬ ಸಂಭಾವ್ಯದಿಂದ. ಆದ್ದರಿಂದ, ಮಾರಾಟಗಾರ ಮತ್ತು ಕೊಂಡು ಕೊಳ್ಳುವವನು ಎಲ್ಲಾ ಕಾನೂನುಬದ್ಧ ವಿಧಾನಗಳಿಂದ ಕೊಂಡು ಕೊಳ್ಳುವ ಪೂರ್ವಾಧಿಕಾರದ ಹಕ್ಕು ಸೇರಿಕೊಳ್ಳುವುದನ್ನು ತಪ್ಪಿಸಲು ಅನುಮತಿಸುತ್ತದೆ. ಮಾರಾಟಗಾರ ಆಸ್ತಿಯನ್ನು ಪ್ರತಿಸ್ಪರ್ಧಿ ಆದ್ಯತೆ ಅಥವಾ ಸಮಾನ ಹಕ್ಕಿರುವ ಕೊಂಡುಕೊಳ್ಳುವ ಪೂರ್ವಾಧಿಕಾರದವನಿಗೆ ಮಾರಾಟ ಮಾಡುವ ಮೂಲಕ ಹಕ್ಕನ್ನು ಸೋಲಿಸಬಹುದು. ಸಂಕ್ಷಿಪ್ತವಾಗಿ (1) ಕೊಂಡುಕೊಳ್ಳುವ ಪೂರ್ವಾಧಿಕಾರ ಹಕ್ಕು ಮಾರಾಟ ಆಗಿರುವ ಬಗ್ಗೆಗಿನ ಹಕ್ಕಲ್ಲ, ಮಾರಾಟ ಮಾಡಲು ಮುಂದಾಗಿರುವ ಬಗ್ಗೆ ತಮ್ಮ ಅಪೇಕ್ಷೆಯ ಹಕ್ಕನ್ನು ಪ್ರತಿಪಾದಿಸುವ ಹಕ್ಕು. (2) ಕೊಂಡುಕೊಳ್ಳುವ ಪೂರ್ವಾಧಿಕಾರದವರು ಮಾರಾಟವಾಗಿರುವ ಬಗ್ಗೆ ಎರಡನೆಯ ಪರಿಹಾರಾತ್ಮಕ ಹಕ್ಕಿನ ಹಿಂದೆ ಹೋಗಬಹುದು. (3) ಅದು ಖರೀದಿದಾರನ

ಜಾಗಕ್ಕೆ ಕೊಂಡುಕೊಳ್ಳುವ ಪೂರ್ವಾಧಿಕಾರನ ಬದಲಾವಣೆಯೇ ಹೊರತು ಮರು ಖರೀದಿಸುವಿಕೆ ಅಲ್ಲ. (4) ಅದು ಮಾರಾಟವಾದ ಪೂರ್ಣ ಸ್ವತ್ತಿನ ಆರ್ಜನೆಗಾಗಿ ಹಕ್ಕೇ ಹೊರತು ಅದು ಮಾರಾಟವಾದ ಆಸ್ತಿಯ ಬಾಗಾಂಶದಲ್ಲಿನ ಹಕ್ಕು ಸಾದಿಸುವಿಕೆ ಅಲ್ಲ. (5) ಆಧ್ಯತೆಯೇ ಹಕ್ಕಿನ ಮೂಲತತ್ವವಾಗಿದೆ, ವಾದಿಯು ಮೇಲ್ಮಟ್ಟದ ಹಕ್ಕನ್ನು ಖರೀದಿದಾರನ ಅಥವ ಆತನ ಜಾಗಹೊಂದಿದವನ ವಿರುದ್ದ ಹೊಂದಿರಬೇಕು. (6) ಈ ಹಕ್ಕು ತುಂಬ ದುರ್ಬಲ ಹಕ್ಕಾಗಿದ್ದು, ಎಲ್ಲಾ ಕಾನೂನು ಬದ್ದ ವಿಧಾನಗಳಿಂದ ಅದನ್ನು ಸೋಲಿಸಬಹುದು, ಹೇಗೆಂದರೆ ಖರೀದಿದಾರನು ತನ್ನ ಜಾಗದಲ್ಲಿ ಸಮಾನ ಅಥವ ಮೇಲ್ಮಟ್ಟದ ಹಕ್ಕುಳ್ಳವನನ್ನು ಬದಲಿಸುವುದರಿಂದ.[1]

9. ಸುಪ್ರೀಮ್ ಕೋರ್ಟಿನ ಸಂವಿಧಾನ ಪೀಠದಲ್ಲಿನ ಕೇಸಿನ[2] ತೀರ್ಪಿನಲ್ಲಿ ಹೇಳಿದಂತೆ "ಕೊಂಡುಕೊಳ್ಳುವ ಪೂರ್ವಾಧಿಕಾರ ಹಕ್ಕು ಬಗ್ಗೆ ನ್ಯಾಯಾಲಯಗಳು ಹೆಚ್ಚು ಪೂರಕವಾಗಿ ನೋಡುತ್ತಿಲ್ಲ, ಕಾರಣವೇನೆಂದರೆ ಇದು ಮಾಲೀಕರಾದವರ ಸ್ವತ್ತು ವರ್ಗಾವಣೆ ಹಕ್ಕನ್ನು ಅವಹೇಳನ ಮಾಡುತ್ತದೆ ಎಂಬ ಸಂಭಾವ್ಯದಿಂದ. ಅಂತಹ ಕೊಂಡುಕೊಳ್ಳುವ ಪೂರ್ವಾಧಿಕಾರ ಹಕ್ಕನ್ನು ಸೋಲಿಸಲು ಎಲ್ಲಾ ರೀತಿಯ ಕಾನೂನುಬದ್ದ ವಿಧಾನಗಳಿಂದ ವರ್ಗಾವಣೆ ಮಾಡಿದ್ದಲ್ಲಿ ಅದು ಕಾನೂನು ಭಾಹಿರವೂ ಅಲ್ಲ ಅಥವ ವಂಚನೆಯೂ ಅಲ್ಲ."

10. ಸುಪ್ರೀಮ್ ಕೋರ್ಟಿನ ಸಂವಿಧಾನ ಪೀಠದ ಕೇಸಿನಲ್ಲಿ[3] ಮುಸ್ಲಿಮರಲ್ಲಿ ಕೊಂಡುಕೊಳ್ಳುವ ಪೂರ್ವಾಧಿಕಾರ ಹಕ್ಕು ಬಗ್ಗೆ ತೀರ್ಪು ಬರೆಯುವಾಗ್ಗೆ "ಇಂತಹ ಹಕ್ಕು ತುಂಬ ದುರ್ಬಲ ಹಕ್ಕು, ನ್ಯಾಯಾಲಯವು

---

[1] ಬಿಷನ್ ಸಿಂಗ್ ವಿರುದ್ದ ಖಜಾನ್ ಸಿಂಗ್ ಎ.ಐ.ಆರ್ 1958 ಎಸ್.ಸಿ 838

[2] ರಾಧಕಿಷನ್ ವಿ. ಶ್ರೀಧರ್ ರಾಮಚಂದ್ರ ಅಲಿಷಿ – ಎ.ಐ.ಆರ್ 1960 ಎಸ್.ಸಿ. 1368

[3] ಭಗವತಿ ಪ್ರಸಾದ್ ಶಾಹ್ ವಿ. ಭಗವತಿ ಪ್ರಸಾದ್ ಶಾಹ್ – 1964 (5) ಎಸ್.ಸಿ.ಆರ್ 105

ಅದನ್ನು ಆಸ್ತಿ ಕಾನೂನಿನ ಆಧುನಿಕ ಪ್ರವೃತ್ತಿಗಳಲ್ಲಿ ಸರಿಹೊಂದಿಸಲು ಈ ಸಿದ್ಧಾಂತವನ್ನು ತರ್ಕಬದ್ಧಗೊಳಿಸಲು ಚತುರತೆ ತೋರುವ ಅವಶ್ಯವಿಲ್ಲ..... ಕೊಂಡುಕೊಳ್ಳುವ ಪೂರ್ವಾಧಿಕಾರದವನು ಮಾಲೀಕತ್ವದಲ್ಲಿರಬೇಕು, ಬರೀ ಅನುವಂಶಿಕತೆಯ ನಿರೀಕ್ಷೆ ಅಥವ ಹಿಂತಿರುಗಿಸುವ ಹಕ್ಕು ಅಥವ ಯಾವುದೇ ರೀತಿಯ ಅನಿಶ್ಚತೆಯ ಹಕ್ಕು, ಅಥವ ಪೂರ್ಣ ಮಾಲೀಕತ್ವಕ್ಕೆ ಕಡಿಮೆಯಾಗುವ ಯಾವುದೇ ಹಿತಾಸಕ್ತಿ ಅಲ್ಲ."

11. ಯಾವುದೇ ಸಕಾರಾತ್ಮಕ ಕಾರ್ಯದಿಂದ ಮಾರಾಟವನ್ನು ಅಂಗೀಕರಿಸಿದ್ದರೆ, ಅದು ಕೊಂಡುಕೊಳ್ಳುವ ಪೂರ್ವಾಧಿಕಾರ ಹಕ್ಕನ್ನು ಕಳೆದುಕೊಳ್ಳುವ ಪರಿಣಾಮವನ್ನು ಹೊಂದಿದೆ.[1]

12. ಎಸ್ಟೋಪಲ್ (ಸ್ವಾರ್ಜಿತ ಅಡ್ಡಿ) ಸಿದ್ಧಾಂತವು, ಒಳ್ಳೆಯ ರಕ್ಷಣಾತ್ಮಕ ಅಸ್ತ್ರವಾಗಿ ಕೊಂಡುಕೊಳ್ಳುವ ಪೂರ್ವಾಧಿಕಾರ ಹಕ್ಕನ್ನು ಕೊನೆಗಾಣಿಸುತ್ತದೆಯೇ ಎಂಬ ಪ್ರಶ್ನೆಯು ಬಂದಾಗ, ಎಸ್ಟೋಪಲ್ ಒಂದು ಸಮಾನತೆ ನಿಯಮವಾಗಿದ್ದು, ಇದು ಒಳ್ಳೆಯ ನಂಬಿಕೆಯ ಕೊರತೆಯಿರುವ ನಡತೆಯನ್ನು ಹೊರಹಾಕುವುದು. ನ್ಯಾಯದ ಆಡಳಿತದಲ್ಲಿ ಕಾನೂನಿಗೆ ನೆರವಾಗಲು ಇದನ್ನು ಆಹ್ವಾನಿಸಲಾಗುತ್ತದೆ ಮತ್ತು ಅನ್ವಯಿಸಲಾಗುತ್ತದೆ. ಕಾನೂನಿಗೆ ವಿರುದ್ದವಾಗಿ ಎಸ್ಟೋಪಲ್ ಜಾರಿಯಾಗುವುದಿಲ್ಲ. ಸಮಾನತೆಯು ಕಾನೂನನ್ನು ಹಿಂಬಾಲಿಸುತ್ತೆ. ಕಾನೂನು ಭಾಹಿರತೆಗಳನ್ನು ಜಾರಿಮಾಡಲು ಎಸ್ಟೋಪಲ್ ಆಶ್ರಯಿಸುವುದಿಲ್ಲ. ಕಾರ್ಯವು ಸಿಂಧುತ್ವವೆ ಅಥವ ಕಾನೂನು ಭಾಹಿರವೇ ಎಂಬ ಬಗ್ಗೆ ವ್ಯತ್ಯಾಸವಿದೆ. ಸಿಂಧುತ್ವವಲ್ಲದ್ದನ್ನು ಲಿಖಿತ ಅಥವ ಮೌಕಿಕ ಕರಾರಿನ ಅಥವ ನಡವಳಿಕೆ ಮುಖಾಂತರ ಬಿಟ್ಟು ಬಿಡಬಹುದು. ಹೀಗೆ ಸುಪ್ರೀಮ್ ಕೋರ್ಟಿನ ಕೇಸಿನಲ್ಲಿ ಖರೀದಿದಾರನು ಕಟ್ಟುವವರೆಗೆ ಸುಮ್ಮನಿದ್ದು ನಂತರ ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕಿನ ನೋಟೀಸು ನೀಡಿರುವುದಕ್ಕೆ ಈ ಎಸ್ಟೋಪಲ್

---

[1] ಜಗದ್ ಬಂಧು ಚಟರ್ಜಿ ವಿರುದ್ಧ ನಿಲಿಮಾ ರಾಣಿ – 1969 (3) ಎಸ್.ಸಿ.ಸಿ 445

ಸಿದ್ಧಾಂತವನ್ನು ಅಳವಡಿಸಿ ಆತನ ನಡವಳಿಕೆ ಆಧಾರದಲ್ಲಿ ದುರ್ಬಲ ಹಕ್ಕನ್ನು ಮಾನ್ಯ ಮಾಡಿರುವುದಿಲ್ಲ.[1]

13. ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕನ್ನು ಚಲಾಯಿಸಲು ಮಾಲೀಕನು ತನ್ನ ಮಾಲೀಕತ್ವವನ್ನು ವರ್ಗಾಯಿಸಿರಬೇಕು, ಬರೀ ಬಾಡಿಗೆಗಾಗಿ ಸ್ವಾಧೀನ ವರ್ಗಾವಣೆ ಮಾಡಿದ್ದರೆ ಹಕ್ಕು ಚಲಾಯಿಸಲು ಬರುವುದಿಲ್ಲ.[2]

14. ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಹೊಸದಾಗಿ ವರ್ಗಾವಣೆ ನಿಯಮಗಳನ್ನು ರೂಪಿಸುವುದಿಲ್ಲ, ಈಗಾಗಲೇ ಮಾರಾಟಗಾರನು ಮತ್ತು ಖರೀದಿದಾರನು ರಚಿಸಿಕೊಂಡಿರುವ ಅದೇ ನಿಯಮಗಳಲ್ಲಿ ಖರೀದಿದಾರನ ಜಾಗದಲ್ಲಿ ಕೊಂಡುಕೊಳ್ಳುವ ಪೂರ್ವಾಧಿಕಾರದ ವ್ಯಕ್ತಿ ಸ್ಥಾಪಿತನಾಗುತ್ತಾನೆ.[3]

15. ಆಸ್ತಿಯಲ್ಲಿನ ಮಾಲೀಕರ ಹಕ್ಕು ಮನವಹಕ್ಕು ಮಾತ್ರವಲ್ಲದೆ ಸಂವಿಧಾನಿಕ ಹಕ್ಕು ಆಗಿದ್ದು ಕಾನೂನು ರೀತ್ಯ ಅಂತಹ ಹಕ್ಕನ್ನು ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಉಳ್ಳವರು ತೆಗೆದುಕೊಳ್ಳಬಹುದಿರುತ್ತದೆ. ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಕಾನೂನು ಹಕ್ಕಾದರೂ ದುರ್ಬಲ ಹಕ್ಕಾಗಿರುತ್ತದೆ. ಮಾಲೀಕನ ಮಾನವಹಕ್ಕು ಮತ್ತು ಸಂವಿಧಾನಿಕ ಹಕ್ಕಿನೊಂದಿಗೆ ನ್ಯಾಯಾಲಯ ತುಲನೆ ಮಾಡಬೇಕಿರುತ್ತದೆ.[4]

---

[1] ಇಂದಿರಬಾಯಿ ವಿರುದ್ಧ ನಂದ ಕಿಶೋರ್ – ಎ.ಐ.ಆರ್ 1991 ಎಸ್.ಸಿ 1055

[2] ಮೊಹಮದ್ ನೂರ್ ವಿರುದ್ಧ ಮೊಹಮದ್ ಇಬ್ರಾಹಿಮ್ – 1994 (5) ಎಸ್.ಸಿ.ಸಿ 562

[3] ವಿಜಯಲಕ್ಷ್ಮಿ ವಿರುದ್ಧ ಹಿಮಂತರಾಜ ಚೆಟ್ಟಿ – ಎ.ಐ.ಆರ್ 1996 ಎಸ್.ಸಿ 2146

[4] ಲಚ್ಚಮನ್ ದಾಸ್ ವಿರುದ್ಧ ಜಗತ್ ರಾಮ್ – 2007 (10) ಎಸ್.ಸಿ.ಸಿ 448

16. ಕೇವಲ ಕ್ರಯಕ್ಕಾಗಿ ಕರಾರು ಮಾಡಿಕೊಂಡಿದ್ದಾರೆ ಎಂದ ಮಾತ್ರಕ್ಕೆ ಈ ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಚಲಾಯಿಸಲು ಬರುವುದಿಲ್ಲ.[1]

17. ಈ ಮೇಲ್ಕಂಡ 7 ರಿಂದ 16 ರವರೆಗಿನ ಕೇಸುಗಳನ್ನು ಉಲ್ಲೇಕಿಸುತ್ತ ಮಾನ್ಯ ಘನ ಜಸ್ಟೀಸ್ ವಿ. ರಾಮಸುಬ್ರಮಣಿಯನ್ – ಮದ್ರಾಸ್ ಹೈಕೋರ್ಟ್[2] ರಂತೆ ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಬಗ್ಗೆ ಐದು ತತ್ವಗಳನ್ನು ಪ್ರತಿಪಾದಿಸುತ್ತಾರೆ. (1) ಇದು ಬದಲಿಸುವ ಹಕ್ಕನ್ನು ಹೊಂದಿದೆ ಮತ್ತು ಹಾಗಾಗಿ ಮಾರಾಟದ ನಂತರ ಅದು ಉಂಟಾಗುತ್ತದೆ; (2) ಈ ಹಕ್ಕು ಸ್ವತಂತ್ರ ಹಿಡುವಳಿದಾರರ ನಡುವೆ ಇರುತ್ತೆ. ಅಂತಹ ಹಕ್ಕನ್ನು ಇತರೆ ಬಾಗಾಂಶದ ಮೇಲೆ ಸಾಧಿಸಲು ಕೊಂಡುಕೊಳ್ಳುವ ಪೂರ್ವಾಧಿಕಾರ ಉಳ್ಳವನು ಅಂತಹ ಸ್ವತ್ತಿನ ಬಗಾಂಶದಲ್ಲಿ ಮಾಲೀಕತ್ವ ಪ್ರಾಪ್ತವಾಗಿರಬೇಕು. ಆದರೆ ಅಂತಹ ಕೊಂಡುಕೊಳ್ಳುವ ಪೂರ್ವಾಧಿಕಾರದ ಹಕ್ಕು ಕೆಲವು ಕಾಯ್ದೆ ಮತ್ತು ಕರಾರಿನ ಅನ್ವಯ ಬಾಡಿಗೆದಾರರಿಗೂ ಲಭ್ಯವಿರುತ್ತದೆ. (3) ಇದು ತುಂಬ ದುರ್ಬಲ ಹಕ್ಕು, ಎಲ್ಲಾ ಕಾನೂನು ಬದ್ದ ವಿಧಾನಗಳಿಂದ ಅದನ್ನು ಮಾಲೀಕರು ಸೋಲಿಸಬಹುದು (4) ಮಾರಾಟಕ್ಕೆ ಸಕಾರಾತ್ಮಕ ಕಾರ್ಯದ ಮೌನಸಮ್ಮತಿಯಿಂದ ಒಟ್ಟಾರೆ ಬಿಟ್ಟುಬಿಡುವಂತಿದ್ದರೆ, ಹಕ್ಕನ್ನು ಕಳೆದುಕೊಳ್ಳುವುದಕ್ಕೆ ಕಾರಣವಾಗುತ್ತದೆ. (5) ಕೊಂಡುಕೊಳ್ಳುವ ಪೂರ್ವಾಧಿಕಾರದವನಿಗೆ ಯಾವುದೇ ಸಮಾನತೆಯು ಪರವಾಗುವುದಿಲ್ಲ.

18. ಆದರೆ ನಾವು ಕಲಂ 22 ಹಿಂದು ಉತ್ತರಾಧಿಕಾರಿತ್ವ ಕಾಯ್ದೆ 1956 ನೋಡಿದಾಗ ಸದರಿ ಕೊಂಡುಕೊಳ್ಳುವುದಕ್ಕೆ ಆಧ್ಯತೆ ಹಕ್ಕು ನೀಡುವಾಗ 22(1) ರಲ್ಲಿ "ಆಸ್ತಿಯಲ್ಲಿನ ತನ್ನ ಅಥವಾ ಅವಳ ಆಸಕ್ತಿಯನ್ನು

---

[1] ಕುಮಾರ್ ಗೊನ್ಸುಸಾಬ್ ವಿ. ಮೊಹಮದ್ ಮಿಯಾನ್ – 2008 (10) ಎಸ್.ಸಿ.ಸಿ 153

[2] ಎಫ್.ಜೆ ಇರಾನಿ ವಿ. ಹಜೀ ಸರ್ ಇಸ್ಮಾಯಿಲ್ – 2010 ಇಂಡ್ ಲಾ ಮದ್ರಾಸ್ 1911

ವರ್ಗಾಯಿಸಲು ಪ್ರಸ್ತಾಪಿಸುವಾಗಲೇ" ಅಂತಹ ಅಧ್ಯತೆ ಹಕ್ಕು ಪ್ರಾರಂಬವಾಗುತ್ತದೆ ಎಂದು ಹೇಳಿರುತ್ತದೆ. ಮಾರಾಟವಾಗಿರಬೇಕು ಎಂಬ ತತ್ವ ಇರುವುದಿಲ್ಲ. ಅದು "ಮಾರಾಟ ಮಾಡಬಹುದಾದದನ್ನು" ಪರಿಗಣಿಸಿದೆ "ಮಾರಾಟವಾಗಿರುವುದನ್ನು" ಅಲ್ಲ. ಇಂತಹ ಸ್ಥಿತಿಯನ್ನು ಮನಗಂಡು ಒರಿಸ್ಸಾ ಹೈಕೋರ್ಟ್ ಈ ಹಕ್ಕಿನ ವಿಚಾರವಾಗಿ ಒಂದು ಅಚ್ಚರಿ ವ್ಯಾಖ್ಯಾನ ಕೊಟ್ಟಿದೆ.[1] "ಒಬ್ಬ ವಾರಸ್ಸುದಾರ ತಾನು ಪೂರ್ವಜರಿಂದ ಆರ್ಜಿಸಿದ ತನ್ನ ಆಸ್ತಿಯ ಆಸಕ್ತಿಯನ್ನು ಮಾರಾಟಮಾಡಲು ಪ್ರಸ್ತಾಪಿಸಿದಾಗ, ಕಾನೂನು ಪರಿಣಾಮಗಳು ಈ ರೀತಿಯದ್ದಾಗಿರುತ್ತದೆ, (1) ಬಾಕಿ ಉಳಿದ ಸಹ ವಾರಸ್ಸುದಾರರಿಗೆ, ಇತರರನ್ನು ಹೊರತು ಪಡಿಸಿ, ಅಂತಹ ಆಸಕ್ತಿಯನ್ನು ಕೊಳ್ಳುವ ಅಧ್ಯತೆ ಹಕ್ಕು ಕೂಡಿಬರುತ್ತದೆ. ಅಂತಹ ಹಕ್ಕು ಬಳಸಿಕೊಳ್ಳಬಹುದು ಅಥವ ಅದನ್ನು ಬಿಡಲು ಬಹುದು. (2) ಮಾರಾಟಮಾಡಲು ಉದ್ದೇಶಿಸುವವರ ಮೇಲೆ ಸಂಬಂಧಿಸಿದ ಕಾನೂನು ಬದ್ದ ಬಾಧ್ಯತೆಯು ಹೇರಲ್ಪಟ್ಟು, ಇತರೆ ದರ್ಜೆ–1 ಸಹ ವಾರಸ್ಸುದಾರರ ಆಧ್ಯತೆಯ ಹಕ್ಕನ್ನು ಉಲ್ಲಂಘಿಸದಂತೆ ತಡೆಯುತ್ತದೆ. (3) ಕಾನೂನು ಬದ್ದ ನೋಟೀಸನ್ನು (ತಿಳುವಳಿಕೆಯನ್ನು) ದರ್ಜೆ–1 ಸಹ ವಾರಸ್ಸುದಾರರು ಆಧ್ಯತೆಯ ಹಕ್ಕನ್ನು ಹೊಂದಿರುವುದಾಗಿ ಉದ್ದೇಶವಿರುವ ಖರೀದಿದಾರರಿಗೆ ಕೊಟ್ಟು, ಅಂತಹ ಹಕ್ಕು ನೋಟೀಸು ಕೊಟ್ಟರೂ ಯಾರು ಕೊಳ್ಳಲು ಮುಂದೆ ಬಂದಿಲ್ಲವೆಂಬುದು ಖಾತ್ರಿಯಾಗುವವರೆಗೆ ಈ ಹಕ್ಕು ಇರುತ್ತದೆ. – ಇಂತಹ ವ್ಯಾಖ್ಯಾನ ನೀಡದ ಹೊರತು ಕಲಂ 22 ಅಧ್ಯತೆ ಹಕ್ಕು ಕೇವಲ ಗಾಳಿ ಹಕ್ಕಾಗಿ ಶಾಸನಕಾರರ ನಿಜ ಉದ್ದೇಶ ಜಾರಿಯಾಗದು ಎನ್ನುತ್ತ. ಆದ್ದರಿಂದ ಮಾರಾಟಗಾರನು ಇತರೆ 1ನೇ ದರ್ಜೆ ವಾರಸ್ಸುದಾರರಿಗೆ ನೋಟೀಸು

---

[1] ಗಣೇಶ್ ಚಂದ್ರ ಪ್ರದಾನ್ ವಿರುದ್ದ ರುಕ್ಮಿಣಿ ಮೊಹಂತಿ – ಎ.ಐ.ಆರ್ 1971 ಒರಿಸ್ಸಾ 65 – ಇದು ಹಿಮಾಚಲ ಪ್ರದೇಶ ಹೈಕೋರ್ಟಿನ ಎ.ಐ.ಆರ್ 2008 ಹೆಚ್.ಪಿ 71, ರಲ್ಲಿ ಅನುಮೋದಿಸಿದ್ದಾರೆ.

ಕೊಟ್ಟು ಮಾಡಬೇಕಾಗುತ್ತದೆ, ಅಂತಹ ನೋಟೀಸು ನೀಡದೆ ಮಾಡಿರುವ ವರ್ಗಾವಣೆಯನ್ನು ಇತರೆ ವಾರಸ್ಸುದಾರರು ನಮ್ಮ ಗಮನಕ್ಕೆ ತಾರದೆ ಮಾಡಿದ್ದಾರೆಂಬ ವಾದದಿಂದ ಮಾರಾಟವಾದ ಮೇಲೂ ತಮ್ಮ ಅಧ್ಯತೆ ಹಕ್ಕು ಚಲಾಯಿಸ ಬಹುದಾಗಿರುತ್ತದೆ."

19. ಕರ್ನಾಟಕ ಹೈಕೋರ್ಟಿನ [1] ಕೇಸಿನಲ್ಲಿ ಒಬ್ಬರು ವಾರಸ್ಸುದಾರರು ಆಸ್ತಿಯನ್ನು ಪಡೆದಿರುತ್ತಾರೆ. ಒಬ್ಬ ವಾರಸ್ಸುದಾರರು ತಮ್ಮ ಬಾಗದ ಆಸ್ತಿಯನ್ನು ದಾನ ಬರೆದಿರುತ್ತಾರೆ. ಆಗ ಇನ್ನೊಬ್ಬ ವಾರಸ್ಸು ಅದು ದಾನ ಅಲ್ಲ ಕ್ರಯ ನನಗೆ ಕೊಂಡುಕೊಳ್ಳಲು ಅಧ್ಯತೆ ಹಕ್ಕು ಇದೆ ಎಂದು ಕೇಸು ದಾಖಲಿಸುತ್ತಾರೆ. ಸದರಿ ಕೇಸಿನಲ್ಲಿ ದಾನದಲ್ಲಿ ವರ್ಗಾವಣೆಗೆ ಪ್ರಸ್ತಾಪ ಮತ್ತು ಅಂಗೀಕಾರವಿರುವುದಿಲ್ಲ, ಇಲ್ಲಿ ವರ್ಗಾಯಿಸಲು ಪ್ರಸ್ತಾಪವಿಲ್ಲದೆ ನೇರ ವರ್ಗಾವಣೆ ಆಗಿದೆ ಅದುದರಿಂದ ವರ್ಗಾಯಿಸಲು ಪ್ರಸ್ತಾಪ ಮಾಡುವ ಅವಶ್ಯಕತೆ ಇಲ್ಲದ್ದರಿಂದ ಈ ಕೇಸು ನಿಲ್ಲತಕ್ಕದ್ದಲ್ಲ ಎಂದು ವಜಾ ಆಗಿರುತ್ತದೆ. ಕಾಂಟ್ರಾಕ್ಟ್ (ಒಪ್ಪಂದ) ಕಾಯ್ದೆಯಲ್ಲಿನ ಪ್ರೊಪೋಸಲ್ (ಪ್ರಸ್ತಾಪವನ್ನು) ಉಲ್ಲೇಕಿಸಿ ಕ್ರಯಕ್ಕೆ ಪ್ರಸ್ತಾಪ ಮತ್ತು ಅಂಗೀಕಾರ ಇರುತ್ತದೆ. ಕಲಂ 122 ಸ್ವತ್ತು ವರ್ಗಾವಣೆ ಕಾಯ್ದೆಯಡಿಯಲ್ಲಿ ದಾನ ಬರೆಯಲು ಪ್ರಸ್ತಾಪ ಅನ್ನುವ ವಿಚಾರವೇ ಇಲ್ಲ ಎಂಬ ತತ್ವವನ್ನು ಉಲ್ಲೇಕಿಸಿ ಈ ತೀರ್ಪು ನೀಡಿದ್ದಾರೆ.

20. ಬಾಂಬೆ ಹೈ ಕೋರ್ಟಿನ[2] – ಈ ತೀರ್ಪಿನಂತೆ ಕಲಂ 22(1) ರಲ್ಲಿ ನೀಡಿರುವ ಖರೀದಿಸುವ ಆಧ್ಯತೆ ಹಕ್ಕು ಪ್ರೀಎಂಶನ್ ಹಕ್ಕು (ಕೊಂಡುಕೊಳ್ಳಲು ಪೂರ್ವಾಧಿಕಾರದ ಹಕ್ಕು) ಇದ್ದಂತೆ ಎಂದು ವ್ಯಾಖ್ಯಾನಿಸುತ್ತ, ಕಾಯ್ದೆಯಲ್ಲಿನ "ಒಬ್ಬ ವಾರಸ್ಸುದಾರ ಆತನ ಅಥವ

---

[1] ಅಮ್ಮಾಜಮ್ಮ ವಿರುದ್ಧ ಮಹದೇವಮ್ಮ – ಐ.ಎಲ್.ಆರ್ 1996 ಕರ್ನಾಟಕ 3499

[2] ಭರತ್ ಮಚೀಂದ್ರ ಪರಿಕರ್ ವಿ. ಅಂಜನಾಬಾಯ್ – 2007 (6) ಎಂ.ಹೆಚ್.ಎಲ್.ಜೆ 706

ಆಕೆಯ ಹಿತಾಸಕ್ತಿ ವರ್ಗಾವಣೆ ಮಾಡಲು ಪ್ರಸ್ತಾಪಿಸಿದಾಗ" ಎಂಬ ಶಬ್ದಾರ್ಥದಲ್ಲಿ ಕ್ರಯ, ಧಾನ ಅಥವ ಇನ್ನಿತರೆ ಯಾವುದೇ ವಿದದಲ್ಲಿ ಅಂತಿಮ ವರ್ಗಾವಣೆಯೂ ಸೇರಿರುತ್ತದೆ. ಕೊಂಡುಕೊಳ್ಳಲು ಇರುವ ಪೂರ್ವಾಧಿಕಾರದ ಹಕ್ಕು ಅಂತಹ ಕ್ರಯ ಅಥವ ಧಾನ ಪತ್ರದ ವರ್ಗಾವಣೆಯಿಂದ ಅಳಿಸಿ ಬಿಡುವುದಿಲ್ಲ. ಅಂತಹ ವರ್ಗಾವಣೆಗೆ ಪಾರ್ಟಿಗಳಲ್ಲದ ವಾರಸ್ಸುದಾರರ ಹಕ್ಕನ್ನು ತೆಗೆದುಹಾಕುವ ಕಾನೂನು ಇಲ್ಲ."

21. ಮೂರು ಜನ ಅಣ್ಣ ತಮ್ಮಂದಿರು ಎ.ಬಿ.ಸಿ 1ನೇ ದರ್ಜೆ ವಾರಸ್ಸುದಾರರಾಗಿ ಅವರ ಸತ್ತ ತಂದೆಯಿಂದ ಆಸ್ತಿಯನ್ನು ಪಡೆದಿರುತ್ತಾರೆ. ಅಲ್ಲಿ ಎ ಸತ್ತು ಹೋಗುತ್ತಾರೆ, ನಂತರ ಎ ರವರ ಹೆಂಡತಿ ಮತ್ತು ಮಗ ತಮಗೆ ಬಂದಿರುವ ಅವಿಭಾಜಿತ ಆಸ್ತಿಯನ್ನು ಕುಟುಂಬದ ಹೊರಗಿನ ವ್ಯಕ್ತಿಗೆ ಮಾರಾಟ ಮಾಡುತ್ತಾರೆ. ಆ ಕ್ರಯದ ತಾರೀಖಿನಲ್ಲಿ ಬಿ ರವರು ಜೀವಂತವಿರುತ್ತಾರೆ. ಸದರಿ ಕ್ರಯದ ದಿನಾಂಕ 17–10–1984, ಅದರ ಖಾತೆಗೆ ಪ್ರಯತ್ನಿಸಿದ ದಿನಾಂಕ 30–11–1986, ಆ ದಿನದಲ್ಲಿ ನಮ್ಮ ಗಮನಕ್ಕೆ ಬಂತು ಎಂದು ಬಿ ಮಗ ಹಿಂದು ಉತ್ತರಾಧಿಕಾರಿತ್ವ ಕಾಯ್ದೆ ಕಲಂ 22 ರಲ್ಲಿ ತನಗೆ ಖರೀದಿಸುವ ಆಧ್ಯತೆ ಹಕ್ಕು ಇದೆ ಎಂದು ಗೊತ್ತಾದ ಒಂದು ವರ್ಷದಲ್ಲಿ ಕೇಸು ದಾಖಲಿಸುತ್ತಾನೆ. ಇಂತಹ ವಾಸ್ತವಿಕತೆ ಇರುವ ಕೇಸು ಕರ್ನಾಟಕ ಹೈಕೋರ್ಟಿನ ಮುಂದೆ ಬಂದು [1] ಇಲ್ಲಿ ನಿರ್ದರಿಸಿರುವಂತೆ ಕಲಂ 22 ರಲ್ಲಿನ ಹಕ್ಕು 1ನೇ ದರ್ಜೆ ವಾರಸ್ಸುದಾರರ ಮಧ್ಯೆ ಮಾತ್ರ ಬರುತ್ತದೆ, ಅಂತಹ ಹಕ್ಕು ಮುಂದಿನ ಪೀಳಿಗೆಗೆ ವರ್ಗವಾಗುವುದಿಲ್ಲ ಎಂದು ತೀರ್ಪಿತ್ತಿದ್ದಾರೆ ಮಾನ್ಯ ಜಸ್ಟೀಸ್ ಶ್ರೀನಿವಾಸ್

---

[1] ಬಾಳಸಾಹೆಬ್ ವಿರುದ್ದ ಅನಿರುದ್ದ – ಮನು/ ಕೆ.ಎ/ 1036/2017

ಹರೀಶ್ ಕುಮಾರ್. ಈ ಬಗ್ಗೆ ಇನ್ನೊಂದು ಕೇಸನ್ನು ಉಲ್ಲೇಕಿಸಿ [1] ಅಂತಹದ್ದೇ ಸಂಧರ್ಬವನ್ನು ವಿವರಿಸಿದ್ದಾರೆ.

22. ಜಂಟಿಯಾಗಿ ಖರೀದಿಸಿರುವ ಸ್ವತ್ತಿನಲ್ಲಿ – ಜಂಟಿ ಮಾಲೀಕರ ನಡುವೆ ಕಲಂ 22 ಅನ್ವಯಿಸಿ ಅಧ್ಯತೆ ಹಕ್ಕನ್ನು ಪ್ರತಿಪಾದಿಸಲು ಬರುವುದಿಲ್ಲ. – ಜಾರ್ಕಂಡ್ ಹೈ ಕೋರ್ಟ್ ತೀರ್ಪು –2018[2]

23. ಈ ಮೇಲಿನ ಕರ್ನಾಟಕ ಹೈಕೋರ್ಟ್ ಕೇಸಿನಲ್ಲಿ, ಕಲಂ 22(2) ಹಿಂದು ಉತ್ತರಾಧಿಕಾರಿ ಅಧಿನಿಯಮ 1956 ನಂತೆ ಅರ್ಜಿಯನ್ನು/ ದಾವೆಯನ್ನು ಕೋರ್ಟಿಗೆ ಸಲ್ಲಿಸಬೇಕು, 2005 ರ ಹಿಂದು ಉತ್ತರಾಧಿಕಾರಿ ತಿದ್ದುಪಡಿ ಕಾಯ್ದೆ ಹಾಲಿ ಕಲಂ 6 (3) ರಲ್ಲಿ ಈ ತಿದ್ದುಪಡಿ ಜಾರಿಯಾದ ತಾರೀಖಿನಿಂದ (05–09–2005) ಯಾವ ಹಿಂದು ಸತ್ತಾಗ ಆತನ ಅವಿಭಕ್ತ ಕುಟುಂಬದ ಆಸ್ತಿ ಹಿತಾಸಕ್ತಿಯು ಆತನ ಲಿಖಿತ ವ್ಯವಸ್ಥೆಗೊಳಿಸುವಿಕೆ ಮುಖಾಂತರವಾಗಲೀ ಅಥವ ಅಲಿಖಿತ ಉತ್ತರಾಧಿಕಾರ ಆರ್ಜನೆಯಿಂದಾಗಲೀ ನಡೆಯತಕ್ಕದ್ದು ಎಂದಿದೆ. ಅಲ್ಲಿಗೆ ಹಿಂದು ಮಿತಾಕ್ಷರ ಕುಟುಂಬದಲ್ಲಿ ಒಬ್ಬ ಸಹಸಮಾನಾಧಿಕಾರಿ (ಕೋಪಾರ್ಸನರ್) ವ್ಯಕ್ತಿಯ ಸಾವಿನಿಂದ ಅವಿಭಕ್ತ ಕುಟುಂಬ ಕೊನೆಯಾಗುತ್ತದೆ. ಅದುದರಿಂದ ಈ ಹಿಂದೆ ಇದ್ದ ಕಲಂ 6 ರಂತೆ ಹಿಂದು ಅವಿಭಕ್ತ ಕುಟುಂಬ ಮುಂದುವರಿಯುವುದಿಲ್ಲ. ಅಲ್ಲಿಗೆ ಕಲಂ 22 ರಲ್ಲಿ ಅಂತಹ ಅರ್ಜಿಯು ಹಾಲಿ ಕಲಂ 6 ರಲ್ಲಿ ಭಾಗವಾಗವಾಗಬಹುದಾದ ಆಸ್ತಿಗೂ ಅನ್ವಯಿಸುತ್ತದೆ.

---

[1] ಗಣೇಶಪ್ಪ ವಿರುದ್ಧ ಕೃಷ್ಣಮ್ಮ – ಎ.ಐ.ಆರ್ 2005 ಕರ್ನಾಟಕ 160.

[2] https://indiankanoon.org/doc/59551749/

## ಅಧ್ಯಾಯ–11 (ತೀರ್ಪು – ಮಧ್ಯಂತರ ಆಜ್ಞೆ)

### ದಾವೆಯಲ್ಲಿ ಮಧ್ಯಂತರ ಆಜ್ಞೆಗೆ ಸಂಬಂಧಿಸಿದಂತೆ

ಹಿಂದು ಕರ್ತನ ವಿರುದ್ದ ದಾವೆ ಹೂಡಿರುವ ಪಕ್ಷಕಾರನು ಕರ್ತನು ಸದರಿ ಸ್ವತ್ತುಗಳನ್ನು ಮಾರಾಟ ಮಾಡದಂತೆ ಶಾಶ್ವತ ನಿರ್ಬಂದಕಾಜ್ಞೆಯನ್ನು ಕೋರಲು ಬರುವುದಿಲ್ಲ. ಆದರೆ ಸದರಿ ಸ್ವತ್ತು ಕಾನೂನು ಭಾಹಿರ ಕಾರ್ಯಗಳಿಗೆ ಪರಭಾರೆ ಮಾಡಲು ಪ್ರಯತ್ನ ನಡೆಯುತ್ತಿದೆ ಎಂದು ಮಧ್ಯಂತರ ನಿರ್ಬಂದಕಾಜ್ಞೆಯನ್ನು ಪಡೆಯ ಬಹುದಾಗಿರುತ್ತದೆ. (ಎ.ಐ.ಆರ್ 1988 ಎಸ್.ಸಿ 576)

ಕಲಂ 44 ಸ್ವತ್ತು ವರ್ಗಾವಣೆ ಕಾಯ್ದೆಯಲ್ಲಿ ಹಾಕಿರುವ ಕೇಸೊಂದರಲ್ಲಿ, ಅಂದರೆ ಒಬ್ಬ ಜಂಟಿ ಸ್ವಾಧೀನದಲ್ಲಿ ಇರುವ ಆಸ್ತಿಯನ್ನು ಮಾರಿರುವಾಗ ಹಾಕಿರುವ ಕೇಸಿನಲ್ಲಿ ಖರೀದಿದಾರನಾಗಲೀ ಆತನ ಏಜೆಂಟರಾಗಲೀ ಸ್ವಾಧೀನದಲ್ಲಿ ಮುಂದುವರಿಯದಂತೆ ತಡೆ ಆಜ್ಞೆ ನೀಡಲಾಗಿರುತ್ತದೆ. ಈ ಬಗ್ಗೆ ಸುಪ್ರೀಮ್ ಕೋರ್ಟ್ ಮುಂದೆ ಬಂದಾಗ ಖರೀದಿದಾರನು ಅಂತಹ ಸೀಮಿತ ಹಕ್ಕನ್ನು ಮನಗಂಡು ಖರೀದಿಸಿರುವುದರಿಂದ ವಿಶೇಷ ಸಂಧರ್ಬಗಳಲ್ಲಿ ಈ ರೀತಿಯ ಮಧ್ಯಂತರ ತಡೆ ಆಜ್ಞೆ ನೀಡಬಹುದಾಗಿರಿತ್ತದೆ, ಅದು ವಾಸದ ಮನೆಯ ವಿಚಾರವಾಗಿರಬೇಕು, ಖರೀದಿದಾರನು ಮನೆಯವನಾಗಿರಬಾರದು, ಎಂದು ತೀರ್ಪಿತ್ತಿದೆ.[1]

---

[1] ದೋರಬ್ ವಿ. ಕೂಮಿ – ಎ.ಐ.ಆರ್ 1990 ಎಸ್.ಸಿ 867

"ಸರಿಪಡಿಸಲಾಗದ ನಷ್ಟ ಅಥವಾ ಹಾನಿಯ ಪ್ರಕರಣವನ್ನು ಒಂದು ಪಾರ್ಟಿಯು ಮೊಕದ್ದಮೆಯಲ್ಲಿ ತೋರಿಸಿದಾಗ ನ್ಯಾಯಾಲಯವು ಆಸ್ತಿಯ ಸ್ವರೂಪವನ್ನು ಬದಲಾಯಿಸಲು ಅನುಮತಿಸಬಾರದು, ಇದರಲ್ಲಿ ಆಸ್ತಿಯ ಮಾರಾಟ ಅಥವಾ ವರ್ಗಾವಣೆಯನ್ನು ಒಳಗೊಂಡಿರುತ್ತದೆ, ಅಂತಿಮವಾಗಿ ಯಶಸ್ವಿಯಾಗಬಹುದಾದ ಮತ್ತು ವ್ಯಾಜ್ಯಗಳು ಮತ್ತಷ್ಟು ಹೆಚ್ಚಾಗಿ ಕಾರಣವಾಗುವ ಪಾರ್ಟಿಗೆ ಅದು ನಷ್ಟ ಅಥವಾ ಹಾನಿಗೆ ಕಾರಣವಾಗಬಹುದು. ಹಾಲಿ ಪ್ರಕರಣದಲ್ಲಿ, ಕಾನೂನು ಕ್ರಮಗಳು ಬಹಳ ಸಮಯ ತೆಗೆದುಕೊಳ್ಳುವ ಸಾಧ್ಯತೆಯಿದೆ ಎಂದು ವಾದಿಸುವುದನ್ನು ಹೊರತುಪಡಿಸಿ, ಸರಿಪಡಿಸಲಾಗದ ನಷ್ಟದ ಯಾವುದೇ ಪ್ರಕರಣವನ್ನು ಮಾಡಲಾಗಿರುವುದಿಲ್ಲ, ಆದ್ದರಿಂದ, ನಿಗದಿತ ಆಸ್ತಿಯನ್ನು ಉತ್ತಮ ಬಳಕೆಗೆ ತರಲು ಪ್ರತಿವಾದಿಗೆ ಅನುಮತಿ ನೀಡಬೇಕು. ಕೆಳ ಮೇಲ್ಮನವಿ ನ್ಯಾಯಾಲಯ ಮತ್ತು ಹೈಕೋರ್ಟ್ ಪ್ರತಿವಾದಿಗೆ ಆಸ್ತಿಯ ಸ್ವರೂಪವನ್ನು ಬದಲಿಸಲು ಅನುಮತಿ ನೀಡುವುದನ್ನು ಮತ್ತು ನಿರ್ಮಾಣವನ್ನು ಕೈಗೊಳ್ಳುವ ಮೂಲಕ ಆಸ್ತಿಯನ್ನು ಪರಭಾರೆ ಮಾಡಲು ಅನುಮತಿ ನೀಡುವ ಮೂಲಕ, ಅದೇ ಷರತ್ತು ಏನೇ ಇರಲಿ, ಅದನ್ನು ಸಮರ್ಥಿಸಲಾಗುವುದಿಲ್ಲ. ಮೇಲ್ಮನವಿಯ ಹಕ್ಕು ಅಂತಿಮವಾಗಿ ಆಧಾರರಹಿತವೆಂದು ಕಂಡುಬಂದಲ್ಲಿ, ಹಾನಿಗೊಳಗಾದ ಪ್ರತಿವಾದಿಗೆ ನಷ್ಟಪರಿಹಾರ ಕೋರಲು ಯಾವಾಗಲೂ ತೆರೆದಿರುತ್ತದೆ ಅಥವಾ ಸೂಕ್ತವಾದ ಸಂದರ್ಭದಲ್ಲಿ, ಈ ವಿಷಯದಲ್ಲಿ ನ್ಯಾಯಾಲಯವು ಅನುಭವಿಸಿದ ನಷ್ಟಕ್ಕೆ ಹಾನಿಯನ್ನು ನೀಡಬಹುದು."[1]

ದಾವೆಯನ್ನು ಡೀಫಾಲ್ಟ್ ಗೆ (ತಪ್ಪಿಗೆ) ವಜಾ ಮಾಡಿದ್ದಾಗ ಮತ್ತು ದಾವೆ ರಿಸ್ಟೋರ್ (ಪುನರ್ ಸ್ಥಾಪಿಸಿದಾಗ) ಆದಾಗ ಮಧ್ಯಂತರ ಆಜ್ಞೆ ಪುನರ್ ಜಾರಿಯಾಗುವುದೇ ಎಂಬ ವಿಚಾರದಲ್ಲಿ ದಾವೆ ವಜಾ ಆದ

---

[1] ಮಹಾರಾಜ್ ಕೇವಲ್ಜಿ ವಿ. ಬಲ್ದೇವ್ – ಎ.ಐ.ಆರ್ 2005 ಎಸ್.ಸಿ 104

ಆದೇಶ ಮತ್ತು ಪುನರ್ ಸ್ಥಾಪಿತ ಆದೇಶದ ನಿಬಂದನೆಗಳ ಮೇಲೆ ಅವಲಂಬಿಸಿರುತ್ತೆ. ವಜಾ ಮಾಡುವಾಗ ಮಧ್ಯಂತರ ಆದೇಶಗಳನ್ನು ತೆರವು ಗೊಳಿಸಿ ವಜಾ ಆಗಿದ್ದಲ್ಲಿ ಪುನರ್ ಸ್ಥಾಪಿತ ಆದೇಶವಾದರೆ ಅಂತಹ ಮಧ್ಯಂತರ ಆದೇಶಗಳು ಪುನರ್ ಜಾರಿಯಾಗುವುದಿಲ್ಲ. ವಜಾ ಆದಾಗ ಯಾವುದೇ ಉಲ್ಲೇಖವಿಲ್ಲವಾದರೆ ರಿಸ್ಟೋರ್ ಆದಾಗ ಮಧ್ಯಂತರ ಆದೇಶಗಳು ಪುನರ್ ಸ್ಥಾಪಿತವಾಗುತ್ತವೆ.[1]

ದಾವ ಸ್ವತ್ತನ್ನು ಅಟ್ಯಾಚ್ಮೆಂಟ್ ಬಿಫೋರ್ ಜಡ್ಜಮೆಂಟ್ (ಆದೇಶಕ್ಕೆ ಮುನ್ನ ಮುಟ್ಟುಗೋಲು) ಆಗಿರುವಾಗ, ದಾವೆ ಡಿಫಾಲ್ಟ್ ಗೆ ವಜಾ ಆಗುತ್ತದೆ, ವಜಾ ಆದ ಮೇಲೆ ದಾವೆ ಪುನರ್ ಸ್ಥಾಪನಾ ಆದೇಶ ಆಗುವ ಮುನ್ನ ದಾವ ಆಸ್ತಿ ಮಾರಾಟವಾಗಿರುತ್ತದೆ ಆಗ ಮಾರಾಟವನ್ನು ಅನೂರ್ಜಿತ ಎಂದು ಪರಿಗಣಿಸಲು ಬರುತ್ತದೆಯೇ ಎಂಬ ಪ್ರಶ್ನೆಯನ್ನು ಸ್ವಯಂ ಸುಪ್ರೀಮ್ ಕೋರ್ಟ್ ಕೇಸೊಂದರಲ್ಲಿ ಚರ್ಚಿಸಿ, ಕಲಂ 52 ಸ್ವತ್ತು ವರ್ಗಾವಣೆ ಕಾಯ್ದೆ ಅಡಿಯಲ್ಲಿ ಅಂತಹ ಕ್ರಯ ಅನೂರ್ಜಿತವಾಗದು ಎಂದಿದೆ.[2]

ಶಾಶ್ವತ ನಿರ್ಬಂದಕಾಜ್ಞೆ ಪರಿಹಾರ ನೀಡಿರುವ ದಾವೆಯ ವಾದಿಯ ವಾರಸ್ಸುದಾರರು ಅಮುಲ್ಜಾರಿಯನ್ನು ಪ್ರತಿವಾದಿಯ ಮೇಲೆ ಮಾಡಬಹುದೆ ಎನ್ನುವುದಕ್ಕೆ ಕಲಂ 50(2) ಸಿವಿಲ್ ಪ್ರೊಸೀಜರ್ ಕೋಡ್ ರೀತ್ಯ ಪ್ರತಿವಾದಿಯ ಮೇಲಾಗಲೀ ಅಥವ ಅವನ ವಾರಸ್ಸು ಮೇಲಾಗಲೀ ಜಾರಿ ಮಾಡಬಹುದು ಮತ್ತು ವಾದಿಯಾಗಲೀ ಅವನ ವಾರಸ್ಸುದಾರರಾಗಲೀ ಜಾರಿ ಮಾಡಬಹುದು ಎನ್ನುತ್ತದೆ ಸುಪ್ರೀಮ್ ಕೋರ್ಟ್.[3]

---

[1] ಶಿವರಾಯ ವಿ. ಶರಣಪ್ಪ – ಎ.ಐ.ಆರ್ ೧೯೬೮ ಮೈಸೂರು ೨೮೩

[2] ವರೀದ್ ಜೇಕಬ್ ವಿ. ಸೊಸಮ್ಮ – ೨೦೦೪ (೬) ಎಸ್.ಸಿ.ಸಿ ೩೭೮

[3] ಪ್ರಭಾಕರ ಅಡಿಗ ವಿ. ಗೌರಿ – ಎ.ಐ.ಆರ್ ೨೦೧೭ ಎಸ್.ಸಿ ೧೦೬೧

ವಾದಿಯು ಪಡೆದ ದಾವ ತೀರ್ಪನ್ನು ಪ್ರತಿವಾದಿಗಳ ವಿರುದ್ದವಾಗಲೀ ಆವರ ವಾರಸ್ಸುದಾರರ ವಿರುದ್ದವಾಗಲೀ ಜಾರಿ ಮಾಡಲು ಕಲಂ 50 ಸಿವಿಲ್ ಪ್ರೊಸೀಜರ್ ಕೋಡ್ ಸಹಾಯಕ್ಕೆ ಬರುತ್ತದೆ ಹಾಗೆ ಕಲಂ 52 ಸ್ವತ್ತು ವರ್ಗಾವಣೆ ಕಾಯ್ದೆ ರೀತ್ಯ ದಾವ ನಡೆಯುತ್ತಿರುವಾಗ ವರ್ಗಾವಣೆ ಪಡೆದವನ ವಿರುದ್ದವೂ ವಾದಿಯು ತೀರ್ಪು ಜಾರಿ ಮಾಡಬಹುದಾಗಿರುತ್ತದೆ.[1]

ನಿರ್ಬಂದಕಾಜ್ಞೆ ತೀರ್ಪು ಅನುವಂಶೀಯ ಮತ್ತು ವಿಭಾಗಿಸತಕ್ಕ ಹಕ್ಕುಗಳ ವಿಚಾರವಾಗಿ ನೀಡಿರುವುದಾದರೆ, ಪಾರ್ಟಿಯ ಸಾವಿನ ನಂತರ ಅದು ಅಳಿಸಿಹೋಗುವುದಿಲ್ಲ, ಅದು ಡಿಕ್ರಿ ಪಡೆದವರ ವಾರಸ್ಸುದಾರರಿಗೂ ಪ್ರಾಪ್ತವಾಗುತ್ತದೆ ಮತ್ತು ಡಿಕ್ರಿ ವಿರುದ್ದ ಆಗಿರುವ ಪಾರ್ಟಿಗಳ ವಾರಸ್ಸುದಾರರ ಮೇಲೂ ಜಾರಿಯಾಗುತ್ತದೆ ಎನ್ನುತ್ತದೆ ಸುಪ್ರೀಮ್ ಕೋರ್ಟ್.[2]

ನಿರ್ಬಂದಕಾಜ್ಞೆಯನ್ನು ಸ್ಥಿರ ಸ್ವತ್ತಿನ ವಿಚಾರವಾಗಿ ನೀಡುವಾಗ/ ಪಡೆಯುವಾಗ ಅನುಸರಿಸಬೇಕಾದ ಮಾನದಂಡಗಳ ಬಗ್ಗೆ ಸುಪ್ರೀಮ್ ಕೋರ್ಟ್ ಹೀಗೆ ವ್ಯಾಖ್ಯಾನಿಸಿದೆ.[3] (ಎ) ವಾದಿಯ ಮಾಲೀಕತ್ವದ ಮೇಲೆ ಸಂಶಯವನ್ನು ಎತ್ತಿದಲ್ಲಿ ಮತ್ತು ಅವನ ಬಳಿ ಸ್ವಾಧೀನ ಇಲ್ಲದಿದ್ದರೆ, ಘೋಷಣೆ ಮತ್ತು ಸ್ವಾಧೀನಕ್ಕೆ ಒಂದು ದಾವೆ ಇದಕ್ಕೆ ಪರಿಹಾರವಾಗಿದೆ. ಇದರಲ್ಲಿ ತಡೆ ಆಜ್ಞೆ ಕೋರಬಹುದು ಅಥವ ಕೋರದಿರಬಹುದು. ಎಲ್ಲಿ ವಾದಿಯ ಮಾಲೀಕತ್ವವು ವಿವಾದದಲ್ಲಿಲ್ಲ ಅಥವಾ ಸಂಶಯದ ಅಡಿಯಲ್ಲಿಲ್ಲ, ಆದರೆ ಅವನು ತನ್ನ ಸ್ವಾಧೀನದಲ್ಲಿಲ್ಲದಿದ್ದರೆ, ಅವನು ಪರಿಣಾಮಕಾರಿಯಾದ ತಡೆಯಾಜ್ಞೆಯೊಂದಿಗೆ ಸ್ವಾಧೀನಪಡಿಸಿಕೊಳ್ಳಲು

---

[1] ರಾಮಚಂದ್ರ ವಿ. ಲಕ್ಷ್ಮಣ ರಾವ್ – ಎ.ಐ.ಆರ್ 2000 ಕರ್ನಾಟಕ 298

[2] ಕನ್ನಯ್ಯಲಾಲ್ ವಿ. ಬಾಬುರಾಮ್ – 1999 (8) ಎಸ್.ಸಿ.ಸಿ 529

[3] ಅಂತುಲಸುಧಾಕರ್ ವಿ. ಬುಚಿರೆಡ್ಡಿ – ಎ.ಐ.ಆರ್ 2008 ಎಸ್.ಸಿ 2033

ಕೋರಿ ಮೊಕದ್ದಮೆ ಹೂಡಬೇಕಾಗುತ್ತದೆ. ವಾದಿಯ ಕಾನೂನುಬದ್ಧ ಸ್ವಾಧೀನ ಅಥವಾ ವಿಲೇವಾರಿ ಕೇವಲ ಬೆದರಿಕೆಯೊಂದಿಗೆ ಮಾತ್ರ ಹಸ್ತಕ್ಷೇಪವಿದ್ದಲ್ಲಿ, ಸರಳ ತಡೆಯಾಜ್ಞೆ ಮೊಕದ್ದಮೆ ಹೂಡುವುದು ಸಾಕಾಗುತ್ತದೆ. (ಬಿ) ತಡೆಯಾಜ್ಞೆಯ ಸರಳ ದಾವೆಯು ಕೇವಲ ಸ್ವಾಧೀನಕ್ಕೆ ಸಂಬಂಧಿಸಿರುವುದರಿಂದ, ಸಾಮಾನ್ಯವಾಗಿ ಮಾಲೀಕತ್ವದ ವಿಷಯವು ನೇರವಾಗಿ ಮತ್ತು ಗಣನೀಯವಾಗಿ ವಿವಾದದಲ್ಲಿರುವುದಿಲ್ಲ. ತಡೆಯಾಜ್ಞೆಯ ಪ್ರಾರ್ಥನೆಯನ್ನು ಸ್ವಾಧೀನದ ವಿಚಾರದಲ್ಲಿ ತನಿಖೆಯಿಂದ ಉಲ್ಲೇಖಿಸಿ ನಿರ್ಧರಿಸಲಾಗುತ್ತದೆ. ಆದರೆ ಖಾಲಿ ನಿವೇಶನಗಳಲ್ಲಿ, ಆಸ್ತಿಯ ಮಾಲೀಕತ್ವದ ಆಧಾರದ ಮೇಲೆ ಡಿ ಜ್ಯೂರಿ (ಕಾನೂನುಬದ್ದ) ಸ್ವಾಧೀನವನ್ನು ಸ್ಥಾಪಿಸಬೇಕಾದ ಸಂದರ್ಭಗಳಲ್ಲಿ, ಮಾಲೀಕತ್ವದ ವಿಷಯವು ನೇರವಾಗಿ ಮತ್ತು ಗಣನೀಯವಾಗಿ ಪರಿಗಣನೆಗೆ ಉದ್ಭವಿಸಬಹುದು, ಅದರ ಮೇಲೆ ಕಂಡುಹಿಡಿಯದೆ, ಸ್ವಾಧೀನದ ಸಮಸ್ಯೆಯನ್ನು ನಿರ್ಧರಿಸಲು ಆಗುವುದಿಲ್ಲ. (ಸಿ) ಆದರೆ ಮಾಲೀಕತ್ವದ ಬಗ್ಗೆ ಅಗತ್ಯವಾದ ನಿರ್ದಿಷ್ಟ, ಅಥವಾ ಅರ್ಥಮಾಡಿಕೊಳ್ಳುವಂತ ಮನವಿಗಳು (ಪ್ಲೀಡಿಂಗ್ಸ್) ಮತ್ತು ಸೂಕ್ತವಾದ ವಿವಾದಾಂಶಗಳಿಲ್ಲದಿದ್ದರೆ ಮಾಲೀಕತ್ವದ ಬಗ್ಗೆ ಒಂದು ಶೋಧನೆಯಲ್ಲಿ ದಾಖಲಿಸಲಾಗುವುದಿಲ್ಲ – ಅನ್ನೈಮುತ್ತು ಥೇವರ್ ವಿ. ಅಲಗಮ್ಮಲ್ – 2005 (6) ಎಸ್.ಸಿ.ಸಿ 202, ರಲ್ಲಿ ಗಮನಿಸಿದಂತೆ ಮಾಲೀಕತ್ವಕ್ಕೆ ಸಂಬಂಧಿಸಿದ ಮನವಿಗಳು ಒಂದು ವಾದದಲ್ಲಿ ಇಲ್ಲದಿರುವಾಗ ಮತ್ತು ಮಾಲೀಕತ್ವಕ್ಕೆ ಸಂಬಂಧಿಸಿದ ಯಾವುದೇ ಸಮಸ್ಯೆಗಳಿಲ್ಲದಿದ್ದಲ್ಲಿ, ನ್ಯಾಯಾಲಯವು ಮಾಲೀಕತ್ವದ ಪ್ರಶ್ನೆಯನ್ನು, ತಡೆಯಾಜ್ಞೆಯ ಮೊಕದ್ದಮೆಯಲ್ಲಿ ತನಿಖೆ ನಡೆಸುವುದಿಲ್ಲ ಅಥವಾ ಪರೀಕ್ಷಿಸುವುದಿಲ್ಲ ಅಥವಾ ಕಂಡುಹಿಡಿದು ಸಲ್ಲಿಸುವುದಿಲ್ಲ. ಎಲ್ಲಿ ಅಗತ್ಯವಾದ ಮನವಿಗಳು ಮತ್ತು ಸಮಸ್ಯೆಗಳಿದ್ದರೂ, ಆ ವಿಷಯವು ಮಾಲೀಕತ್ವಕ್ಕೆ ಸಂಬಂಧಿಸಿದ ವಾಸ್ತವ ಮತ್ತು ಕಾನೂನಿನ ಸಂಕೀರ್ಣ

ಪ್ರಶ್ನೆಗಳನ್ನು ಒಳಗೊಂಡಿದ್ದರೆ, ಸಮಸ್ಯೆಯನ್ನು ಮೊಕದ್ದಮೆಯಲ್ಲಿ ಕೇವಲ ತಡೆಯಾಜ್ಞೆ ನಿರ್ಧರಿಸುವ ಬದಲು ನ್ಯಾಯಾಲಯವು ಪಾರ್ಟಿಗಳನ್ನು ಪರಿಹಾರಕ್ಕಾಗಿ ಸಮಗ್ರ ದಾವೆಯ ಮೂಲಕ ಮಾಲೀಕತ್ವ ಘೋಷಣೆಗೆ ಒಳಗಾಗುವಂತೆ ಹೊರಹಾಕುತ್ತದೆ. (ಡಿ) ಮಾಲೀಕತ್ವಕ್ಕೆ ಸಂಬಂಧಿಸಿದಂತೆ ಅಗತ್ಯವಾದ ಮನವಿಗಳು, ಮತ್ತು ಮಾಲೀಕತ್ವಕ್ಕೆ ಸಂಬಂಧಿಸಿದ ಸೂಕ್ತವಾದ ವಿಷಯಗಳ ಮೇಲೆ ಯಾವ ಪಾರ್ಟಿಗಳು ಸಾಕ್ಷ್ಯವನ್ನು ಮುನ್ನಡೆಸುತ್ತವೆ, ಒಳಗೊಂಡಿರುವ ವಿಷಯ ಸರಳ ಮತ್ತು ನೇರವಾಗಿದ್ದರೆ, ನ್ಯಾಯಾಲಯವು ಮಾಲೀಕತ್ವಕ್ಕೆ ಸಂಬಂಧಿಸಿದ ವಿಷಯದ ಬಗ್ಗೆ, ತಡೆಯಾಜ್ಞೆಯ ಮೊಕದ್ದಮೆಯಲ್ಲಿಯೂ ಸಹ ತೀರ್ಮಾನಿಸಬಹುದು. ಆದರೆ ಅಂತಹ ಪ್ರಕರಣಗಳು ಸಾಮಾನ್ಯ ನಿಯಮ ಮಾಲೀಕತ್ವದ ಪ್ರಶ್ನೆಯನ್ನು ತಡೆಯಾಜ್ಞೆಯ ದಾವೆಗಳಲ್ಲಿ ನಿರ್ಧರಿಸಲಾಗುವುದಿಲ್ಲ ಎಂಬದಕ್ಕೆ ಹೊರತಾಗಿವೆ. ಆದರೆ ಸ್ಪಷ್ಟವಾದ ಮಾಲೀಕತ್ವ ಹೊಂದಿದ ಮತ್ತು ತಡೆಯಾಜ್ಞೆಗಾಗಿ ಮೊಕದ್ದಮೆ ಹೂಡುವ ವ್ಯಕ್ತಿಗಳನ್ನು ಘೋಷಣೆಗಾಗಿ ಮೊಕದ್ದಮೆಯ ದುಬಾರಿ ಮತ್ತು ಹೆಚ್ಚು ತೊಡಕಿನ ಪರಿಹಾರಕ್ಕೆ ಓಡಿಸಬಾರದು, ಏಕೆಂದರೆ ಕೆಲವು ಮಧ್ಯವರ್ತಿಗಳು ಕಾಟಕೊಡುವ ರೀತಿಯಲ್ಲಿ ಅಥವಾ ತಪ್ಪಾಗಿ ಹಕ್ಕು ಸಾಧಿಸುತ್ತಾ ಅಥವಾ ಅವರ ಆಸ್ತಿಯನ್ನು ಅತಿಕ್ರಮಿಸಲು ಪ್ರಯತ್ನಿಸುತ್ತಾರೆ. ಎಲ್ಲಿ ಮಾಲೀಕತ್ವದ ವಿಚಾರಣೆ ಮಾಡುತ್ತದೋ ಮತ್ತು ಪ್ರಕರಣದ ಸಂಗತಿಗಳನ್ನು ಅವಲಂಬಿಸಿ ಹೆಚ್ಚು ಸಮಗ್ರ ಘೋಷಣಾತ್ಮಕ ಮೊಕದ್ದಮೆಗೆ ವಾದಿಯನ್ನು ಉಲ್ಲೇಖಿಸುತ್ತದೆಯೋ ಅಲ್ಲಿ, ನ್ಯಾಯಾಲಯವು ತನ್ನ ವಿವೇಚನೆಯನ್ನು ಎಚ್ಚರಿಕೆಯಿಂದ ಬಳಸಬೇಕು.

ಮಧ್ಯಂತರ ತಡೆ ಆಜ್ಞೆಗಳನ್ನು ಕೊಡುವಲ್ಲಿ ಅಥವ ನಿರಾಕರಿಸುವಲ್ಲಿ ನ್ಯಾಯಾಲಯ ಕೇಸಿನ ಅರ್ಹತೆಗಳ ಬಗ್ಗೆ ಅಭಿಪ್ರಾಯ ಸೂಚಿಸುವುದಿಲ್ಲ, ಆದರೆ ಸರಿಪಡಿಸಲಾಗದ ನಷ್ಟವನ್ನು ವ್ಯಾಜ್ಯಕಾರರಲ್ಲಿ

ತಪ್ಪಿಸಲು ಪ್ರಯತ್ನಿಸುತ್ತದೆ.[1] ಮಧ್ಯಂತರ ತಡೆ ಆಜ್ಞೆ ನೀಡುವಾಗ ಕೋರ್ಟ್ ಮಿನಿ ಟ್ರಯಲ್ (ವಿಚಾರಣೆ) ನಡೆಸುವುದಿಲ್ಲ. [2] ಸಂಶಯಾಸ್ಪದ ಪ್ರಕರಣಗಳಲ್ಲಿ ನಿರ್ಬಂದಕಾಜ್ಞೆ ನೀಡಲಾಗುವುದಿಲ್ಲ.[3]

ವಾದಿಯು ಮೇಲ್ನೋಟಕ್ಕೆ ತನ್ನ ಪ್ರಕರಣವನ್ನು ಸ್ಥಾಪಿಸದಿದ್ದಲ್ಲಿ, ಅನುಕೂಲತೆಯ ಸಮತೋಲನ ತಮ್ಮ ಪರವಾಗಿ ಇದೆ ಎಂದು ಸಾಬೀತುಪಡಿಸದಿದ್ದಲ್ಲಿ, ಮಧ್ಯಂತರ ಆದೇಶ ನೀಡದಿದ್ದರೆ ತನಗೆ ಸರಿಪಡಿಸಲಾಗದ ನಷ್ಟ ಉಂಟಾಗುವುದೆಂದು ಸ್ಥಾಪಿಸದಿದ್ದಲ್ಲಿ, ಆತನಿಗೆ ಮಧ್ಯಂತರ ಆದೇಶ ನೀಡದಿದ್ದಲ್ಲಿ ತುಂಬಾ ಕಷ್ಟಕರ ಪರಿಸ್ಥಿತಿ ಉಂಟಾಗುವುದೆಂದು ತೋರದಿದ್ದಾಗ, ಮಧ್ಯಂತರ ನಿರ್ಬಂದಕಾಜ್ಞೆ ಅರ್ಜಿ ತಿರಸ್ಕೃತವಾಗುತ್ತದೆ.[4]

ಆಸ್ತಿಯ ಸ್ವರೂಪವನ್ನು ಬದಲಾಯಿಸಲು ನ್ಯಾಯಾಲಯವು ಅನುಮತಿಸಬಾರದು, ಅದು ಆಸ್ತಿಯ ಪರಭಾರೆ ಅಥವಾ ವರ್ಗಾವಣೆಯನ್ನು ಸಹ ಒಳಗೊಂಡಿರುತ್ತದೆ, ಅದು ಪಾರ್ಟಿಗೆ ನಷ್ಟ ಅಥವಾ ಹಾನಿಗೆ ಕಾರಣವಾಗಬಹುದು, ಅವರು ಅಂತಿಮವಾಗಿ ಯಶಸ್ವಿಯಾಗಬಹುದು ಮತ್ತು ದಾವೆಗಳು ಬಹುಸಂಖ್ಯೆಗೆ ಕಾರಣವಾಗಬಹುದು. ಅಂತಹ ಸಂದರ್ಭಗಳಲ್ಲಿ, ಮೇಲ್ಮನವಿ ನ್ಯಾಯಾಲಯ ಮತ್ತು ಹೈಕೋರ್ಟ್ ಅದರಲ್ಲಿ ಪ್ರತಿವಾದಿಗಳಿಗೆ ಆಸ್ತಿಯಲ್ಲಿ ನಿರ್ಮಿಸಲು ಅಥವಾ ಆಸ್ತಿಯನ್ನು ಪರಭಾರೆ ಮಾಡಲು ಅನುಮತಿ ನೀಡುವ ಮೂಲಕ ಆಸ್ತಿಯ ಸ್ವರೂಪವನ್ನು ಬದಲಾಯಿಸಲು ಅನುಮತಿ ನೀಡುವುದನ್ನು ಸಮರ್ಥಿಸಲಾಗುವುದಿಲ್ಲ.[5]

---

[1] ಕೃಷ್ಣಮೂರ್ತಿ ವಿ ಟರ್ಫ್ ಕ್ಲಬ್ – 1975 (2) ಕರ್ ಎಲ್.ಜೆ 428

[2] ಆನಂದ್ ಪ್ರಸಾದ್ ವಿ. ತಾರಕೇಶ್ವರ್ – ಎ.ಐ.ಆರ್ 2001 ಎಸ್.ಸಿ 2367

[3] ಲಕ್ಷ್ಮೀನರಸಿಂಹಯ್ಯ ವಿ. ಯಾಲಕ್ಕಿಗೌಡ – ಎ.ಐ.ಆರ್ 1965 ಮೈಸೂರು 310

[4] ಸುಕನ್ಯ ಹೋಲ್ಡಿಂಗ್ಸ್ ವಿ. ಜಯೇಶ್ – ಎ.ಐ.ಆರ್ 2003 ಎಸ್.ಸಿ 2252

[5] ಮಹರ್ವಾಲ್ ವಿ. ಬಲ್ದೇವ್ – ಎ.ಐ.ಆರ್ 2005 ಎಸ್.ಸಿ 104

ದೀರ್ಘಕಾಲದವರೆಗೆ ಸುಮ್ಮನಿದ್ದ ಮತ್ತು ಇನ್ನೊಬ್ಬರಿಗೆ ಆಸ್ತಿಯನ್ನು ಪ್ರತ್ಯೇಕವಾಗಿ ವ್ಯವಹರಿಸಲು ಅವಕಾಶ ಮಾಡಿಕೊಟ್ಟ ವ್ಯಕ್ತಿಯು ಸಾಮಾನ್ಯವಾಗಿ ತಡೆಯಾಜ್ಞೆಯ ಆದೇಶಕ್ಕೆ ಅರ್ಹನಾಗಿರುವುದಿಲ್ಲ.[1]

ಅಪೀಲು ನ್ಯಾಯಾಲಯ ಕೂಡ ಮಧ್ಯಂತರ ತಡೆ ಆಜ್ಞೆ ನೀಡಬಹುದು, ಅದು ಕೇಸಿನ ಅಂತಿಮ ತೀರ್ಮಾನಕ್ಕೆ ಬಾದಿಸುವುದಿಲ್ಲ. "ವಿಚಾರಣಾ ನ್ಯಾಯಾಲಯವು ಜಾರಿಗೊಳಿಸಿದ ತಾತ್ಕಾಲಿಕ ತಡೆಯಾಜ್ಞೆಯ ಆದೇಶವನ್ನು ನೀಡಲು ನಿರಾಕರಿಸುವ ಆದೇಶಕ್ಕೆ ವಿರುದ್ಧವಾಗಿ, ಮೇಲ್ಮನವಿಯಲ್ಲಿ, ಮೇಲ್ಮನವಿ ನ್ಯಾಯಾಲಯವು ಅಂತಹ ವಿವೇಚನೆಯ ಆದೇಶಕ್ಕೆ ಮಧ್ಯಪ್ರವೇಶಿಸುವಲ್ಲಿ ನಿಧಾನವಾಗಿರಬೇಕು. ಆಕ್ಷೇಪಾರ್ಹ ಆದೇಶವು ವಿಕೃತ, ವಿಚಿತ್ರವಾದ ಮತ್ತು ಕಾನೂನುಬಾಹಿರವೆಂದು ಕಂಡುಬಂದಿಲ್ಲದಿದ್ದರೆ, ಮೇಲ್ಮನವಿ ನ್ಯಾಯಾಲಯವು ವಿವೇಚನೆಯ ಆದೇಶಕ್ಕೆ ಹಸ್ತಕ್ಷೇಪ ಮಾಡಲು ಸಾಧ್ಯವಿಲ್ಲ. ವಿಚಾರಣಾ ನ್ಯಾಯಾಲಯದ ವಿಧಾನ ಮತ್ತು ತಾರ್ಕಿಕತೆಯು ಅಸಮರ್ಪಕ ಮತ್ತು ತಪ್ಪಾಗಿದೆ ಎಂದು ಕಂಡುಬಂದಲ್ಲಿ ಸಹ, ಮೇಲ್ಮನವಿ ನ್ಯಾಯಾಲಯವು ಪ್ರಕರಣದ ದಾಖಲೆಯನ್ನು ಪರಿಶೀಲಿಸಬೇಕಾಗುತ್ತದೆ, ಮೇಲಿನ ಮೂರು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಆದೇಶವನ್ನು ರಾವಾನಿಸುತ್ತದೆ.[2]

ಕರ್ನಾಟಕ ಹೈಕೋರ್ಟ್ ತನ್ನ ಮುಂದೆ ಬಂದ ಕೇಸಾದ ಕಿರಣ್ ವಿ. ಡಾಲಿ ಅಪ್ಪಣ್ಣ – 10–12–2012 ಈ ಬಗ್ಗೆ ಹೀಗೆಂದಿದೆ "ಅವರು ಜಂಟಿ ಕುಟುಂಬದ ಸದಸ್ಯರಾಗಿದ್ದು, ಪ್ರತಿವಾದಿಗೆ ದಾವ ಆಸ್ತಿಯನ್ನು ಆನಂದಿಸುವುದನ್ನು ತಡೆಯಲು ಶಾಶ್ವತ ತಡೆಯಾಜ್ಞೆಯನ್ನು ಪಡೆಯಲು ವಾದಿಗೆ ಅರ್ಹತೆ ಇಲ್ಲ."[3] ಈ ಕೇಸಿನಲ್ಲಿ ಮಧ್ಯಪ್ರದೇಶ ಹೈಕೋರ್ಟ್

---

[1] ಮಂಡಳಿ ರಂಗಣ್ಣ ವಿ. ರಾಮಚಂದ್ರ – 2008 (11) ಎಸ್.ಸಿ.ಸಿ 1

[2] ರಾಮಚಂದ್ರಯ್ಯ ವಿ. ರಂಗಪ್ಪ – ಮನು/ ಕೆ.ಎ/ 0214/ 2013

[3] https://indiankanoon.org/doc/162118010/

ತೀರ್ಪನ್ನು ಉಲ್ಲೇಖಿಸಲಾಗಿದೆ, "ಸಹ-ಪಾಲುದಾರರಲ್ಲಿ ಒಬ್ಬರ ಪಾಲನ್ನು ವಿಭಜನೆ ಮಾಡಲಾಗಿದೆ ಅಥವಾ ಕುಟುಂಬ ವ್ಯವಸ್ಥೆಯಿಂದ ಪ್ರತ್ಯೇಕಿಸಲಾಗಿದೆ ಮತ್ತು ವಿಭಜನೆಯ ಪುರಾವೆಯ ಅನುಪಸ್ಥಿತಿಯಲ್ಲಿ ಒಂದು ಸಹ-ಪಾಲುದಾರರಲ್ಲಿ ಒಬ್ಬರ ಪರವಾಗಿ ಯಾವುದೇ ತಡೆಯಾಜ್ಞೆಯನ್ನು ನೀಡಲಾಗುವುದಿಲ್ಲ. ಅಥವಾ ಕುಟುಂಬ ಇತ್ಯರ್ಥ, ಇತರರ ವಿರುದ್ಧ ಯಾವುದೇ ಸಹ-ಪಾಲುದಾರರ ಪರವಾಗಿ ಯಾವುದೇ ತಡೆಯಾಜ್ಞೆಯನ್ನು ನೀಡಲಾಗುವುದಿಲ್ಲ".(ರೂಪ್ ಚಂದ್ ವಿ. ಇಂದಿರಾದೇವಿ – ಎ.ಐ.ಆರ್ 1997 ಎಂ.ಪಿ 200) ಮುಂದುವರಿದು ಪಂಜಾಬ್ ಹರಿಯಾಣ ಹೈಕೋರ್ಟ್ ತೀರ್ಪು ಉಲ್ಲೇಖಿಸಲಾಗಿದೆ, "ಆಸ್ತಿಯ ಯಾವುದೇ ಭಾಗವನ್ನು ಹೊಂದಿರದ ಸಹ-ಮಾಲೀಕರಿಗೆ ಸಾಮಾನ್ಯ ಆಸ್ತಿಯನ್ನು ಪ್ರತ್ಯೇಕವಾಗಿ ಹೊಂದಿರುವ ಇನ್ನೊಬ್ಬ ಸಹ-ಮಾಲೀಕರ ವಿರುದ್ಧ ತಡೆಯಾಜ್ಞೆ ಪಡೆಯಲು ಅರ್ಹತೆ ಇಲ್ಲ, ಆದರೆ ಎಲ್ಲಾ ಆಸ್ತಿಯನ್ನು ಹೊಂದಿರುವ ವ್ಯಕ್ತಿಯ ಯಾವುದೇ ಕೃತ್ಯ ಸಹ-ಮಾಲೀಕರ ಹಿತಾಸಕ್ತಿಗೆ ಪೂರ್ವಾಗ್ರಹ ಅಥವಾ ಪ್ರತಿಕೂಲತೆಯಿಂದ ಹೊರಹಾಕಲು ಪ್ರಯತ್ನಿಸಿದರೆ ತಡೆಯಾಜ್ಞೆ ಪಡೆಯಬಹುದು" (ಬಚ್ಚನ್ ಸಿಂಗ್ ವಿ. ಸ್ವರ್ಣ ಸಿಂಗ್ – ಎ.ಐ.ಆರ್ 2001 ಪಂಜಾಪ್ ಮತ್ತು ಹರ್ಯಾಣ 112)

**ತೀರ್ಪಿನಲ್ಲಿ ಪ್ರಾಥಮಿಕ ಮತ್ತು ಅಂತಿಮ ತೀರ್ಪು ಈ ಬಗ್ಗೆ**

1. ಪ್ರಾಥಮಿಕ ತೀರ್ಪನ್ನು ಒಮ್ಮೆ ಬರೆದ ಮೇಲೆ, ಪಕ್ಷಕಾರರಲ್ಲದವರು ತಮಗೆ ಆಸ್ತಿಯಲ್ಲಿ ಹಕ್ಕು ಇದೆ ಸೇರಿಸಿಕೊಂಡು ಪ್ರಾರ್ಥಮಿಕ ತೀರ್ಪನ್ನು ಪುನರ್ ಬರೆಯಿರಿ ಎಂದು ಕೇಳಲು ಬರುವುದಿಲ್ಲ. ಅವರು ಹೊಸ ದಾವೆ ಹಾಕಿಕೊಳ್ಳಬೇಕಿರುತ್ತದೆ.[1]

2. ಕೇಸೊಂದರಲ್ಲಿ, "ಪ್ರಾಥಮಿಕ ತೀರ್ಪು ಪ್ರಕಾರ ಬಾಗಗಳ ನಿರ್ಣಯವು ಅಂತಿಮತೆಯನ್ನು–, ಪಡೆಯುತ್ತದೆ, ಪಕ್ಷಕಾರರ ಬಾಗಗಳು

---

[1] ಸರ್ದಾರ್ ಸುರ್ಜೀತ್ ಸಿಂಗ್ ವಿರುದ್ಧ ಜುಗುನ ಬಾಯ್ – ಮನು/ ಎಸ್.ಸಿ./ 1401/2017

ಭಾರತೀಯ ಸಾಕ್ಷ್ಯ ಕಾಯ್ದೆ, ಸೆಕ್ಷನ್ 92 (1) ರಿಂದ ವಿಧಿಸಲಾದ ಶರತ್ತು ಒಂದು ಪಾರ್ಟಿಯು ವಹಿವಾಟಿನ ನಿಯಮಗಳನ್ನು ಒಳಗೊಂಡಿರುವ ದಾಖಲೆಯನ್ನು ಅವಲಂಬಿಸಲು ಪ್ರಯತ್ನಿಸಿದಾಗ ಮಾತ್ರ ಅನ್ವಯಿಸುತ್ತದೆ. ಆ ಸಂದರ್ಭದಲ್ಲಿ ವಹಿವಾಟಿನ ಸ್ವರೂಪ ಮತ್ತು ಉದ್ದೇಶವನ್ನು ದಾಖಲೆಯ ನಿಯಮಗಳಿಂದ ಸಂಗ್ರಹಿಸಬೇಕು ಎಂದು ಕಾನೂನು ಘೋಷಿಸುತ್ತದೆ ಮತ್ತು ಯಾವುದೇ ಮೌಖಿಕ ಒಪ್ಪಂದ ಅಥವಾ ಹೇಳಿಕೆಯ ಯಾವುದೇ ಪುರಾವೆಗಳನ್ನು ಪಾರ್ಟಿಗಳ ನಡುವೆ ಅಂತಹ ದಾಖಲೆಗೆ ವಿರೋಧಾಭಾಸವಾಗಿ ಅಥವಾ ಅದರ ನಿಯಮಗಳನ್ನು ಮಾರ್ಪಡಿಸುವ ಉದ್ದೇಶದಿಂದ ಒಪ್ಪಿಕೊಳ್ಳಲಾಗುವುದಿಲ್ಲ. ಒಂದು ಪಾರ್ಟಿಯ ಸಂದರ್ಭದಲ್ಲಿ ದಾಖಲೆಯಲ್ಲಿ ದಾಖಲಾದ ವಹಿವಾಟು ಎಂದಿಗೂ ಪಾರ್ಟಿಗಳ ನಡುವೆ ಕಾರ್ಯನಿರ್ವಹಿಸಲು ಉದ್ದೇಶಿಸಿರಲಿಲ್ಲ ಮತ್ತು ದಾಖಲೆ ಒಂದು ಮೋಸದ ಸಂಗತಿಯಾಗಿದೆ ಎಂದಾಗ ಈ ಶರತ್ತು ಆಕರ್ಷಿಸುವುದಿಲ್ಲ. ಒಟ್ಟಾರೆಯಾಗಿ ವಿಭಿನ್ನ–ವಹಿವಾಟು ನಡೆದಿತ್ತು ಮತ್ತು ದಾಖಲೆಯಲ್ಲಿ ದಾಖಲಾಗಿರುವುದು ಯಾವುದೇ ಪರಿಣಾಮಗಳಿಲ್ಲ ಎಂದು ಪಾರ್ಟಿಯು ಪ್ರತಿಪಾದಿಸಿದಾಗ ಇಂತಹ ಪ್ರಶ್ನೆ ಉದ್ಭವಿಸುತ್ತದೆ. ಆ ಉದ್ದೇಶಕ್ಕಾಗಿ ಕಾರ್ಯಗತ ಮಾಡಿದ ದಾಖಲೆಯು ಎಂದಿಗೂ ಒಪ್ಪಂದದಂತೆ ಕಾರ್ಯನಿರ್ವಹಿಸಲು ಉದ್ದೇಶಿಸಿರಲಿಲ್ಲ ಆದರೆ ದಾಖಲೆಯಲ್ಲಿ ಒಟ್ಟಾರೆಯಾಗಿ ದಾಖಲಾಗಿಲ್ಲದ ಇತರ ಒಪ್ಪಂದಗಳು ಪಾರ್ಟಿಗಳ ನಡುವೆ ಪ್ರವೇಶಿಸಲಾಗಿದೆ ಎಂದು ತೋರಿಸಲು ಮೌಖಿಕ ಪುರಾವೆಗಳು ಸ್ವೀಕಾರಾರ್ಹವಾಗಿರುತ್ತದೆ.[1]

ಕ್ರಯಕರಾರು ಮಾಡಿಕೊಂಡಿರುವಾಗ, ಕ್ರಯ ಮಾಡುವವರು ತನ್ನ ಸಹೋದರಿಯರನ್ನು ಕರೆಸಿ ಕ್ರಯ ಮಾಡಿಕೊಡುವುದಾಗಿ ಲಿಖಿತ ಒಪ್ಪಂದದಲ್ಲಿ ಹೇಳಿಲ್ಲವಾದರೆ, ಮೌಖಿಕವಾಗಿ ಹಾಗೆ ಒಪ್ಪಿಕೊಳ್ಳಲಾಗಿತ್ತು

---

[1] ಗಂಗಾಬಾಯ್ ವಿ. ಚಬುಬಾಯ್ – ಮನು/ಎಸ್.ಸಿ/0385/1981

ಎಂದು ಕಲಂ 92 ಭಾರತೀಯ ಸಾಕ್ಷ್ಯ ಕಾಯ್ದೆ ಅಡಿಯಲ್ಲಿ ಅವಕಾಶವಿಲ್ಲ ಎಂದಿದೆ ಸುಪ್ರೀಮ್ ಕೋರ್ಟ್.[1] ಇದೇ ರೀತಿಯಲ್ಲಿ ಎಲ್ಲಿ ದಾಖಲೆಯನ್ನು ಲಿಖಿತವಾಗಿ ಬರೆಯುವ ಅವಶ್ಯಕತೆ ಇಲ್ಲ ಎಂದು ಕಾನೂನು ಹೇಳುತ್ತದೋ ಅಲ್ಲಿ ಮೌಖಿಕವಾಗಿ ಕರಾರು ಮಾಡಿಕೊಳ್ಳಬಹುದು ಮತ್ತು ಅದನ್ನು ಮೌಖಿಕ ಒಪ್ಪಂದದಿಂದ ಮಾರ್ಪಡಿಸಬಹುದು. ಆದರೆ ಅಂತಹ ಲಿಖಿತ ಅವಶ್ಯಕತೆ ಇಲ್ಲದ ಕರಾರನ್ನು ಲಿಖಿತವಾಗಿ ಮಾಡಿಕೊಂಡಾಗ, ಅದರ ನಿಯಮಗಳನ್ನು ಮೌಖಿಕ ಒಪ್ಪಂದದಂತೆ ಮಾರ್ಪಡಿಸಬಹುದು. ಆದರೆ ಕಾನೂನು ರೀತ್ಯ ಲಿಖಿತ ಅವಶ್ಯವಿರುವ ದಾಖಲೆಯನ್ನು ಬರೆದಿರುವಾಗ ಅದನ್ನು ಮೌಖಿಕ ಕರಾರಿನಿಂದ ಮಾರ್ಪಡಿಸಲಾಗದು. ಅದನ್ನು ಲಿಖಿತ ಇನ್ನೊಂದು ಕರಾರಿನಿಂದ ಬದಲಾಯಿಸಬಹುದು.[2]

ನೋಂದಾಯಿತ ದಾಖಲೆಯ ಬಗ್ಗೆ ಅದನ್ನು ಮಾನ್ಯವಾಗಿ ಕಾರ್ಯಗತಗೊಳಿಸಿದೆ ಎಂಬ ಊಹೆಯನ್ನು ಹೊಂದಿದೆ. ಅಂತಹ ವ್ಯವಹಾರವು ಕಾನೂನಿನಲ್ಲಿ ಮಾನ್ಯವಾಗಿಲ್ಲ ಎಂದು ತೋರಿಸುವುದು ವ್ಯವಹಾರದ ನೈಜತೆಯನ್ನು ಪ್ರಶ್ನಿಸುವ ಪಾರ್ಟಿಯದ್ದಾಗಿದೆ.[3] – ವಿಶ್ವನಾಥ ವಿ. ಶಾಲಿನಿಬಾಯ್ – ಮನು/ ಎಸ್.ಸಿ/ 0442/ 2009

ಮಾರಾಟದ ಕ್ರಯ ಪತ್ರದ ವಿಚಾರದಲ್ಲಿ, ಇಡೀ ಬೆಲೆಯನ್ನು ಪಾವತಿಸದಿದ್ದರೂ ಸಹ, ಮಾರಾಟ ಪತ್ರವನ್ನು ನೊಂದಾಯಿಸಿ ಕಾರ್ಯಗತಗೊಳಿಸಲಾಗಿರುವಾಗ ಮಾರಾಟ ಪೂರ್ಣಗೊಳ್ಳುತ್ತದೆ.[4]

ಪ್ರಕರಣವೊಂದರಲ್ಲಿ ಸೋಗಿನ ವ್ಯವಹಾರ ಎಂದು ನಿರ್ದರಿಸಲು ಪಾರ್ಟಿಗಳ ಸಂಬಂದಗಳು, ದಾಖಲೆ ಯಾರ ಸ್ವಾಧೀನದಲ್ಲಿ ಇದೆ,

---

[1] ಅಬ್ದುಲ್ ರಶೀದ್ ವಿ. ಸಾಹುಲ್ ಹಮಿದ್ – ಮನು/ಎಸ್.ಸಿ/2734/2000

[2] ಶಕ್ತಿವೇಲ್ ವಿ. ವೇಣುಗೋಪಾಲ್ – ಮನು/ ಎಸ್.ಸ್/ 0499/ 2000

[3] ಜಮೀಲ ವಿ. ಶಮಿ – ಮನು/ ಎಸ್.ಸಿ/ 1488/ 2018

[4] ವಿಧ್ಯಾದರ್ ವಿ. ಮಾಣಿಕ್ ರಾವ್ – ಮನು/ ಎಸ್.ಸಿ/ 0172/ 1999

ಪರ್ಗಣನೆ ಕೊಡಲಾಗಿದೆಯೇ. ಉದ್ದೇಶ ಏನು, ಸ್ವಾಧೀನ ಯಾರ ಬಳಿ ಇದೆ ಎಂಬುದನ್ನು ಸಾಕ್ಷ್ಯದಿಂದ ಪರಿಗಣಿಸಿದೆ. ಇದರಲ್ಲಿ ಮಾರಾಟಗಾರನು ಸ್ಟಾಂಪ್ ಪೇಪರ್ ಖರೀದಿಸಿರುವುದು ಬೆಳಕಿಗೆ ಬಂದಿದೆ, ಸದರಿ ದಾಖಲೆ ಬರೆಸುವಾಗ್ಗೆ ಖರೀದಿದಾರನು ಪಾತ್ರ ವಹಿಸಿಲ್ಲ ಎಂಬುದು ಬೆಳಕಿಗೆ ಬಂದಿದೆ. ದಾಖಲೆಯಲ್ಲಿ ತಪ್ಪು ಉಲ್ಲೇಕಗಳು ಸೇರಿಸಲ್ಪಟ್ಟಿವೆ. ದಾಖಲೆಯ ಉದ್ದೇಶಕ್ಕೆ ಸಂಬಂದಿಸಿದಂತೆ ಸಾಲ ಇತ್ತು ಸಾಲಗಾರರಿಂದ ಆಸ್ತಿ ದೂರ ಇಡಲು ಮಾಡಿದ್ದು ಎನ್ನಲಾಗಿದೆ. ಪರಿಗಣನೆ ಪವತಿ ಆಗದೆ ಮಾಡಿದ ದಾಖಲೆ ಎಂದು ಪ್ರತಿಪಾದಿಸಲಾಗಿದೆ[1].

ದಾಖಲೆಯಲ್ಲಿ ಖೋಟಾ ಅಥವಾ ತಪ್ಪಾಗಿ ತಯಾರಿಸುವಿಕೆಯನ್ನು ಸಾಬೀತುಪಡಿಸುವ ದೃಷ್ಟಿಯಿಂದ, ಪ್ರತಿವಾದಿಯು ಮೂಲ ಮಾರಾಟ ಪತ್ರವನ್ನು ಹೊಂದಿರುವುದು ಕಾನೂನು ಸ್ಥಾನವನ್ನು ಬದಲಾಯಿಸುವುದಿಲ್ಲ. ದಾಖಲೆಯ ಹೊಂದಿರುವ ಪಾರ್ಟಿಯು ಯಾವಾಗಲೂ ಅದನ್ನು ಹಾಜರುಪಡಿಸಲು ನಿರ್ದೇಶಿಸಬಹುದು. ವಾದಿ ಪ್ರತಿವಾದಿಯಿಂದ ಹೇಳಿದ ದಾಖಲೆಗೆ ಹಾಜರುಪಡಿಸುವ ಕರೆ ಮಾಡುವ ಅರ್ಜಿಯನ್ನು ಸಲ್ಲಿಸಬಹುದು ಮತ್ತು ಪ್ರತಿವಾದಿಯನ್ನು ಕಲಿತ ವಿಚಾರಣಾ ನ್ಯಾಯಾಧೀಶರು ಅದನ್ನು ಹಾಜರುಪಡಿಸುವಂತೆ ನಿರ್ದೇಶಿಸಬಹುದು. ಈ ವಿಷಯದ ಮತ್ತೊಂದು ಅಂಶವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಪುರಾವೆಯ ಹೊರೆ (ಬರ್ಡನ್ ಆಫ್ ಪ್ರೂಫ್) ಮತ್ತು ಪುರಾವೆಯ ಹೊಣೆಗಾರಿಕೆಯ (ಒನಸ್ ಆಫ್ ಪ್ರೂಫ್) ನಡುವೆ ವ್ಯತ್ಯಾಸವಿದೆ. ಸಾಕ್ಷಿ ಪ್ರಾರಂಭಿಸುವ ಹಕ್ಕನ್ನು ಒನಸ್ ಪ್ರೋಬಂಡಿ (ಸ್ಥಾಪಿಸುವ ಹೊರೆ) ಅನುಸರಿಸುತ್ತದೆ. ಇದು ಪ್ರಕರಣದ ಆರಂಭಿಕ ಹಂತದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಎಲ್ಲಿ ಯಾವ ಪಾರ್ಟಿಯೂ

---

[1] ಪವನ್ ಕುಮಾರ್ ವಿ. ರೊಚಿರಮ್ – ಮನು/ ಎಸ್.ಸಿ/ 1187/ 1999

ಪ್ರಾರಂಭಿಸಬೇಕು ಎಂಬ ಪ್ರಶ್ನೆ ಇರುತ್ತದೋ ಅಲ್ಲಿ ರುಜುವಾತಿನ ಹೊಣೆ ಪ್ರಶ್ನೆಯು ಹೆಚ್ಚಿನ ಬಲವನ್ನು ಹೊಂದಿದೆ. ಪುರಾವೆಗಳ ಭಾರವನ್ನು ಮೂರು ವಿಧಗಳಲ್ಲಿ ಬಳಸಲಾಗುತ್ತದೆ: (i) ಆರಂಭದಲ್ಲಿ ಅಥವಾ ನಂತರದ ಪ್ರತಿಪಾದನೆಯನ್ನು ಬೆಂಬಲಿಸುವ ಮೂಲಕ ಸಾಕ್ಷ್ಯಗಳನ್ನು ಮುಂದೆ ತರುವ ಕರ್ತವ್ಯವನ್ನು ಸೂಚಿಸಲು; (ii) ಎಲ್ಲಾ ಪ್ರತಿ ಸಾಕ್ಷ್ಯಗಳಿಗೆ ವಿರುದ್ಧವಾಗಿ ಪ್ರತಿಪಾದನೆಯನ್ನು ಸ್ಥಾಪಿಸುವುದು; ಮತ್ತು (iii) ವಿವೇಚನೆಯಿಲ್ಲದ ಬಳಕೆಯಲ್ಲಿ ಇದು ಅಥವಾ ಇತರ ಎರಡನ್ನೂ ಅರ್ಥೈಸಬಹುದು. ಪ್ರಾಥಮಿಕ ನಿಯಮವೆಂದರೆ ಸೆಕ್ಷನ್ 101 ಸಾಕ್ಷ್ಯ ಕಾಯ್ದೆ ಜಗ್ಗುವುದಿಲ್ಲ. ಸೆಕ್ಷನ್ 102 ರ ಪ್ರಕಾರ, ಆರಂಭಿಕ ಜವಾಬ್ದಾರಿ ಯಾವಾಗಲೂ ವಾದಿಯ ಮೇಲಿರುತ್ತದೆ ಮತ್ತು ಅವನು ಆ ಜವಾಬ್ದಾರಿಯನ್ನು ಪೂರೈಸಿ ಅವನಿಗೆ ಪರಿಹಾರವನ್ನು ನೀಡುವ ಒಂದು ಪ್ರಕರಣವನ್ನಾಗಿ ಮಾಡಿದರೆ, ಆ ಸಂದರ್ಭದಲ್ಲಿ ವಾದಿಯ ಹಕ್ಕನ್ನು ನಿರಾಕರಿಸುವ ಸಂಧರ್ಭ ಯಾವುದಾದರೂ ಇದ್ದರೆ, ಸಾಬೀತುಪಡಿಸಲು ಜವಾಬ್ದಾರಿ ಪ್ರತಿವಾದಿಗೆ ಬದಲಾಗುತ್ತದೆ.[1]

ಪುರಾವೆಯ ಹೊರೆ ಬಗ್ಗೆ ಗುಜರಾತ್ ಹೈಕೋರ್ಟ್ ತನ್ನ ತೀರ್ಪಿನಲ್ಲಿ ಹೀಗೆಂದಿದೆ, ಎರಡೂ ಪಕ್ಷಗಳು ತಮ್ಮ ಸಮಸ್ಯೆಗಳಿಗೆ ಬೆಂಬಲವಾಗಿ ಸಾಕ್ಷ್ಯಗಳನ್ನು ಹಾಜರುಪಡಿಸಿದಾಗ ಮತ್ತು ಸಮಸ್ಯೆಯಲ್ಲಿರುವ ವಾಸ್ತವಿಕತೆಗಳಿಗೆ ಸಂಬಂಧಿಸಿದ ಸಂಪೂರ್ಣ ಸಾಕ್ಷ್ಯಗಳು ನ್ಯಾಯಾಲಯದ ಮುಂದೆ ಇರುವಾಗ, ಪುರಾವೆಯ ಹೊರೆ ಅದರ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತದೆ ಮತ್ತು ಪುರಾವೆಯ ಹೊರೆಯ ಪ್ರಶ್ನೆಯು ಕೇವಲ ಸೈದ್ಧಾಂತಿಕವಾಗುತ್ತದೆ. ಗಮನಿಸಬೇಕಾದ ಅಂಶವೆಂದರೆ, ಒಳಗೊಂಡಿರುವ ಸಮಸ್ಯೆಗೆ ಸಂಬಂಧಿಸಿದಂತೆ

---

[1] ಅನಿಲ್ ರಿಶಿ ವಿ. ಗುರ್ಬಕ್ಷ್ ಸಿಂಗ್ – ಮನು/ ಎಸ್.ಸಿ/ 8133/2006

ಸಾಕ್ಷ್ಯಗಳನ್ನು ಸೇರಿಸಬೇಕು. ಎರಡೂ ಪಾರ್ಟಿಗಳಿಂದ ಕೆಲವು ಸಾಕ್ಷಿಗಳನ್ನು ಪರಿಶೀಲಿಸುವುದು ಅಥವಾ ವಿವಾದದಲ್ಲಿ ನೈಜ ಸಮಸ್ಯೆಯನ್ನು ಸಾಬೀತುಪಡಿಸಲು ಕೆಲವು ಪುರಾವೆಗಳನ್ನು ಸೇರಿಸುವುದು ಅಥವಾ ಹೆಚ್ಚಿನ ಸಾಕ್ಷ್ಯಾಧಾರಗಳಿಲ್ಲದ ಪಾರ್ಟಿಗಳು ಸೇರಿಸಿದ ಅಂತಹ ಸಾಕ್ಷ್ಯಗಳು ತೃಪ್ತಿದಾಯಕ ತೀರ್ಮಾನಕ್ಕೆ ಬರಲು ಸಾಕಾಗದೇ ಇದ್ದಾಗ, ಪುರಾವೆಯ ಹೊರೆಯ ಪ್ರಸ್ತುತತೆ ಕಣ್ಮರೆಯಾಗುವುದಿಲ್ಲ. ಆದ್ದರಿಂದ, ಪ್ರತಿ ಪಾರ್ಟಿಯೂ ವಾಸ್ತವಿಕ  ವಿಷಯವನ್ನು ಸಾಬೀತುಪಡಿಸಲು ಮತ್ತು ನಿರಾಕರಿಸಲು ಪುರಾವೆಗಳನ್ನು ಸೇರಿಸಿದಾಗ, ಕೇವಲ, ಪುರಾವೆಯ ಹೊರೆಯ ಪ್ರಾಮುಖ್ಯತೆಯು ಕಣ್ಮರೆಯಾಗುತ್ತದೆ. ಹಾಲಿ ಪ್ರಕರಣದಲ್ಲಿ ಆರೋಪಿತ ವಿಭಾಗ ಪತ್ರವನ್ನು ನಕಲಿ ಎಂದು ಘೋಷಿಸಲು ವಾದಿ ಮೊಕದ್ದಮೆಯನ್ನು ತಂದರು, ಆದ್ದರಿಂದ, ನಕಲಿ ಎಂದು  ಸಾಬೀತುಪಡಿಸಲು ಆರಂಭಿಕ ಹೊರೆ ವಾದಿಯ ಮೇಲೆ ಇತ್ತು. ವಾದಿ ತನ್ನ ಹೊರೆಯನ್ನು ಹೊರಹಾಕುವಲ್ಲಿ ಕೆಲವು ಪುರಾವೆಗಳನ್ನು ತಂದಾಗ, ಅಂತಹ ಸಾಕ್ಷ್ಯವನ್ನು ನಿರಾಕರಿಸುವ ಜವಾಬ್ದಾರಿಯನ್ನು ಪ್ರತಿವಾದಿಗೆ ವರ್ಗಾಯಿಸಬಹುದು. ಆದ್ದರಿಂದ, ನ್ಯಾಯಾಲಯವು ಸಮಸ್ಯೆಯ ಸಂಗತಿಗಳ ಬಗ್ಗೆ ತೀರ್ಮಾನಕ್ಕೆ ಬರಲು ಅನುವು ಮಾಡಿಕೊಡುವ ಸಾಕ್ಷ್ಯವನ್ನು ದಾಖಲೆಯಲ್ಲಿ ತರದ ಹೊರತು, ಪುರಾವೆಯ ಹೊರೆಯ ಪ್ರಶ್ನೆಯು ಪ್ರಸ್ತುತವಾಗಿಯೇ ಉಳಿಯುತ್ತದೆ. ..... ಸೆಕ್ಷನ್ 110 ಸಾಕ್ಷ್ಯ ಕಾಯ್ದೆ  ನಿಬಂಧನೆಯು ಪ್ರಸಿದ್ಧ ತತ್ವವನ್ನು ಒಳಗೊಂಡಿದೆ, ಸ್ವಾಧೀನವು ಮಾಲೀಕತ್ವದ ಒಂಬತ್ತು ಅಂಶವಾಗಿದೆ ಅಥವಾ ಸ್ವಾಧೀನವು ಮಾಲೀಕತ್ವದ ಪ್ರಾಥಮಿಕ ಮುಖದ ಪುರಾವೆಯಾಗಿದೆ. ಅದನ್ನು ನಿರಾಕರಿಸದಿದ್ದರೆ ಅಥವಾ ಇತರ ಪಾರ್ಟಿಯೂ ಉತ್ತಮ ಮಾಲೀಕತ್ವವನ್ನು ಹೊಂದಿದ್ದಾರೆ ಎಂದು ಸಾಬೀತುಪಡಿಸದ ಹೊರತು, ಭಾರತೀಯ ಸಾಕ್ಷ್ಯ ಕಾಯ್ದೆಯ ಸೆಕ್ಷನ್ 110 ಆಸ್ತಿಯನ್ನು ಹೊಂದಿರುವ ವ್ಯಕ್ತಿಯ ಪರವಾಗಿ ಮಾಲೀಕತ್ವದ ಊಹೆಯನ್ನು

ಹುಟ್ಟುಹಾಕುತ್ತದೆ. ......... ಈ ಪ್ರಕರಣದಲ್ಲಿ ಆಸ್ತಿಗಳು ವಾದಿ ಮತ್ತು ಪ್ರತಿವಾದಿಗಳ ಪೂರ್ವಜರ ಸ್ವತ್ತುಗಳೆಂದು ಒಪ್ಪಿಕೊಂಡಿರುವಾಗ ಮತ್ತು ನಂತರದ ಕುಟುಂಬ ವ್ಯವಸ್ಥಾಪನೆ ಪ್ರಕಾರ, ವಾದಿಯು ಆಸ್ತಿಯ ಮಾಲೀಕರಾದರು ಮತ್ತು ಹಿಂದಿನ ವಿಭಾಗ ಪತ್ರವನ್ನು ನಕಲಿ ಎಂದು ಘೋಷಿಸಲು ಕೋರಿದ್ದಾರೆ. ವಿಭಾಗದ ಹಿಂದಿನ ಪತ್ರವು ನಕಲಿ ಎಂದು ವಾದಿ ಸಾಬೀತುಪಡಿಸದಿದ್ದಲ್ಲಿ, ವಾದಿಯ ಮಾಲೀಕತ್ವದ ಊಹೆಯಿಲ್ಲ, ಮತ್ತು ಸೆಕ್ಷನ್ 110 ಸಾಕ್ಷ್ಯ ಕಾಯ್ದೆ ನಿಬಂಧನೆಯು ಹಾಲಿ ಪ್ರಕರಣದಲ್ಲಿ ಅನ್ವಯಿಸುವುದಿಲ್ಲ.[1]

ಪ್ರಕರಣವೊಂದರಲ್ಲಿ, ಪ್ರಶ್ನೆಯಲ್ಲಿರುವ ವಹಿವಾಟು ಸಾಲಕ್ಕಾಗಿ ಮಾರಾಟದ ದಾಖಲೆಯನ್ನು ಭದ್ರತೆಯ ಮೂಲಕ ಕಾರ್ಯಗತ ಗೊಳಿಸಲಾಗಿದೆಯೆ ಅಥವಾ ವ್ಯವಹಾರವು ಆಸ್ತಿಯ ಮುಕ್ತ ಮತ್ತು ಮುಕ್ತವಾಗಿ ಮಾರಾಟವಾಗಿದೆಯೆ ಎಂಬುದಕ್ಕೆ ದಾಖಲೆಯಲ್ಲಿ ಕಂಡುಬರುವ ಪರಿಗಣನೆಯು ತೀರಾ ಕಡಿಮೆ ಎಂದು ತೋರುತ್ತದೆಯೇ ಎಂಬುದು. ಪರಿಗಣನೆಯು ತುಂಬಾ ಕಡಿಮೆಯಿದ್ದರೆ, ವ್ಯವಹಾರವು ಮಾರಾಟದಲ್ಲಿ ಒಂದಾಗಿರಲಾರದು ಎಂದು ಇದು ಸೂಚಿಸುತ್ತದೆ. ಪರಿಗಣನೆಯು ನ್ಯಾಯೋಚಿತ ಅಥವಾ ಸಮಂಜಸವಾದರೆ, ಅಂತಹ ವ್ಯವಹಾರವು ಮಾರಾಟದಲ್ಲಿ ಒಂದು ಎಂದು ಸೂಚಿಸುತ್ತದೆ.[2]

ಆಂದ್ರ ಹೈಕೋರ್ಟ್ ಪ್ರಕರಣವೊಂದರಲ್ಲಿ, ನಾಮಮಾತ್ರ ಮತ್ತು ಶಾಮ್ ವಹಿವಾಟು ಎಂದು ಆರೋಪಿಸಲಾಗಿರುತ್ತದೆ. ಸಾಲವನ್ನು ಮರುಪಾವತಿಸಲು ಭದ್ರತೆಯ ಮೇಲಾಧಾರ ಉದ್ದೇಶವನ್ನು ಪೂರೈಸಲು ಉದ್ದೇಶಿಸಲಾಗಿದೆಯೇ ಅಥವಾ ವಿಭಜನೆ ಮೊಕದ್ದಮೆಯಲ್ಲಿ ವಾದಿಗಳ

---

[1] ರೇಣು ಶ್ರೀ ವಿ. ಪ್ರದೀಪ್ – ಮನು/ ಜಿ.ಹೆಚ್./ 0796/ 2018

[2] ಉದಯ್ ಚಂದ್ ವಿ. ಸಾಯಿಬಾಲ್ – ಮನು/ ಎಸ್.ಸಿ/ 0571/ 1987

ಹಕ್ಕನ್ನು ಸೋಲಿಸುವ ಸಾಧನವಾಗಿದೆಯೆ ಎಂಬುದು ಅಪ್ರಸ್ತುತ. ಮುಖ್ಯ ಪ್ರಶ್ನೆಯೆಂದರೆ, ಅದು ಪಾರ್ಟಿಗಳಿಂದ ಕಾರ್ಯನಿರ್ವಹಿಸಲು ಉದ್ದೇಶಿಸಲಾಗಿದೆಯೇ ಮತ್ತು ಆ ಪ್ರಶ್ನೆಯನ್ನು ನಿರ್ಧರಿಸಲು, ನ್ಯಾಯಯುತ ತೀರ್ಮಾನಕ್ಕೆ ಬರಲು ಸಹಾಯಕವಾಗುವಂತಹ ಹಾಜರಾಗುವ ಎಲ್ಲಾ ಸಂದರ್ಭಗಳನ್ನು ಪರಿಶೀಲಿಸಬಹುದು. ಬೇರೆ ರೀತಿಯಲ್ಲಿ ಹೇಳುವುದಾದರೆ, ಸಾಲದ ಮನವಿಯನ್ನು ಎತ್ತಲಾಗಿಲ್ಲವಾದರೂ, ಅದು ಸಾಲದ ವಹಿವಾಟು ಎಂದು ಸೂಚಿಸುವ ಸಾಮಗ್ರಿಗಳಿವೆ ಮತ್ತು ಆ ವಸ್ತುಗಳನ್ನು ವಾದಿಯು ತನ್ನ ವಾದ ಪತ್ರ ಮತ್ತು ಕಾರ್ಯಗತಗೊಳಿಸಿದ ದಾಖಲೆಗಳಿಂದ ಸ್ವತಃ ಸರಬರಾಜು ಮಾಡಲಾಗಿರುತ್ತದೆ.[1]

ಪ್ರಕರಣವೊಂದರಲ್ಲಿ,[2] ಸಾಲ ನೀಡಿದವರು ಬಾಕಿ ವಸೂಲಿಗೆ ಕೇಸನ್ನು ಹಾಕಿ ಡಿಕ್ರಿ ಪಡೆಯುತ್ತಾರೆ. ನಂತರ ಸಾಲ ಪಡೆದವರ ಮನೆಯಲ್ಲಿ ವಿಭಾಗ ಪತ್ರ ನೋಂದಾಯಿಸಿ ಆಸ್ತಿಗಳನ್ನು ಭಾಗ ಮಾಡಿಕೊಳ್ಳುತ್ತಾರೆ. ಸದರಿ ಡಿಕ್ರಿಗೆ ಒಳಪಟ್ಟ ಆಸ್ತಿ ಮಕ್ಕಳ ಹೆಸರಿಗೆ ವಿಭಾಗದ ಮೂಲಕ ಬಂದು, ಅದನ್ನು ಹರಾಜು ಹಾಕಲಾಗದು ಅದು ಅವ್ಯವಹಾರಿಕಾ ಸಾಲ ಎಂಬ ತಕರಾರು ಮಾಡಲಾಗುತ್ತದೆ, ಸಾಲವು ಅವ್ಯವಹಾರಿಕ ಅಲ್ಲದಿದ್ದರೂ ಸದರಿ ಕೇಸನ್ನು ಕೇವಲ ತಂದೆಯ ಮೇಲೆ ಹಾಕಿ ಡಿಕ್ರಿ ಪಡೆದರೆ ಸಾಲದು, ಮಕ್ಕಳು ಧಾರ್ಮಿಕ ಶ್ರದ್ದೆಯಂತೆ ಬಾದ್ಯರಾಗಲು ಮಕ್ಕಳ ಮೇಲೂ ಡಿಕ್ರಿ ಪಡೆಯ ಬೇಕು ಎಂದು ಪ್ರತಿಪಾದಿಸಲಾಗುತ್ತದೆ. ಸಾಲ ನೀಡಿದವರು ವಿಭಾಗಪತ್ರ ಒಂದು ಮೋಸದ ವ್ಯವಹಾರ ಎಂದು ಡಿಕ್ರಿ ಅಮೂಲ್ಜಾರಿಗೆ ಅವರು ಅರ್ಹರು ಎಂದು ಪ್ರತಿಪಾದಿಸಲಾಗಿರುತ್ತದೆ. ಮದ್ರಾಸ್ ಪೂರ್ಣ ಪೀಠದ

---

[1] ಆಕುಲ ಮಾದವ ವಿ. ರುಕ್ಮಿಣಿ – ಮನು/ಎ.ಪಿ. / 0625/ 1995

[2] ಕಲ್ವ ದೇವದತ್ತಮ್ ವಿ. ಯೂ. ಓ. ಐ. – ಮನು/ ಎಸ್.ಸಿ/0106/1963

ಕೇಸನ್ನು [1] ಉಲ್ಲೇಕಿಸಿ ಹೀಗೆ ವ್ಯಾಖ್ಯಾನಿಸಲಾಗಿದೆ, "ಹಿಂದೂ ಕಾನೂನಿನಡಿಯಲ್ಲಿ ಒಬ್ಬ ಮಗ ನಿಸ್ಸಂದೇಹವಾಗಿ ತಂದೆಯ ವಿಭಾಗದ ಪೂರ್ವದ ಸಾಲಗಳಿಗೆ ಅನೈತಿಕ ಅಥವಾ ಕಾನೂನುಬಾಹಿರವಲ್ಲದ್ದರಲ್ಲಿ. ಆದಾಗ್ಯೂ, ತಂದೆಯ ವಿರುದ್ಧ ಮಾತ್ರ ತೀರ್ಪು ಪಡೆದರೆ, ಮತ್ತು ಕುಟುಂಬದ ಆಸ್ತಿಗಳ ವಿಭಜನೆ ಇದ್ದರೆ, ಅಂತಹ ತೀರ್ಪನ್ನು ಕಾರ್ಯಗತಗೊಳಿಸುವಲ್ಲಿ, ವಿಭಜನೆಯ ಕಾರಣದಿಂದ ಮಗನ ಪಾಲನ್ನು ಸಾಲಗಾರರಿಂದ ವಶಪಡಿಸಿಕೊಳ್ಳಲಾಗುವುದಿಲ್ಲ. ತಂದೆಯ ಸಾಲಗಳನ್ನು ತೀರಿಸುವ ಮಗನ ಧರ್ಮನಿಷ್ಠ ಬಾಧ್ಯತೆಯಡಿಯಲ್ಲಿ ಮಗನ ಪಾಲನ್ನು ತಂದೆ ಹೊಂದಿದ್ದಾನೆನ್ನಲಾಗದು. ವಿಭಜನೆಯೊಂದಿಗೆ, ಶಕ್ತಿಯು ಕೊನೆಗೊಳ್ಳುತ್ತದೆ. ಅದರ ನಂತರದ ಹೊಣೆಗಾರಿಕೆಯನ್ನು ದಾವೆಯಲ್ಲಿ ಮಾತ್ರ ಜಾರಿಗೊಳಿಸಬಹುದು. ವಿಭಜನೆಯ ನಂತರ, ಮಗನ ಪಾಲನ್ನು ಇನ್ನು ಮುಂದೆ ಆಸ್ತಿಯೆಂದು ಪರಿಗಣಿಸಲಾಗುವುದಿಲ್ಲ, ಅದರ ಮೇಲೆ ತಂದೆಯು ವಿಲೇವಾರಿ ಶಕ್ತಿಯನ್ನು ಕಲಂ 60 ಸಿ.ಪಿ.ಸಿ ಯಲ್ಲಿ ಹೊಂದಿದ್ದರು ಎಂಬ ಅರ್ಥದಲ್ಲಿ ಪರಿಗಣಿಸಲಾಗದು. ಎಂದಿದ್ದರೂ ಸಹ ಸುಪ್ರೀಂ ಕೋರ್ಟಿನ ಇನ್ನೊಂದು ಪ್ರಕರಣದಲ್ಲಿ ಹೀಗೆಂದಿದೆ,[2] "ಅನೈತಿಕತೆ ಅಥವಾ ಅಕ್ರಮದ ಕಳಂಕವಿಲ್ಲದ ತನ್ನ ತಂದೆಯ ಸಾಲಗಳನ್ನು ತೀರಿಸುವ ಹಿಂದೂ ಮಗನ ಹೊಣೆಗಾರಿಕೆಯು ಮಗನ ಧಾರ್ಮಿಕ ಬಾಧ್ಯತೆಯಲ್ಲಿ ಸ್ಥಾಪಿತವಾಗಿದೆ, ಅದು ಜೀವಿತಾವಧಿಯಲ್ಲಿ ಮತ್ತು ತಂದೆಯ ಮರಣದ ನಂತರವೂ ಅಸ್ತಿತ್ವದಲ್ಲಿರುತ್ತದೆ ಮತ್ತು ಅದು ಜಂಟಿ ಕುಟುಂಬ ಆಸ್ತಿಯ ವಿಭಜನೆಯ ಪರಿಣಾಮವಾಗಿ ಅಂತ್ಯವಾಗುವುದಿಲ್ಲ: ವಿಭಜನೆಯಿಂದ ಉಂಟಾಗುವ ಎಲ್ಲಾ ಫಲಿತಾಂಶಗಳಲ್ಲಿ ಪರಭಾರೆ ಮಾಡುವ ತಂದೆಯ ಹಕ್ಕನ್ನು ಕೊನೆಗೊಳಿಸುತ್ತವೆ. ಆ ಕೇಸಿನಲ್ಲಿ ಕುಟುಂಬದ ಆಸ್ತಿಯನ್ನು

---

[1] ಮನು/ ಟಿ.ಎನ್. / 0372/1954 – ಎ.ಐ.ಆರ್ 1954 ಮದ್ರಾಸ್ 864

[2] ಮನು/ ಎಸ್.ಸಿ/0148/1958 – 1959 (1) ಎಸ್.ಸಿ.ಆರ್ 1384

ತಂದೆಯ ವಿರುದ್ಧದ ಹಣದ ವಸೂಲಾತಿ ಆದೇಶ ಅಮೂಲ್ಜಾರಿಯನ್ನು ಪುತ್ರರು ಈ ಆಸ್ತಿಯನ್ನು ತಮ್ಮ ಆಸಕ್ತಿಯ ಮೇಲೆ ಪರಿಣಾಮ ಬೀರುವಂತೆ ಮತ್ತು ತಮ್ಮ ಪಾಲನ್ನು ಸ್ವಾಧೀನಪಡಿಸಿಕೊಳ್ಳುವ ತೀರ್ಪಿನ ಮೇಲೆ ಮಾರಾಟವನ್ನು ಬದಿಗಿಡಲು ಮೊಕದ್ದಮೆ ಹೂಡಿದ್ದರು. ತಂದೆಯಿಂದ ಉಂಟಾದ ಹೊಣೆಗಾರಿಕೆ ಕಾನೂನುಬಾಹಿರ ಅಥವಾ ಅನೈತಿಕ ಎಂದು ಸಾಬೀತಾಗಿಲ್ಲ ಮತ್ತು ಸಾಲಗಳನ್ನು ತೃಪ್ತಿಪಡಿಸುವುದಕ್ಕಾಗಿ ಪುತ್ರರ ಪಾಲು ಸೇರಿದಂತೆ ಜಂಟಿ ಕುಟುಂಬ ಆಸ್ತಿಯನ್ನು ಮಾರಾಟ ಮಾಡುವುದು ಜಂಟಿ ಕುಟುಂಬ ಸ್ಥಾನಮಾನದ ಬೇರ್ಪಡಿಸುವಿಕೆಯ ಹೊರತಾಗಿಯೂ ಮಾನ್ಯವಾಗಿದೆ ಎಂದು ನ್ಯಾಯಾಲಯವು ಅಭಿಪ್ರಾಯಪಟ್ಟಿದೆ. ತನ್ನ ತಂದೆಯ ಸಾಲಗಳನ್ನು ಬಾದ್ಯವಾಗಿಸಲು ಹಿಂದೂ ಮಗನ ಧಾರ್ಮಿಕ ಬಾಧ್ಯತೆಯನ್ನು ಜಾರಿಗೆ ತರಲು ಸಾಲಗಾರನ ಪರಿಹಾರವೆಂದರೆ ಪ್ರತ್ಯೇಕ ಮೊಕದ್ದಮೆ ಹೂಡಬೇಕೆ ಎಂಬ ಪ್ರಶ್ನೆಗೆ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ಅಗತ್ಯವೆಂದು ನಾವು ಭಾವಿಸುವುದಿಲ್ಲ, ಅಲ್ಲಿ ತಂದೆಯ ವಿರುದ್ಧದ ತೀರ್ಪಿನಿಂದ ಒಂದು ಋಣಭಾರವು ಜಂಟಿ ಕುಟುಂಬ ಸ್ಥಾನಮಾನವನ್ನು ಬೇರ್ಪಡಿಸಿದೆ, ಅಥವಾ ಅಮೂಲ್ಜಾರಿ ಪ್ರಕ್ರಿಯೆಗೆ ಒಂದು ಪಾರ್ಟಿಯಾಗಿ ಮಗನನ್ನು ಅಳವಡಿಸಿಕೊಂಡ ನಂತರ, ಆಸ್ತಿಯ ಬಗ್ಗೆ ಮಗನ ಆಸಕ್ತಿಯ ವಿರುದ್ಧ ಆಜ್ಞೆಯನ್ನು ಕಾರ್ಯಗತಗೊಳಿಸಲು ಮುಂದುವರಿಯಬಹುದೇ, ಮುಂದುವರಿಯಬಹುದು ಎನ್ನುತ್ತದೆ ಸುಪ್ರೀಂ ಕೋರ್ಟ್, ಏಕೆಂದರೆ ..... ಆ ವಿಭಜನೆಯು ಒಂದು ಶಾಮ್ ವಹಿವಾಟು, ಅದು ಕಾರ್ಯರೂಪಕ್ಕೆ ಬರಲು ಉದ್ದೇಶಿಸಿರಲಿಲ್ಲ ಎಂದು ಹೇಳುವಲ್ಲಿ ಹೈಕೋರ್ಟ್ ತೀರ್ಪು ಸರಿಯಾಗಿದೆ.

ಬಾಡಿಗೆದಾರನು ತನ್ನ ಮಾಲೀಕರು ಮಾಡಿಕೊಂಡಿರುವ ದಾಖಲೆಗಳನ್ನು ಪ್ರಶ್ನಿಸಿ ಅದು ಶಾಮ್ ವಹಿವಾಟು ಎಂದು ಪ್ರಶ್ನಿಸಲು ಬರುವುದಿಲ್ಲ. ಆದರೆ ಎಲ್ಲಿ ಬಾಡಿಗೆ ನಿಯಂತ್ರಣದಂತಾ ಕಾನೂನು

ನಿಯಮಗಳನ್ನು ಸೋಲಿಸಲು ದಾಖಲೆ ನಿರ್ಮಾಣವಾಗಿದ್ದಾರೆ ಅದನ್ನು ಶಾಮ್ ಎಂದು ಪ್ರಶ್ನಿಸುವ ಹಕ್ಕು ಬಾಡಿಗೆದಾರನಿಗೆ ಇರುತ್ತದೆ.[1]

ಒಂದು ಪತ್ರ ಶಾಮ್ ವ್ಯವಹಾರದಿಂದ ಕೂಡಿದೆ ಎಂದು ತೀರ್ಪಾಗಿರುವಾಗ, ಅದರಲ್ಲಿ ವಂಶವೃಕ್ಷವನ್ನು ಬರೆಸಿರುವುದನ್ನು ಸರಿಯೇ ಎಂದು ಪರಿಗಣಿಸಲು ಬರುವುದಿಲ್ಲ.[2]

ವಾದಿ ಮಂಡಿಸಿದ ನೋಂದಾಯಿಸದ ದಾಖಲೆಯ ಕಾರ್ಯಗತವಾದುದ್ದನ್ನು ಪ್ರತಿವಾದಿಗಳು ನಿರಾಕರಿಸಿದಾಗ, ದಾಖಲೆ ನಕಲಿ ಅಥವಾ ಸೃಷ್ಟಿಸಲಾಗಿದೆ ಎಂದು ಪ್ರತಿವಾದಿಗಳು ಸ್ಥಾಪಿಸಬೇಕೆಂಬ ತೀರ್ಪು ಉತ್ತಮ ಪ್ರತಿಪಾದನೆಯಲ್ಲ ಎಂದು ಸುಪ್ರೀಂ ಕೋರ್ಟ್ ಅಭಿಪ್ರಾಯಪಟ್ಟಿದೆ. ಮೊದಲ ಮೇಲ್ಮನವಿ ನ್ಯಾಯಾಲಯವು ಆ ವಿಷಯವನ್ನು ಸಾಬೀತುಪಡಿಸಲು ಏನನ್ನಾದರೂ ಪ್ರತಿಪಾದಿಸುವ ಪಾರ್ಟಿಗೆ ಎಂಬ ಆಧಾರದ ಮೇಲೆ ಮುಂದುವರಿಯಿತು; ಮತ್ತು ಪ್ರತಿವಾದಿಗಳು ಒಪ್ಪಂದವನ್ನು ನಕಲಿ ಎಂದು ಆರೋಪಿಸಿದಂತೆ, ಅದನ್ನು ಸಾಬೀತುಪಡಿಸುವುದು ಅವರಿಗೆ. ಆದರೆ ಮೊದಲ ಮೇಲ್ಮನವಿ ನ್ಯಾಯಾಲಯವು ದಾಖಲೆಯನ್ನು ಪ್ರಸ್ತಾಪಿಸುವ ಪಕ್ಷವು ಅದನ್ನು ಸಾಬೀತುಪಡಿಸಬೇಕಾಗಿದೆ ಎಂಬ ಅಂಶವನ್ನು ಕಡೆಗಾಣಿಸಿತು. ಮೊದಲ ಪ್ರತಿವಾದಿಯು ತನ್ನ ಪರವಾಗಿ ಮಾರಾಟದ ಒಪ್ಪಂದವನ್ನು ಜಾರಿಗೊಳಿಸಿದ್ದಾನೆ ಎಂದು ಆರೋಪಿಸಿ ನ್ಯಾಯಾಲಯಕ್ಕೆ ಬಂದ ವಾದಿ. ಪ್ರತಿವಾದಿಯು ಅದನ್ನು ನಿರಾಕರಿಸಿದ ನಂತರ, ಪ್ರತಿವಾದಿಯು ಒಪ್ಪಂದವನ್ನು ಕಾರ್ಯಗತಗೊಳಿಸಿದ್ದಾನೆಂದು ಸಾಬೀತುಪಡಿಸಲು

---

[1] ಸತ್ತರ್ ವಿ. ಗುಂಡಪ್ಪ – ಮನು/ ಎಸ್.ಸಿ/ 0225/1997

[2] ಬಿಹಾರ್ ರಾಜ್ಯ ವಿ. ರಾಧಾ ಕೃಷ್ಣ – ಮನು/ ಎಸ್.ಸಿ/ 0303/1983

ಹೊರೆಯು ವಾದಿಯ ಮೇಲೆ ಇತ್ತು ಮತ್ತು ನಕಾರಾತ್ಮಕವಾಗಿ ಸಾಬೀತುಪಡಿಸಲು ಪ್ರತಿವಾದಿಯ ಮೇಲೆ ಅಲ್ಲ.[1]

ಒಂದು ಪಾರ್ಟಿಯು ಮೊಕದ್ದಮೆಯಲ್ಲಿ ವಂಚನೆ, ತಪ್ಪು ಪ್ರಾತಿನಿಧ್ಯ ಅಥವಾ ಅನಗತ್ಯ ಪ್ರಭಾವವನ್ನು ಆರೋಪಿಸಿದಾಗ, ಸಾಮಾನ್ಯವಾಗಿ, ಅಂತಹ ವಂಚನೆ, ಅನಗತ್ಯ ಪ್ರಭಾವ ಅಥವಾ ತಪ್ಪಾಗಿ ನಿರೂಪಿಸುವುದನ್ನು ಸಾಬೀತುಪಡಿಸುವ ಹೊರೆ ಅವನ ಮೇಲೆ ಇರುತ್ತದೆ. ಆದರೆ, ಒಬ್ಬ ವ್ಯಕ್ತಿಯು ಇನ್ನೊಬ್ಬರೊಂದಿಗೆ ವಿಶ್ವಾಸಾರ್ಹ ಸಂಬಂಧದಲ್ಲಿದ್ದಾಗ ಮತ್ತು ಆತನು ಸಕ್ರಿಯ ವಿಶ್ವಾಸದ ಸ್ಥಿತಿಯಲ್ಲಿದ್ದಾಗ ವಂಚನೆ, ಅನಗತ್ಯ ಪ್ರಭಾವ ಅಥವಾ ತಪ್ಪಾಗಿ ನಿರೂಪಿಸಿರುವ ಅನುಪಸ್ಥಿತಿಯನ್ನು ಸಾಬೀತುಪಡಿಸುವ ಹೊರೆ, ಪ್ರಾಬಲ್ಯದ ಸ್ಥಾನದಲ್ಲಿರುವ ವ್ಯಕ್ತಿಯ ಮೇಲೆ ಇರುತ್ತದೆ, ಅವನು ಅಲ್ಲಿ ಅದನ್ನು ಸಾಬೀತುಪಡಿಸಬೇಕು ವಹಿವಾಟಿನಲ್ಲಿ ನ್ಯಾಯಯುತವಾದ ಪ್ರಕ್ರಿಯೆ ಜರುಗಿತ್ತು ಮತ್ತು ಅದು ನಿಜವಾಗಿದೆ, ಬೇರೆ ರೀತಿಯಲ್ಲಿ ಹೇಳುವುದಾದರೆ, ವ್ಯವಹಾರವು ನಿಜವಾದ ಮತ್ತು ಉತ್ತಮವಾದ ನಂಬಿಕೆಯಾಗಿದೆ. ಅಂತಹ ಸಂದರ್ಭದಲ್ಲಿ ವಹಿವಾಟಿನ ಉತ್ತಮ ನಂಬಿಕೆಯನ್ನು ಸಾಬೀತುಪಡಿಸುವ ಹೊಣೆಯನ್ನು ಪ್ರಬಲ ಪಾರ್ಟಿಯ ಮೇಲೆ ಎಸೆಯಲಾಗುತ್ತದೆ, ಅಂದರೆ, ಸಕ್ರಿಯ ವಿಶ್ವಾಸದ ಸ್ಥಾನದಲ್ಲಿರುವ ವ್ಯಕ್ತಿ.[2]

ವಿಲ್ನ ಕಾರ್ಯಗತಕ್ಕೆ ಸಂಬಂಧಿಸಿದಂತೆ ಅನುಮಾನಾಸ್ಪದ ಸಂದರ್ಭಗಳು ಇದ್ದಾಗ, ನ್ಯಾಯಾಲಯದ ತೃಪ್ತಿಗೆ ಅವುಗಳನ್ನು ವಿವರಿಸಲು ಜವಾಬ್ದಾರಿಯು ಪ್ರಪೌಂಡರ್ (ಪ್ರತಿಪಾದಿಸುವವನ) ಮೇಲೆ ಇರುತ್ತದೆ ಮತ್ತು ಅಂತಹ ಜವಾಬ್ದಾರಿಯನ್ನು ಪೂರೈಸಿದಾಗ ಮಾತ್ರ, ನ್ಯಾಯಾಲಯವು ವಿಲ್ ಅನ್ನು ನಿಜವೆಂದು ಸ್ವೀಕರಿಸುತ್ತದೆ. ಅಂತಹ

---

[1] ತಿರುವೆಂಗದಂ ವಿ. ನವನೀತಮ್ಮಾಳ್ – ಮನು/ಎಸ್.ಸಿ/0942/2008

[2] ಕೃಷ್ಣ ಮೋಹನ್ ವಿ. ಪ್ರತಿಮಾ – ಮನು/ ಎಸ್.ಸಿ/ 0690/ 2003

ಯಾವುದೇ ಮನವಿಗಳಿಲ್ಲದಿದ್ದರೂ, ಸಂದರ್ಭಗಳು ಅನುಮಾನಕ್ಕೆ ಕಾರಣವಾಗಿದ್ದರೂ ಸಹ, ನ್ಯಾಯಾಲಯದ ಆತ್ಮಸಾಕ್ಷಿಯನ್ನು ಪೂರೈಸುವುದು ಪ್ರತಿಪಾದಕನ ಮೇಲಿದೆ. ಪರೀಕ್ಷಕನ (ಕಾರ್ಯಗತ ಮಾಡಿದವನ) ಸಹಿಯ ಪ್ರಾಮಾಣಿಕತೆ, ಪರೀಕ್ಷಕನ ಮನಸ್ಸಿನ ಪರಿಸ್ಥಿತಿಗಳು, ವಿಲ್ನಲ್ಲಿ ಮಾಡಿದ ಅಸ್ವಾಭಾವಿಕ ವಿಲೇಗಳು, ಅಸಂಭವ ಅಥವಾ ಅನ್ಯಾಯದಂತಹ ಹಲವಾರು ಕಾರಣಗಳಿಂದಾಗಿ ಅನುಮಾನಾಸ್ಪದ ಸಂದರ್ಭಗಳು ಉದ್ಭವಿಸುತ್ತವೆ ಅಥವಾ ವಿಲ್ನಲ್ಲಿ ತೋರಿಸಲು ಇತರ ಸೂಚನೆಗಳು, ಪರೀಕ್ಷಕನ ಮನಸ್ಸು ಮುಕ್ತವಾಗಿಲ್ಲ ಎಂಬ ಅಂತಹ ಸಂದರ್ಭಗಳು ಇರಬಹುದು. ದಾಖಲೆಯನ್ನು ಪರೀಕ್ಷಕನ ಕೊನೆಯ ವಿಲ್ ಎಂದು ಸ್ವೀಕರಿಸುವ ಮೊದಲು ಎಲ್ಲಾ ಕಾನೂನುಬದ್ಧ ಅನುಮಾನಗಳನ್ನು ಸಂಪೂರ್ಣವಾಗಿ ತೆಗೆದುಹಾಕಬೇಕು ಎಂದು ನ್ಯಾಯಾಲಯವು ಸ್ವಾಭಾವಿಕವಾಗಿ ನಿರೀಕ್ಷಿಸುತ್ತದೆ.[1]

ದಾಖಲೆ ಮತ್ತು ರುಜುವಾತು ವಿಚಾರದಲ್ಲಿ ಗುಜರಾತ್ ಹೈಕೋರ್ಟಿನ ನ್ಯಾಯಾಧೀಶರಾದ ಜೆ.ಬಿ. ಪರ್ದೀವಾಲ ರವರು ಪ್ರಕರಣವೊಂದರಲ್ಲಿ ಹಲವಾರು ಕಾನೂನು ಅಂಶಗಳನ್ನು ಉಲ್ಲೇಕಿಸಿ ಹೀಗೆ ವ್ಯಾಖ್ಯಾನಿಸಿರುತ್ತಾರೆ.[2] 30 ವರ್ಷಕ್ಕಿಂತ ಹಳೆಯದಾದ ದಾಖಲೆಯನ್ನು ಕೇವಲ ಪ್ರಮಾಣೀಕೃತ ನಕಲನ್ನು ಹಾಜರುಪಡಿಸುವಾಗ, ಸಾಕ್ಷ್ಯ ಕಾಯ್ದೆ ಸೆಕ್ಷನ್ 90 ರ ಅಡಿಯಲ್ಲಿ ಅದರ ನೈಜತೆ ಅಥವಾ ಕಾರ್ಯಗತ ಮಾಡಿರುವ ಬಗ್ಗೆ ಸಂಬಂಧಿಸಿದಂತೆ ಯಾವುದೇ ಊಹೆಯನ್ನು ಅನುಮತಿಸಲಾಗದು ಎಂಬುದು ನಿಜ. ಸೆಕ್ಷನ್ 90 ರಲ್ಲಿ ನಿರ್ದಿಷ್ಟ ಮೂಲ ಅಸಲು ದಾಖಲೆಯನ್ನು ನ್ಯಾಯಾಲಯದಲ್ಲಿ ಹಾಜರುಪಡಿಸುವುದು ಅಗತ್ಯವಿದೆ, ಆಗ ಮಾತ್ರ ಅದರ ಕಾರ್ಯಗತದ ಶಾಸನಬದ್ಧ ಊಹೆಯನ್ನು ಸೆಳೆಯಲು

---

[1] ಲಕ್ಷ್ಮಣನ್ ವಿ. ತೇಕ್ಕಾಯಿಲ್ – ಮನು/ ಎಸ್.ಸಿ/ 8352/ 2008

[2] ಅಕ್ಬರ್ ಬೈ ವಿ. ಮೋಹನ್ ಬೈ – ಮನು/ ಜಿ.ಜೆ / 1282/ 2019

ನ್ಯಾಯಾಲಯವನ್ನು ಕೇಳಲಾಗುತ್ತದೆ. ಈ ಬಗ್ಗೆ ಸುಪ್ರೀಂ ಕೋರ್ಟ್ ಪ್ರಕರಣವೊಂದರಲ್ಲಿ,[1] ದಾಖಲೆಯ ವಿಷಯಗಳನ್ನು ಸಾಬೀತುಪಡಿಸಲು ಪ್ರಮಾಣೀಕೃತ ನಕಲನ್ನು ಬಳಸಬಹುದಾದರೂ, ಅಸಲು ಮೂಲವನ್ನು ಹಾಜರುಪಡಿಸದೆ, ಪ್ರಮಾಣೀಕೃತ ನಕಲನ್ನು ಮಾತ್ರ ಹಾಜರುಪಡಿಸುವ ಸಂದರ್ಭದಲ್ಲಿ ಸಾಕ್ಷ್ಯ ಕಾಯ್ದೆಯ ಸೆಕ್ಷನ್ 90 ರ ಅಡಿಯಲ್ಲಿ ಯಾವುದೇ ಶಾಸನಬದ್ಧ ಊಹೆಯು ಲಭ್ಯವಿಲ್ಲ. .... ದಾಖಲೆಯಲ್ಲಿನ ವಿಷಯಗಳನ್ನು ಸಾಬೀತುಪಡಿಸಲು ದ್ವಿತೀಯಕ ಸಾಕ್ಷ್ಯಗಳಂತೆ (ಸೆಕೆಂಡರಿ ಎವಿಡೆನ್ಸ್) ಸಾಕ್ಷ್ಯದಲ್ಲಿ ಒಪ್ಪಿಗೆಯಾಗಲು ಪ್ರಮಾಣೀಕರಿಸಿದ ನಕಲು ಸಾಕು ಎಂದು ಗಂಭೀರವಾಗಿ ವಿವಾದಿಸಬಹುದು ಎಂದು ನಾನು ಭಾವಿಸುವುದಿಲ್ಲ, ಆದರೆ ಅದರ ಕಾರ್ಯಗತವನ್ನು ಸಾಬೀತುಪಡಿಸಲು ಸಾಕಾಗುವುದಿಲ್ಲ. ದಾಖಲೆಯಲ್ಲಿನ ಅಂಶಗಳನ್ನು ರುಜುವಾತು ಪಡಿಸಲು ಪ್ರಮಾಣೀಕರಿಸಿದ ದಾಖಲೆ ಅಂಗೀಕಾರವಲ್ಲ ಎಂದು ಹೇಳಲಾಗದು. ಸಾಕ್ಷ್ಯ ಕಾಯ್ದೆ ಕಲಂ 61 ರಲ್ಲಿ ಸಾಮಾನ್ಯ ನಿಯಮದಂತೆ ದಾಖಲೆಯ ಅಂಶಗಳನ್ನು ರುಜುವಾತು ಮಾಡಲು ಎರಡು ವಿಧ ಪ್ರಾಥಮಿಕ ಸಾಕ್ಷ್ಯ ಅಥವಾ ದ್ವಿತೀಯಕ ಸಾಕ್ಷ್ಯ. ...... "ಪ್ರಾಥಮಿಕ" ಮತ್ತು "ದ್ವಿತೀಯಕ ಸಾಕ್ಷ್ಯಗಳು" ಎಂಬ ಪದಗಳನ್ನು ಕಲಂ 62 ಮತ್ತು 63 ರಲ್ಲಿ ವಿವರಿಸಲಾಗಿದೆ. ಸೆಕ್ಷನ್ 64 ಸಾಕ್ಷ್ಯಾಧಾರಗಳ ಕಾಯ್ದೆಯಡಿ ದ್ವಿತೀಯಕ ಸಾಕ್ಷ್ಯವನ್ನು ಅನುಮತಿಸಿದ ಪ್ರಕರಣಗಳನ್ನು ಹೊರತುಪಡಿಸಿ ಪ್ರಾಥಮಿಕ ಸಾಕ್ಷ್ಯಗಳಿಂದ ದಾಖಲೆಗಳನ್ನು ಸಾಬೀತುಪಡಿಸಬೇಕು ಎಂದು ತಿಳಿಸುತ್ತದೆ. ಈ ಕಲಂ 'ಅತ್ಯುತ್ತಮ ಸಾಕ್ಷ್ಯವನ್ನು' ಯಾವಾಗಲೂ ಹಾಜರು ಪಡಿಸಬೇಕು ಎಂಬ ಗರಿಷ್ಠತೆಯ ಮೇಲೆ ನಿಂತಿದೆ. ಆದರೆ ಮೂಲವು ಕಳೆದುಹೋಗಿದೆ, ಅಥವಾ ಉದ್ದೇಶಪೂರ್ವಕವಾಗಿ ನಿಗ್ರಹಿಸಲ್ಪಟ್ಟಿದೆ ಅಥವಾ ವಾದಿಯ ನಿಯಂತ್ರಣ

---

[1] ಮನು/ ಎಸ್.ಸಿ/ 0092/ 1956 – ಎ.ಐ.ಆರ್ 1956 ಎಸ್.ಸಿ 305

ಮೀರಿದ ಕಾರಣಗಳಿಗಾಗಿ ಹಾಜರು ಪಡಿಸಲಾಗುವುದಿಲ್ಲ ಎಂದು ಸಾಬೀತಾದಾಗ, ದ್ವಿತೀಯಕ ಸಾಕ್ಷ್ಯಗಳು ಖಂಡಿತವಾಗಿಯೂ ನೋಡಬೇಕಾಗುತ್ತದೆ. .......

.......ಸೆಕ್ಷನ್ 65 ರ ಅಡಿಯಲ್ಲಿ, ಸೆಕ್ಷನ್ 74 ರ ಅರ್ಥದಲ್ಲಿ ಮೂಲ ಪತ್ರವು ಸಾರ್ವಜನಿಕ ದಾಖಲೆಯಾಗಿರುವಾಗ ದಾಖಲೆಯ ಅಸ್ತಿತ್ವ, ಸ್ಥಿತಿ ಅಥವಾ ಅದರಲ್ಲಿನ ವಿಷಯಗಳ ಬಗ್ಗೆ ದ್ವಿತೀಯಕ ಸಾಕ್ಷ್ಯವನ್ನು ನೀಡಬಹುದು. ಸೆಕ್ಷನ್ 74 ಸಾರ್ವಜನಿಕ ದಾಖಲೆಗಳು ಯಾವುವು ಎಂಬುದನ್ನು ವ್ಯಾಖ್ಯಾನಿಸುತ್ತದೆ. ಸೆಕ್ಷನ್ 74 ರ ಉಪವಿಭಾಗ (2) ಹೇಳುವಂತೆ ಯಾವುದೇ ರಾಜ್ಯದ ಖಾಸಗಿ ದಾಖಲೆಗಳಲ್ಲಿ ಇರಿಸಲಾಗಿರುವ ಸಾರ್ವಜನಿಕ ದಾಖಲೆಗಳು ಸಹ ಸಾರ್ವಜನಿಕ ದಾಖಲೆಗಳಾಗಿವೆ. ಆದ್ದರಿಂದ ಈ ವಿಭಾಗವು ಭಾರತೀಯ ನೋಂದಣಿ ಕಾಯ್ದೆಯಡಿ ಇರಿಸಲಾಗಿರುವ ಅಂತಹ ದಾಖಲೆಗಳನ್ನು ಉಲ್ಲೇಖಿಸುತ್ತದೆ, ವಿಶೇಷವಾಗಿ ಸೆಕ್ಷನ್ 51 ಮತ್ತು 57; ಸೆಕ್ಷನ್ 51 ಹಲವಾರು ನೋಂದಣಿ ಕಚೇರಿಗಳಲ್ಲಿ ಇಡಬೇಕಾದ ರಿಜಿಸ್ಟರ್–ಪುಸ್ತಕಗಳನ್ನು ಸೂಚಿಸುತ್ತದೆ. ಸೆಕ್ಷನ್ 57 ರ ಅಡಿಯಲ್ಲಿ ನೋಂದಾಯಿಸುವ ಅಧಿಕಾರಿಗಳು ಕೆಲವು ಪುಸ್ತಕಗಳು ಮತ್ತು ಸೂಚಿಕೆಗಳನ್ನು ಪರಿಶೀಲಿಸಲು ಮತ್ತು ನಮೂದುಗಳ ಪ್ರಮಾಣೀಕೃತ ಪ್ರತಿಗಳನ್ನು ನೀಡಲು ಕಾನೂನುಬದ್ಧ ಬಾಧ್ಯತೆಯಲ್ಲಿದ್ದಾರೆ. ಸೆಕ್ಷನ್ 57 ರ ಉಪಕಲಂ (5) ರ ಅಡಿಯಲ್ಲಿ ನೀಡಲಾದ ಎಲ್ಲಾ ಪ್ರತಿಗಳಿಗೆ ನೋಂದಣಿ ಅಧಿಕಾರಿ ಸಹಿ ಮಾಡಿ ಮೊಹರು ಹಾಕಬೇಕು. ಮೂಲ ದಾಖಲೆಯ ವಿಷಯಗಳನ್ನು ಸಾಬೀತುಪಡಿಸುವ ಉದ್ದೇಶಗಳಿಗಾಗಿ ಈ ಪ್ರಮಾಣೀಕೃತ ಪ್ರತಿಗಳನ್ನು ಒಪ್ಪಿಕೊಳ್ಳಬಹುದಾಗಿದೆ. .....

....... ಸಾಕ್ಷ್ಯ ಕಾಯ್ದೆ ಕಲಂ 77 ರ ಅಡಿಯಲ್ಲಿ ಸಾರ್ವಜನಿಕ ದಾಖಲೆಗಳ ವಿಷಯಗಳನ್ನು ಸಾಬೀತುಪಡಿಸಲು ಪ್ರಮಾಣೀಕೃತ ಪ್ರತಿಗಳು ಸಹ ಸ್ವೀಕಾರಾರ್ಹ. ಆದಾಗ್ಯೂ ನೋಂದಣಿ ಕಾಯ್ದೆಯ ಕಲಂ 57 ಮತ್ತು

ಸಾಕ್ಷ್ಯ ಕಾಯ್ದೆ ಕಲಂ 77 ರ ನಡುವೆ ಸ್ವಲ್ಪ ವ್ಯತ್ಯಾಸವಿದೆ. ಆದರೆ ನೋಂದಣಿ ಕಾಯ್ದೆಯ ಕಲಂ 57 ಪ್ರಮಾಣೀಕೃತ ಪ್ರತಿಗಳನ್ನು ಮೂಲ ದಾಖಲೆಗಳ ವಿಷಯಗಳನ್ನು ಸಾಬೀತುಪಡಿಸಲು ಒಪ್ಪುವಂತೆ ಮಾಡುತ್ತದೆ. ಸಾಕ್ಷ್ಯ ಕಾಯ್ದೆ ಕಲಂ 77 ಸಾರ್ವಜನಿಕ ದಾಖಲೆಗಳ ವಿಷಯಗಳನ್ನು ಸಾಬೀತುಪಡಿಸಲು ಪ್ರಮಾಣೀಕೃತ ಪ್ರತಿಗಳನ್ನು ಸ್ವೀಕಾರಾರ್ಹವಾಗಿಸುತ್ತದೆ. ........ ಆದ್ದರಿಂದ ಪ್ರಮಾಣೀಕೃತ ನಕಲನ್ನು ಅನುಮತಿಸುತ್ತದೆ ಮೂಲ ದಾಖಲೆಯ ವಿಷಯಗಳನ್ನು ಸಾಬೀತುಪಡಿಸುವ ಉದ್ದೇಶಗಳಿಗಾಗಿ ಬಳಸಲಾಗುತ್ತದೆ. ಅದೇ ರೀತಿ ನೋಂದಣಿ ಕಾಯ್ದೆಯ ಸೆಕ್ಷನ್ 60 (2) ರ ಅಡಿಯಲ್ಲಿ ಪದವನ್ನು ಒಳಗೊಂಡಿರುವ ಪ್ರಮಾಣಪತ್ರ. 'ನೋಂದಾಯಿತ' ಜೊತೆಗೆ ಡಾಕ್ಯುಮೆಂಟ್ ನಕಲಿಸಿದ ಪುಸ್ತಕದ ಸಂಖ್ಯೆ ಮತ್ತು ಪುಟದೊಂದಿಗೆ ನೋಂದಣಿ ಅಧಿಕಾರಿಯಿಂದ ಸಹಿ ಮತ್ತು ಮೊಹರು ಮತ್ತು ದಿನಾಂಕವನ್ನು ನೀಡಬೇಕು. ಈ ಕಾಯ್ದೆ ಒದಗಿಸಿದ ರೀತಿಯಲ್ಲಿ ದಾಖಲೆಯನ್ನು ಸರಿಯಾಗಿ ನೋಂದಾಯಿಸಲಾಗಿದೆ ಮತ್ತು ಅನುಮೋದನೆಯಲ್ಲಿ ಉಲ್ಲೇಖಿಸಲಾದ ಸಂಗತಿಗಳು ಕಲಂ 59 ರಲ್ಲಿ ಹೇಳಿದಂತೆ ನಡೆದಿದೆ ಎಂದು ಸಾಬೀತುಪಡಿಸುವ ಉದ್ದೇಶದಿಂದ ಸೆಕ್ಷನ್ 60 (2) ರ ಅಡಿಯಲ್ಲಿ ಈ ಪ್ರಮಾಣಪತ್ರವನ್ನು ಒಪ್ಪಿಕೊಳ್ಳಬಹುದಾಗಿದೆ. .......... ಆದುದರಿಂದ ಪ್ರಮಾಣೀಕೃತ ಪ್ರತಿಯು ಅದರಲ್ಲಿನ ಅಂಶಗಳ ಬಗ್ಗೆ ಮತ್ತು ಒಂದು ಹಂತದವರೆಗೆ ಅದರ ಕಾರ್ಯಗತ ಮಾಡಿದ ಬಗ್ಗೆ ಉತ್ತಮ ಸಾಕ್ಷಿ ದಾಖಲೆ ಆಗಿದೆ ಎಂದು ನಮ್ಮ ಆಭೀಪ್ರಾಯ. ಆದರೆ ಕಲಂ 67 ಸಾಕ್ಷ್ಯ ಕಾಯ್ದೆಯಲ್ಲಿ ಒಬ್ಬ ವ್ಯಕ್ತಿಯ ಸಹಿ ಆತನ ಕೈಬರಹದಿ ಎಂದು ರುಜುವಾತು ಪಡಿಸಬೇಕಿರುವುದರಿಂದ ನೋಂದಾವಣಿ ಅಧಿಕಾರಿ ಮುಂದೆ ಆದ ಸಹಿ ಸಾಕ್ಷಿಯೇ ಆಗದು ಎಂಬುದು ಅಲ್ಲ. ಆದರೆ ನೋಂದಾವಣಾಧಿಕಾರಿ ಮುಂದೆ ನೋಂದಾವಣಿ ಆಗಿದೆ ಎಂದ ಮಾತ್ರಕ್ಕೆ ಅದು ಕಾರ್ಯಗತವಾಗಿದೆ ಎಂದು ನಿರ್ಧರಿಸುವುದು ತಪ್ಪಾಗುವುದು

ಎಂದು ವಾದಿಸಬಹುದಾಗಿದೆ. ಆದರೆ ಬೇರೆ ಸಾಕ್ಷಿಯೊಂದಿಗೆ ನೋಂದಾಯಿತ ದಾಖಲೆಯೂ ಕಾರ್ಯಗತವಾಗಿರುವ ಬಗ್ಗೆ ಉತ್ತಮ ಸಾಕ್ಷಿ ಆಗುವುದರಲ್ಲಿ ಊಹೆಯಿರುತ್ತದೆ. .... ಕಲಂ 60 ರಲ್ಲಿ ನೀಡಲಾಗಿರುವ ನೋಂದಾವಣಾಧಿಕಾರಿಗಳ ಪ್ರಮಾಣಪತ್ರ ಕಾರ್ಯಗತಗೊಳಿಸಿದ ಬಗ್ಗೆ ಉತ್ತಮ ಸಾಕ್ಷಿಯಾಗಿದೆ. ಒಬ್ಬ ವ್ಯಕ್ತಿಯ ಬದಲಾಗಿ ಬೇರೆ ವೇಶಮರಿಸಿಕೊಂಡವನು ತಾನೇ ಅವನೆಂದು ನೋಂದಾಯಿಸಿರುವ ಸಾಧ್ಯತೆ ಇರುತ್ತದೆ. ಇಂತಹ ಆರೋಪ ಈ ಪ್ರಕರಣದಲ್ಲಿ ಮಾಡಲಾಗಿಲ್ಲ. ಸಾಕ್ಷಿಗಾಳಿಗೂ ಕೂಡ ಈ ಬಗ್ಗೆ ಕೇಳಲಾಗಿಲ್ಲ. ಈ ದಾಖಲೆ ಅಲ್ಲದೆ ಬೇರೆ ಸಾಕ್ಷಿ ಆಧಾರದಲ್ಲಿ ಕ್ರಯ ಪಾತ್ರದ ನೈಜತೆಯನ್ನು ಎತ್ತಿಹಿಡಿಯಲಾಗಿದೆ.[1]

ಪ್ರಕರಣವೊಂದರಲ್ಲಿ, ಮೋಸಗೊಳಿಸುವ ವಹಿವಾಟು ಅಥವಾ ಮೋಸದ ವ್ಯವಹಾರವೆಂದು ತೋರಿಸಲು, ವಹಿವಾಟನ್ನು ಪ್ರಶ್ನಿಸುವ ವ್ಯಕ್ತಿಯ ಮೇಲೆ ಪುರಾವೆಗಳ ಭಾರವಿದೆ ಎಂದು ಇತ್ಯರ್ಥಪಡಿಸಲಾಗಿದೆ. ಒಂದು ಪಾರ್ಟಿಯು ಯಾವುದೇ ವಹಿವಾಟಿಗೆ ಪ್ರವೇಶಿಸಲು ಉದ್ದೇಶಿಸಿಲ್ಲ ಎಂಬ ಸಂದರ್ಭವಲ್ಲ, ಏಕೆಂದರೆ ಈಗಿನ ಪ್ರಕರಣದಲ್ಲಿ ಭಾಗಿಯಾಗಿರುವ ಪಾರ್ಟಿಗಳು ಮೊದಲೇ ಎರಡು ವಹಿವಾಟುಗಳನ್ನು ಮಾಡಿಕೊಂಡಿದ್ದಾರೆ. ವಹಿವಾಟು ನಡೆದಿದೆ ಎಂಬ ವಿವಾದವೂ ಇಲ್ಲ. ವಹಿವಾಟಿನ ಸ್ವರೂಪ ಮಾತ್ರ ಸಮಸ್ಯೆಯಲ್ಲಿದೆ. ....... ಪಾರ್ಟಿಗಳು ಒಪ್ಪಂದಕ್ಕೆ ಒಳಪಟ್ಟರು, ಅದರ ಪರಿಣಾಮವಾಗಿ, ಪ್ರತಿವಾದಿಯ ವಶಕ್ಕೆ ನೀಡಲಾಯಿತು ಮತ್ತು ಆದ್ದರಿಂದ, ಅಂತಹ ಸಂದರ್ಭಗಳಲ್ಲಿ, ಮಾರಾಟ ಪತ್ರವನ್ನು ವಂಚನೆಯಿಂದ ರಚಿಸಲಾಗಿದೆಯೆಂದು ಸ್ಪಷ್ಟ, ಕಟುವಾದ ಮತ್ತು ಮನವರಿಕೆಯಾಗುವ ಸಾಕ್ಷ್ಯಗಳನ್ನು ಮುನ್ನಡೆಸಲು ವಾದಿ ಮೇಲೆ ಹೊರೆ ಇದೆ. ..... ನಿರ್ವಿವಾದವಾಗಿ, ಪ್ರಶ್ನೆಯಲ್ಲಿರುವ ಮಾರಾಟ ಪತ್ರವು

---

[1] ಇಲ್ಲಿವರೆಗೆ – ಅಕ್ಬರ್ ಬೈ ವಿ. ಮೋಹನ್ ಬೈ – ಮನು/ ಜಿ.ಜೆ / 1282/ 2019

ನೋಂದಾಯಿತವಾದದ್ದು ಮತ್ತು ಅದನ್ನು ಮಾನ್ಯವಾಗಿ ಕಾರ್ಯಗತಗೊಳಿಸಲಾಗಿದೆ ಎಂದು ಭಾವಿಸಲಾಗಿದೆ ಮತ್ತು ಪುರಾವೆಯ ಹೊಣೆಗಾರಿಕೆಯು ಮೇಲಿನ ಊಹೆಯನ್ನು ತೆರವು ಮಾಡಲು ಬಯಸುವವರ ಮೇಲೆ ಇರುತ್ತದೆ. ..... ವಂಚನೆಯ ಮನವಿಯನ್ನು ಸಾಬೀತುಪಡಿಸುವಲ್ಲಿ ವಾದಿ ಶೋಚನೀಯವಾಗಿ ವಿಫಲವಾಗಿದ್ದಾರೆ ಎಂದು ಸಹ ಗಮನಿಸಬಹುದು. ವಂಚನೆಯ ಮನವಿಯನ್ನು ನಿರ್ದಿಷ್ಟವಾಗಿ ಸಾಬೀತುಪಡಿಸಬೇಕು ಮತ್ತು ಕೇವಲ ಅನುಮಾನದ ಆಧಾರದ ಮೇಲೆ ಸಾಧ್ಯವಿಲ್ಲ ಎಂದು ಚೆನ್ನಾಗಿ ತೀರ್ಮಾನಿಸಲಾಗಿದೆ. ವಂಚನೆ ಎಂದು ಆರೋಪಿಸುವ ಪಕ್ಷವು ಸಮಂಜಸವಾದ ಸಾಕ್ಷ್ಯಗಳೊಂದಿಗೆ ಸಮಂಜಸವಾದ ಅನುಮಾನವನ್ನು ಮೀರಿ ಅದನ್ನು ಸ್ಥಾಪಿಸಬೇಕು ಹೊರತು ಅನುಮಾನವನ್ನು ಪುರಾವೆಯಾಗಿ ಸ್ವೀಕರಿಸಲಾಗುವುದಿಲ್ಲ. ಸಿವಿಲ್ ಅಥವಾ ಕ್ರಿಮಿನಲ್ ಮೊಕದ್ದಮೆಗಳಲ್ಲಿ ಮಾಡಿದ ಅಪರಾಧದ ಇತರ ಆರೋಪಗಳಂತೆ ವಂಚನೆ, ಸಮಂಜಸವಾದ ಅನುಮಾನವನ್ನು ಮೀರಿ ಸ್ಥಾಪಿಸಬೇಕು ಮತ್ತು ಆದ್ದರಿಂದ ಅನುಮಾನ ಮತ್ತು ಊಹೆಯ ಆಧಾರದ ಮೇಲೆ ಸಾಧ್ಯವಿಲ್ಲ.[1]

## ಅಧ್ಯಾಯ–13 (ಕಾಲಮಿತಿ)

## ಕಾಲ ಪರಿಮಿತಿ ಮತ್ತು ನಿಯಮಗಳು

(1). ಕಲಂ 3 ಪರಿಮಿತಿ ಕಾಯ್ದೆ 1963 ರ ಅಡಿಯಲ್ಲಿ ಯಾವುದೇ ದಾವೆ ಹಾಕಿರುವುದು, ಯಾವುದೇ ಅಪೀಲು ಮಾಡಿರುವುದು, ಅರ್ಜಿಯನ್ನು ಕೊಟ್ಟಿರುವುದು ನಿರ್ದಿಷ್ಟ ಪಡಿಸಿದ ಕಾಲಮಿತಿಯನ್ನು ಮೀರಿದ್ದಲ್ಲಿ ಅದನ್ನು

---

[1] ಸೋಹನ್ ಲಾಲ್ ವಿ. ಘನಶ್ಯಾಮ್ – ಮನು/ಹೆಚ್.ಪಿ./2036/2016

ಕಡ್ಡಾಯವಾಗಿ ವಜಾ ಮಾಡಬೇಕಿರುತ್ತದೆ. ಅಲ್ಲಿ ಕಾಲಮಿತಿ ವಿಚಾರಕ್ಕೆ ತಕರಾರು ಇರಲಿ ಬಿಡಲಿ ಅದರ ಬಗ್ಗೆ ಗಮನಹರಿಸುವುದು ಕೋರ್ಟಿನ ಆದ್ಯ ಕರ್ತವ್ಯವಾಗಿರುತ್ತದೆ.[1]

(2). 1963 ರ ಪರಿಮಿತಿ ಕಾಯ್ದೆ ವಿಧಿ 58 ರಲ್ಲಿ, ಘೋಷಣೆ ಪಡೆಯಲು ಮೂರು ವರ್ಷಗಳ ಮಿತಿಯನ್ನು ವಿಧಿಸಿರುತ್ತದೆ. ಸದರಿ ಕಾಲಮಿತಿ ಪ್ರಾರಂಬವಾಗುವುದು ಅಂತಹ ಹಕ್ಕಿಗಾಗಿ ಮೊದಲಿಗೆ ದೂರುವ ಹಕ್ಕು ಪ್ರಾರಂಬವಾದಾಗ. ವಿಧಿ 65 ರ ಅಡಿಯಲ್ಲಿ, ಸ್ಥಿರ ಆಸ್ತಿಯ ಸ್ವಾಧೀನಕ್ಕಾಗಿ ಅಥವಾ ಮಾಲೀಕತ್ವದ ಆಧಾರದ ಮೇಲೆ ಯಾವುದೇ ಆಸಕ್ತಿಯನ್ನು ಹೊಂದಿ ಸ್ವಾಧೀನವನ್ನು ಪಡೆಯುವ ದಾವೆಯನ್ನು ಸಲ್ಲಿಸಲು 12 ವರ್ಷ ಕಾಲಾವದಿ ಸೂಚಿಸಲಾಗಿದೆ. ಸದರಿ ಕಾಲಮಿತಿ ಪ್ರಾರಂಬವಾಗುವುದು ಪ್ರತಿವಾದಿಯ ಸ್ವಾಧೀನ ವಾದಿಗೆ ಪ್ರತಿಕೂಲವಾದ ದಿನಾಂಕದಿಂದ........ ಅನೂರ್ಜಿತ ದಾಖಲೆಗಳ ಅನುಸಾರವಾಗಿ ಸ್ವಾಧೀನ ಪಡೆದ ಮೇಲ್ಮನವಿದಾರನ ವಿಷಯದಲ್ಲಿ, ಮಿತಿ ಕಾಯಿದೆಯ ವಿಧಿ 65 ಅನ್ವಯಿಸುತ್ತದೆ ಮತ್ತು ದಾವೆಯನ್ನು ಸಲ್ಲಿಸುವ ಮಿತಿ 12 ವರ್ಷವಾಗಿರುತ್ತದೆ. ಈ ದಾಖಲೆಗಳು ಶೂನ್ಯ ಮತ್ತು ಅನೂರ್ಜಿತವಾದಾಗ, ಸ್ವತ್ತು ಸ್ವಾಧೀನಪಡಿಸಿಕೊಳ್ಳಲು ಒಂದು ದಾವೆಯನ್ನು ಸರಳವಾಗಿ ಸಲ್ಲಿಸಬಹುದು ಮತ್ತು ದಾವಾ ಪತ್ರದಲ್ಲಿ ಈ ದಾಖಲೆಗಳು ಅಸಮರ್ಪಕವೆಂದು ವಾದಿಸಬಹುದು. ಅಜುದ್ ರಾಜ್ ವಿ. ಮೋತಿ (1991) 3 ಎಸ್.ಸಿ.ಸಿ 1361 ರಲ್ಲಿ ಕೋರ್ಟ್ ಹೇಳಿರುವಂತೆ, ಆದೇಶವು ನ್ಯಾಯವ್ಯಾಪ್ತಿಯಿಲ್ಲದೆ ಜಾರಿಗೊಳಿಸಲ್ಪಟ್ಟಿದ್ದರೆ, ಅದನ್ನು ಕಾನೂನಿನ ದೃಷ್ಟಿಯಲ್ಲಿ ಅಸ್ತಿತ್ವದಲ್ಲಿಲ್ಲದ ಮತ್ತು ಶೂನ್ಯವೆಂದು ನಿರ್ಲಕ್ಷಿಸಬಹುದು ಅದನ್ನು ಅನೂರ್ಜಿತಗೊಳಿಸುವುದು ಅನಗತ್ಯ; ಮತ್ತು ಇಂತಹ

---

[1] ದೊಮ್ಮಗುಂಟ ವೆಂಕಟೇಶರೆಡ್ಡಿ ವಿ. ಗೌರಮ್ಮ – ಮನು/ ಕೆ.ಎ/ 0231/2019

ಮೊಕದ್ದಮೆಯನ್ನು ಮಿತಿ ಕಾಯಿದೆಯಡಿ 65 ನೇ ವಿಧಿಯಂತೆ ನಿರ್ವಹಿಸುತ್ತದೆ.[1]

(3). ಕಾಯ್ದೆಯೊಂದರಲ್ಲಿ ಅಧಿಕಾರವನ್ನು ಚಲಾಯಿಸಲು ಕಾಲಮಿತಿ ನಿಗದಿಪಡಿಸದೆ ಇರುವ ಸಂಧರ್ಬದಲ್ಲಿ, ಅಂತಹ ಕಾಯ್ದೆ ಅಧಿಕಾರವನ್ನು ಸಕಾರಣಬದ್ದವಾದ ಸಮಯದೊಳಗೆ ಚಲಾಯಿಸಬೇಕು. ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಯಾವಗ ಬೇಕಾದರೂ ಅರ್ಜಿ ಸಲ್ಲಿಸಬಹುದು ಎಂಬ ಹಲವಾರು ಕರ್ನಾಟಕ ಹೈಕೋರ್ಟ್ ಆದೇಶಗಳನ್ನು ರದ್ದುಮಾಡಲಾಗಿದೆ.[2] ಈ ಬಗ್ಗೆ ಸುಪ್ರೀಮ್ ಕೋರ್ಟಿನ ಇನ್ನೊಂದು ಪ್ರಕರಣದಲ್ಲಿ ಬಿಹಾರದ ರೈತರಿಗೆ ಜಮೀನು ವಾಪಸ್ ಕೊಡಿಸುವಿಕೆ ಕಾಯ್ದೆಯ ಅಡಿಯಲ್ಲಿ ಇಂತದ್ದೇ ಸಿದ್ದಾಂತವನ್ನು ಪ್ರತಿಪಾದಿಸಲಾಗಿದೆ.[3]

(4). ಮಹಾರಾಷ್ಟ್ರ ಭೂ ಕಂದಾಯ ಕೋಡ್ ಬಗ್ಗೆ ಇದ್ದ ವಿವಾದದಲ್ಲಿ ಪುನರ್ ಪರಿಶೀಲನಾ ಅಧಿಕಾರವನ್ನು 3 ವರ್ಷದ ಒಳಗೆ ಚಲಾಯಿಸಬಹುದಾಗಿರುತ್ತದೆ. 17 ವರ್ಷದ ನಂತರ ಚಲಾಯಿಸುವುದು ಸಕಾರಣಬದ್ದ ಕಾಲಮಿತಿಯಾಗುವುದಿಲ್ಲ ಎಂದು ಅಭಿಪ್ರಾಯಿಸಿದೆ.[4]

(5). ಸಕಾರಣಬದ್ದ ಕಾಲಮಿತಿಯ ಬಗ್ಗೆ ಅದು ವಿವಿದ ಕೇಸುಗಳ ವಾಸ್ತವಿಕತೆಯನ್ನು ಅವಲಂಬಿಸಿರುತ್ತೆ. ಇಂತಿಷ್ಟೆ ಕಾಲಮಿತಿ ಎಂದು ಎಲ್ಲದಕ್ಕೂ ಅನ್ವಯಿಸಲು ಬರುವುದಿಲ್ಲ. ಆಂದ್ರ ಪ್ರದೇಶದ ಹಂಚಿಕೆಯಾದ ಭೂಮಿ ವರ್ಗಾವಣೆ ನಿಷೇದ ಕಾಯ್ದೆ ಅಡಿಯಲ್ಲಿ ಸ್ವಯಂ ಅಧಿಕಾರಿಗಳು ಪುನರ್ ಪರಿಶೀಲನೆ ವಿಚಾರದಲ್ಲಿ 30 ವರ್ಷ ವಿಳಂಬವಾಗಿ ಅಧಿಕಾರ

---

[1] ಎ.ಐ.ಆರ್ 2000 ಎಸ್.ಸಿ 1099 – ಮಹಾರಾಷ್ಟ್ರ ರಾಜ್ಯ ವಿ. ಪ್ರವೀಣ್

[2] ನೆಖಂಟಿ ರಾಮ ಲಕ್ಷ್ಮಿ ವಿ. ಕರ್ನಾಟಕ ರಾಜ್ಯ – 2018(1) ಕರ್.ಎಲ್.ಜೆ 5 (ಎಸ್.ಸಿ)

[3] ಚೆಡ್ಡಿಲಾಲ್ ಯಾದವ್ ವಿ. ಹರಿಕಿಶೋರ್ ಯಾದವ್ – 2017 (6) ಎಸ್.ಸಿ.ಸಿ 459

[4] ಸಂತೋಷಕುಮಾರ್ ವಿ. ಬಾಳಸಾಹೇಬ್ – 2009 (9) ಎಸ್.ಸಿ.ಸಿ 352

ಚಲಾಯಿಸಿರುವುದಕ್ಕೆ ಆ ವಿಳಂಬತೆಯನ್ನು ಪುನರ್ ವೀಕ್ಷಿಸಲು ಹೈಕೋರ್ಟ್ಗೆ ರಿಮ್ಯಾಂಡ್ ಮಾಡಿರುತ್ತೆ.[1]

(6). ಗ್ರಾಹಕರ ವ್ಯಾಜ್ಯದಲ್ಲಿನ ಅನ್ವಯಿತ ಕಾಯ್ದೆಯಲ್ಲಿ ಕಾಲಮಿತಿ ನಿಗದಿ ಮಾಡಲಾಗಿಲ್ಲ. ಈ ಬಗ್ಗೆ 10 ವರ್ಷದ ನಂತರ ಕ್ಲೇಮನ್ನು ಮಾಡಲಾಗಿರುತ್ತದೆ. ಶಾಸಕಾಂಗದ ಬುದ್ಧಿವಂತಿಕೆಯಂತೆ ಹಣ ವಸೂಲಿಗೆ ಮೂರು ವರ್ಷ ಕಾಲಮಿತಿ ನೀಡಿರುವುದರಿಂದ ಇಂತಹ ಪ್ರಕರಣದಲ್ಲೂ ಮೂರು ವರ್ಷ ಸಕಾರಣಬದ್ದ ಕಾಲಮಿತಿ ಎಂದು ನಿರ್ದರಿಸಬಹುದಾಗಿರುತ್ತದೆ.[2]

(7). ಆದೇಶಗಳು ಮೋಸದಿಂದ ನಡೆದಿವೆ ಎಂದ ಮಾತ್ರಕ್ಕೆ ಅದನ್ನು ಸರಿಪಡಿಸುವುದಕ್ಕೆ ಕಾಲಮಿತಿಯನ್ನು ಅನಂತವಾಗಿ ವಿಸ್ತರಿಸಲು ಬರುವುದಿಲ್ಲ. ಅಂತಹ ಪುನರ್ ಪರಿಶೀಲನಾ ಅಧಿಕಾರವನ್ನು ಸಕಾರಣಬದ್ದ ಕಾಲಮಿತಿಯಲ್ಲಿ ಚಲಾಯಿಸಬೇಕು.[3]

(18). ಮಹಾರಾಷ್ಟ್ರ ವ್ಯವಸಾಯ ಭೂಮಿ ಹಿಡುವಳಿಯ ಮಿತಿಯನ್ನು ನಿಯಮಿಸುವ ಕಾಯ್ದೆಕೆಳಗೆ ಭೂಮಿ ಮುಟ್ಟುಗೋಲು ವಿಚಾರದಲ್ಲಿ ಅಧಿಕಾರಿಗಳ ಗಮನಕ್ಕೆ ಬಾರದಂತೆ ವಾಸ್ತವಿಕ ಅಘೋಷಿತ ವ್ಯವಸಾಯ ಭೂಮಿ ಮುಚ್ಚಿಟ್ಟಿದ್ದರೆ ಅಂತಹ ವಂಚನೆ ಅಥವ ಮುಚ್ಚಿರುವಿಕೆಯ ವಿಚಾರದ ಶೋಧನೆಯಾದಾಗಿನ ತಾರೀಕಿನಿಂದ ಕಾಲಮಿತಿ ಪ್ರಾರಂಬವಾಗುತ್ತದೆ. ಅಲ್ಲಿಂದ ಮೂರು ವರ್ಷದಲ್ಲಿ ಅಧಿಕಾರ ಚಲಾಯಿಸಬಹುದು.[4]

---

[1] ಕಲೆಕ್ಟರ್ ವಿ. ಮಂಗಮ್ಮ – 2003 (4) ಎಸ್.ಸಿ.ಸಿ 488

[2] ಕಾರ್ಪೊರೇಷನ್ ಬ್ಯಾಂಕ್ ವಿ. ನವಿನ್ – 2000 (2) ಎಸ್.ಸಿ.ಸಿ 628

[3] ಜಂಟಿ ಕಲೆಕ್ಟರ್ ವಿ. ನರಸಿಂಗರಾವ್ – 2015 (3) ಎಸ್.ಸಿ.ಸಿ 695

[4] ಮಹಾರಾಷ್ಟ್ರ ರಾಜ್ಯ ವಿ. ರತನ್ ಲಾಲ್ – 1993 (3) ಎಸ್.ಸಿ.ಸಿ 326

(19). ಕಂದಾಯ ಪ್ರಾಧಿಕಾರ ಭೂ ಪಟ್ಟಾ ಮಂಜೂರಾತಿಯಾದ 27 ವರ್ಷದ ನಂತರ ಪುನರ್ ಪರಿಶೀಲನಾ ಅಧಿಕಾರ ಚಲಾಯಿಸಿರುತ್ತದೆ. ಭೂ ಮಂಜೂರಾತಿಯ ವಿಶ್ವಾಸಾರ್ಹತೆ ಮತ್ತು ಸರಿಯಾಗಿರುವಿಕೆ ಅನುಮಾನಾಸ್ಪದ ವೈಶಿಷ್ಟ್ಯಗಳೊಂದಿಗೆ ಮುಚ್ಚಿಹೋಗಿತ್ತು, ಆದ್ದರಿಂದ, ಪರಿಷ್ಕೃತ ಅಧಿಕಾರ ಚಲಾಯಿಸುವಿಕೆ ಕಾನೂನು ಬದ್ದ ಮತ್ತು ಮಾನ್ಯವಾಗಿತ್ತು.[1]

(20). ಬಾಂಬೆ ಭೂ ಕಂದಾಯ ಕೋಡ್ನಲ್ಲಿ ಭೂ ಪರಿವರ್ತನಾ ಆದೇಶವನ್ನು ಪುನರ್ ಪರಿಶೀಲಿಸಲು ಕಾಲಮಿತಿ ನೀಡಲಾಗಿಲ್ಲ. ಅಂತಹ ಸಂಧರ್ಬದಲ್ಲಿ ಒಂದು ವರ್ಷದ ನಂತರ ಪುನರ್ ಪರಿಶೀಲಿಸಲಾಗಿರುವುದು ತುಂಬಾ ವಿಳಂಬವೆಂದು ಸುಪ್ರೀಮ್ ಕೋರ್ಟ್ ಅಭಿಪ್ರಾಯ ಪಟ್ಟಿದೆ.[2]

(21). ಗುಜರಾತಿನ ವ್ಯವಸಾಯಗಾರನಲ್ಲದವರು ವ್ಯವಸಾಯ ಜಮೀನು ಖರೀದಿಸಿರುವ ಬಗ್ಗೆ ಕಂದಾಯ ಅಧಿಕಾರಿಯು ಸದರಿ ಕ್ರಯವನ್ನು ಅನೂರ್ಜಿತ ಗೊಳಿಸಲು ಖಾತೆಯಾದ 9 ತಿಂಗಳ ನಂತರ ಕಾನೂನು ರೀತ್ಯ ಕ್ರಮ ಜರುಗಿಸಿರುವುದು ಸಕಾರಣಬದ್ದ ಕಾಲಮಿತಿಯಲ್ಲಿ ಜರುಗಿಸಲಾಗಿಲ್ಲ ಎನ್ನುತ್ತದೆ ಸುಪ್ರೀಮ್ ಕೋರ್ಟ್.[3]

(22). ಮಹಾರಾಷ್ಟ್ರ ಭೂ ಕಂದಾಯ ಕೋಡ್ನಲ್ಲಿ ಪುನರ್ ಪರಿಶೀಲಿಸಲು ಮೂರು ವರ್ಷ ಕಾಲಮಿತಿ ಇದೆ. ಆದರೆ 17 ವರ್ಷದ ನಂತರ ಅಂತಹ ಅಧಿಕಾರ ಚಲಾವಣೆ ಕಾನೂನು ರೀತ್ಯ ಸರಿಯಲ್ಲ.[4]

---

[1] ಒರಿಸ್ಸಾ ರಾಜ್ಯ ವಿ. ಬೃಂದಬಾನ್ ಶರ್ಮ – 1995 (3) ಎಸ್.ಸಿ.ಸಿ 249 (ಸಪ್ಲಿಮೆಂಟ್)

[2] ಗುಜರಾತ್ ರಾಜ್ಯ ವಿ. ಪಾಟೀಲ್ ರಾಘವನಾಥ – 1969 (2) ಎಸ್.ಸಿ.ಸಿ 187

[3] ಮೊಹಮದ್ ಕವಿ ವಿ. ಫಾತ್ಮಾಬಾಯ್ – 1997 (6) ಎಸ್.ಸಿ.ಸಿ 71

[4] ಸಂತೋಷ್ ಕುಮಾರ್ ವಿ. ಬಾಳಸಾಹೇಬ್ – 2009 (9) ಎಸ್.ಸಿ.ಸಿ 352

(23). ಪಂಜಾಬ್ ಮಾರಾಟ ತೆರಿಗೆ ಕಾಯ್ದೆಯಲ್ಲಿ ಪುನರ್ ಪರಿಶೀಲನೆಯ ಬಗ್ಗೆ ಕಾಲಮಿತಿ ನಿಗದಿಯಾಗಿಲ್ಲ. ಆ ಅಧಿಕಾರವನ್ನು ಯಾವಾಗ ಬೇಕಾದರೂ ಚಲಾಯಿಸಲು ಬರುವುದಿಲ್ಲ. ಸಕಾರಣಬದ್ದ ಕಾಲಮಿತಿಯಲ್ಲಿ ಅಂತಹ ಅಧಿಕಾರ ಚಲಾಯಿಸಬೇಕಿರುತ್ತದೆ. ಅಂತಹ ಸಕಾರಣಬದ್ದ ಕಾಲಮಿತಿ ನಿರ್ಣಯವನ್ನು ಕಾಯ್ದೆಯ ಸ್ವಭಾವ, ಹಕ್ಕುಗಳ ಸ್ವಭಾವ ಮತ್ತು ಹೊಣೆಗಾರಿಕೆಗಳ ಸ್ವಭಾವ ಮತ್ತು ಇತರೆ ಅಲ್ಲಿನ ಸಂಬಂದಿತ ಅಂಶಗಳ ಮೇಲೆ ನಿರ್ಣಯಿಸಬೇಕಿರುತ್ತದೆ. ಸದರಿ ಕಾಯ್ದೆಯ ಬಗ್ಗೆ ಅವಲೋಕಿಸಿದಾಗ ಪುನರ್ ಪರಿಶೀಲಿಸುವ ಅಧಿಕಾರ ನಮ್ಮ ಅಭಿಪ್ರಾಯದಂತೆ 3 ವರ್ಷದಲ್ಲಿ ಚಲಾಯಿಸಬೇಕಿರುತ್ತದೆ. ಯಾವುದೇ ಕಾರಣಕ್ಕೂ ಅದು 5 ವರ್ಷಕ್ಕೆ ಮೀರಿದಂತೆ ಚಲಾಯಿಸಬಾರದು – ಸುಪ್ರೀಮ್ ಕೋರ್ಟ್.[1]

(24). ನಿಯಮವನ್ನು ಜಾರಿ ಮಾಡಲು ಕಾಲಮಿತಿಯನ್ನು ನಿಗದಿ ಮಾಡಲಾಗಿಲ್ಲ ಆದುದರಿಂದ ನಿಯಮವು ಸಕಾರಣಬದ್ದವಾಗಿಲ್ಲದೆ ಸಂವಿಧಾನದ ವಿಧಿ 14 ಉಲ್ಲಂಘಿಸುತ್ತದೆ ಎಂದು ಕೋರಿ ಸಲ್ಲಿಸಿದ್ದ ಮನವಿ ತಿರಸ್ಕರಿಸಿದ ಸುಪ್ರೀಮ್ ಕೋರ್ಟ್ ಅಂತಹ ಸಂಧರ್ಬಗಳಲ್ಲಿ ಸಕಾರಣಬದ್ದ ಕಾಲಾವದಿಯನ್ನು ನಿಯಮದೊಂದಿಗೆ ಓದಿಕೊಳ್ಳಬೇಕು ಎಂದು ಆದೇಶಿಸಿದೆ.[2]

(25) ಸಕಾರಣಬದ್ದ ಕಾಲಮಿತಿಯು ಕೇಸಿನ ವಾಸ್ತವಿಕತೆ ಮತ್ತು ಸಂಧರ್ಬಗಳ ಮೇಲೆ ನಿರ್ದಾರಿತವಾಗುತ್ತದೆ. ಆಗಿರುವ ತಪ್ಪಿನ ಸ್ವಭಾವ,

---

[1] ಪಂಜಾಬ್ ರಾಜ್ಯ ವಿ. ಭಟಿಂಡ ಜಿಲ್ಲಾ ಕೋ–ಆಪರೇಟೀವ್ – 2007 (11) ಎಸ್.ಸಿ.ಸಿ 363

[2] ಭಾರತ ಸರ್ಕಾರ ವಿ. ಸಿಟೆಡಲ್ ಫೈನ್.. – ಎ.ಐ.ಆರ್ 1989 ಎಸ್.ಸಿ 1771

ಕಾಯ್ದೆಯ ಸ್ವಭಾವ, ಯಾವ ರೀತಿ ಅನ್ಯಾಯವಾಗಿದೆ, ಮೂರನೇ ವ್ಯಕ್ತಿಯ ಹಕ್ಕುಗಳು ಉದ್ಭವಿಸಿರುವುದೇ ಇತ್ಯಾದಿಗಳ ಮೇಲೆ ಅವಲಂಬಿತವಾಗುತ್ತದೆ.[1]

(26). ಕಾಲಮಿತಿ ನಿರ್ಣಯಿಸಲು ವ್ಯಾಜ್ಯ ಕಾರಣ ಪ್ರಾರಂಬ ಒಂದು ಮಹತ್ವದ ವಿಷಯವಾಗಿರುತ್ತದೆ. ಇದು ವಿವಿದ ಸಂಧರ್ಬಗಳಲ್ಲಿ ವಿವಿದ ಅರ್ಥವನ್ನು ಹೊಂದಿದೆ ಎನ್ನುತ್ತದೆ ಸುಪ್ರೀಮ್ ಕೋರ್ಟ್. ಇದು ವಾಸ್ತವಿಕತೆಯ ಸಂಧರ್ಬಗಳ ಒಂದು ಗಂಟಾಗಿದೆ. ಹಲವಾರು ಹಂತದಲ್ಲಿ ವ್ಯಾಜ್ಯ ಕಾರಣ ಪ್ರಾರಂಬವಾಗುತ್ತದೆ.[2]

(27). ವಂಚನೆ ವಿಚಾರದಲ್ಲಿ ವಂಚನೆ ಕಂಡುಹಿಡಿದಾಗ ಅಧಿಕಾರಿಗಳು ಸಕಾರಣಬದ್ದ ಕಾಲಾವದಿಯಲ್ಲಿ ಪುನರ್ ಪರಿಶೀಲನಾ ಅಧಿಕಾರದಲ್ಲಿ ಕ್ರಮ ಕೈಗೊಳ್ಳಬೇಕಿರುತ್ತದೆ. ಅಂತಹ ಅಧಿಕಾರ ಚಲಾಯಿಸುವಾಗ ಮೂರನೇ ಪಾರ್ಟಿಗಳಿಗೆ ಸ್ಥಿರ ಸ್ವತ್ತುಗಳಲ್ಲಿ ಕಾಲಾ ನಂತರ ಉಂಟಾಗಿರುವ ಹಕ್ಕುಗಳು, ನಂಬಿಕೆ ಅರ್ಹ ವರ್ಗಾವಣೆಗಳಿಂದ ಆಸ್ತಿ ಕೈಬದಲಾಗಿದ್ದಲ್ಲಿ, ಇತರೆ ಕಾಯ್ದೆಗಳ ನಿಯಮಗಳಲ್ಲಿ ಆದೇಶಗಳು ಅಂತಿಮತೆಯನ್ನು ಹೊಂದಿದ್ದರೆ ಇವುಗಳನ್ನು ಗಮನದಲ್ಲಿಡಬೇಕಿರುತ್ತದೆ.[3]

(28). ಆದೇಶಗಳನ್ನು ಮತ್ತು ಕಾರ್ಯಕಲಾಪಗಳನ್ನು ಪರಿಷ್ಕರಿಸುವ ಅಧಿಕಾರವನ್ನು ನಿರಂಕುಶವಾಗಿ ಮತ್ತು ಮುಗಿಸಲಾಗದಂತೆ ಕಾರ್ಯ ನಿರ್ವಹಿಸಲು ಸಾಧ್ಯವಿಲ್ಲ ಎಂಬ ಕಾನೂನು ಸ್ಥಿತಿಯನ್ನು ಪುನರ್ ಉಚ್ಚರಿಸುತ್ತ ಕೇಸೊಂದರಲ್ಲಿ ಮಾನ್ಯ ಸುಪ್ರೀಮ್ ಕೋರ್ಟ್ ಹೀಗೆ ಪರಿವೀಕ್ಷಿಸಿದೆ, ಅರ್ಬನ್ ಲ್ಯಾಂಡ್ ಸೀಲಿಂಗ್ ಕಾಯ್ದೆಯಲ್ಲಿ ಆಗಿರುವ ಆದೇಶವನ್ನು ಸರ್ಕಾರ ಪುನರ್ ಪರಿಶೀಲಿಸುವ ನಿಯಮದಲ್ಲಿ ಕಾಲಮಿತಿ ನೀಡಲಾಗಿಲ್ಲ. ಅದರಲ್ಲಿ "ಅಟ್ ಎನಿ ಟೈಮ್" (ಯಾವ

---

[1] ಎಸ್.ಸಿ.ಬಿ.ಐ ವಿ. ಭಾವೇಶ್ ಪಬಾರಿ – 2019 ಎಸ್.ಸಿ.ಸಿ ಅನ್ಲೈನ್ 294 ಎಸ್.ಸಿ

[2] ಟ್ರಾನ್ಸ್ಪೋರ್ಟ್ ಕಾರ್ಪೊರೇಷನ್ ವಿ. ವೆಲ್ಜಾನ್ – 2007 (3) ಎಸ್.ಸಿ.ಸಿ 142

[3] ಇಬ್ರಾಹಿಂತಾಲ್ಲೂಕ್.. ವಿ. ಸುರೇಶ್ ರೆಡ್ಡಿ – 2003 (7) ಎಸ್.ಸಿ.ಸಿ 667

ಸಮಯದಲ್ಲಾದರೂ) ಎಂದು ಕೂಡ ಶಾಸಕಾಂಗ ಅದರ ವಿವೇಚನೆಯಲ್ಲಿ ನಮೂದಿಸಿಲ್ಲ. ಯಾವುದೇ ಸಮಯದಲ್ಲಿ ಅಂತಹ ಅಧಿಕಾರ ಚಲಾಯಿಸಿದರೆ ಮಾಲೀಕತ್ವವನ್ನು ಹೊಂದಿದವನು ಶಾಶ್ವತವಾಗಿ ಅನಿಶ್ಚಿತ ಅಪಾಯಕೀಡಾಗಿ ಮತ್ತು ನಿರಂತರ ಅನಿಶ್ಚತತೆಯ ಸ್ಥಿಯಲ್ಲಿ ಇರುತ್ತಾನೆ. ನ್ಯಾಯಾಲಯವು ಕಾಯ್ದೆಯ ನಿಯಮವನ್ನು ಕಾಯ್ದೆ ಜಾರಿಯಾದ ಉದ್ದೇಶವನ್ನು ಮುಂದುವರಿಸಲು ಮತ್ತು ಕಾರ್ಯಗತವಾಗುವಂತೆ ಅರ್ಥೈಸಬೇಕು.[1]

(29). ಬಿಹಾರದಲ್ಲಿ ನಮ್ಮಲ್ಲಿನ ಎಸ್.ಸಿ ಎಸ್.ಟಿ ಪಿ.ಟಿ.ಸಿ.ಎಲ್ ಕಾಯ್ದೆ ರೀತಿಯಲ್ಲಿ ಕಾಯ್ದೆಯೊಂದಿದೆ ಅದರ ಅನುಸಾರ ಜಿಲ್ಲಾಧಿಕಾರಿಗೆ "ಯಾವುದೇ ಸಮಯದಲ್ಲಿ" ಎಸ್.ಟಿ ಸಮುದಾಯಕ್ಕೆ ಸೇರಿದ ಜಮೀನು ಜಿಲ್ಲಾಧಿಕಾರಿಗಳ ಅನುಮತಿಯಿಲ್ಲದೆ ಪರಭಾರೆ ಮಾಡಿದ್ದರೆ ಅದನ್ನು ಮರು ಸ್ವಾಧೀನವನ್ನು ಕೊಡಿಸಬಹುದಾಗಿರುತ್ತದೆ. ಇಲ್ಲಿ ಸರ್ಕಾರಿ ಗ್ರಾಂಟ್ ಜಮೀನು ಎಂದು ಹೇಳಲಾಗಿಲ್ಲ. ಕರ್ನಾಟಕದಲ್ಲಿ ಸರ್ಕಾರಿ ಗ್ರಾಂಟ್ ಜಮೀನಿಗೆ ಮಾತ್ರ ಅಂತಹ ನಿರ್ಬಂದ ಇದೆ. ಬಿಹಾರಕ್ಕೆ ಅನ್ವಯವಾಗುವಂತೆ ಕಾಲಮಿತಿ ಕಾಯ್ದೆ ತಿದ್ದುಪಡಿ ಮಾಡಿ ಅಂತಹ ಪರಬಾರೆಯಾದ ಜಮೀನು ವಾಪಸ್ ಪಡೆಯಲು ದಾವ ಹಾಕುವುದಕ್ಕೆ 30 ವರ್ಷ ಕಾಲಾವದಿ ನಿಗದಿ ಮಾಡಲಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಸುಪ್ರೀಮ್ ಕೋರ್ಟ್ ಮುಂದೆ ಕೆಳ ಹಂತದ ನ್ಯಾಯಾಲಯಗಳಲ್ಲಿ ಮುಟ್ಟಿ ಗೋಲು ಹಾಕಲ್ಪಟ್ಟ ಕೇಸೊಂದು ಖರೀದಿದಾರನು ಅಪೀಲು ಸಲ್ಲಿಸುತ್ತಾನೆ. ಆ ಕೇಸಿನಲ್ಲಿ 1938 ರಲ್ಲಿ ಪರಭಾರೆ ಕ್ರಯದ ಮೂಲಕ ಆಗಿರುತ್ತದೆ, 1978 ರಲ್ಲಿ ವಾಪಸ್ ಪಡೆಯುವುದಕ್ಕೆ ಅರ್ಜಿ ಸಲ್ಲಿಸಲಾಗಿರುತ್ತದೆ. ಇಂತಹ ಸಂಧರ್ಬ ಮತ್ತು ಕಾನೂನು ಪರಿವೀಕ್ಷಿಸಿ ಮಾನ್ಯ ನ್ಯಾಯಾಲಯ ಅಂತಹ ಕಾನೂನಿನಲ್ಲಿ ಅಧಿಕಾರ ಯಾವ ಕಾಲದಲ್ಲಾದರೂ ಚಲಾಯಿಸಬಹುದು

---

[1] ಸುಲೋಚನಾ ವಿ. ಪುಣೆ ಮುನಿಸಿಪಲ್ – 2010 (8) ಎಸ್.ಸಿ.ಸಿ 467

ಎಂದು ಇದ್ದರೂ ಕೂಡ ಅದು ಸಕಾರಣಬದ್ದ ಕಾಲಾವದಿಯಲ್ಲಿ ಚಲಾಯಿಸಬೇಕು 40 ವರ್ಷ ವಿಳಂಬ ಒಪ್ಪತಕ್ಕದ್ದಲ್ಲ ಎಂದಿದೆ.[1]

(30). ಸುಪ್ರೀಮ್ ಕೋರ್ಟ್ ಮುಂದೆ ಬಂದ ಪಿ.ಟಿ.ಸಿ.ಎಲ್ ಪ್ರಕರಣದಲ್ಲಿ – 1980 ರಲ್ಲಿ ಗ್ರಾಂಟ್ ಆದ ಜಮೀನು – 1996 ರಲ್ಲಿ ಮೊದಲ ಪರಭಾರೆ – ಸರ್ಕಾರಿ ಅನುಮತಿ ಪಡೆಯಲಾಗಿಲ್ಲ – 2005 ರಲ್ಲಿ ಪರಭಾರೆ ಪ್ರಶ್ನಿಸಿ ಅರ್ಜಿ ಬೀಳುತ್ತದೆ – ಕೆಳಹಂತದ ಎಲ್ಲಾ ನ್ಯಾಯಾಲಯದಲ್ಲಿ ಖರೀದಿದಾರ ಸೋತು ಅಪೀಲು ಸಲ್ಲಿಸಿದ್ದಾನೆ – ಲ್ಯಾಂಡ್ ಗ್ರಾಂಟ್ ನಿಯಮದಲ್ಲಿ ಗ್ರಾಂಟ್ ಆದ 5 ರಿಂದ 15 ವರ್ಷದೊಳಗೆ ಅನುಮತಿ ಪಡೆದು ಪರಭಾರೆ ಮಾಡಬಹುದಾದ ಕಾರಣ 15 ವರ್ಷದ ನಂತರ ಅನುಮತಿ ಕಡ್ಡಾಯವಲ್ಲ ಎಂಬ ವಾದ ಮಂಡಿಸಲಾಗುತ್ತದೆ. – ಕಲಂ 4(2) ರಲ್ಲಿ ಕಡ್ಡಾಯ ಅನುಮತಿ ಪಡೆಯದೆ ನಡೆಸಿದ ಪರಭಾರೆ ಅನೂರ್ಜಿತವಾಗುತ್ತದೆ. – ಕಾಯ್ದೆ ಎಸ್.ಸಿ. ಎಸ್.ಟಿ. ಸಮುದಾಯಕ್ಕೆ ಹಿತಾಶಯದ ಶಾಸನವಾಗಿದ್ದು – 8 ವರ್ಷದಲ್ಲಿ ಕ್ರಮ ಜರುಗಿಸಿರುವುದು ವಿಳಂಬವಲ್ಲ – ಪರಭಾರೆ ವ್ಯವಹಾರವನ್ನು ಸಂಶಯದಿಂದ ನೋಡಿರುವ ನ್ಯಾಯಾಲಯ ಇದರಲ್ಲಿ ಜಿ.ಪಿ.ಎ 15 ವರ್ಷಕ್ಕೆ ಮುಂಚೆಯೇ ಕಾರ್ಯಗತವಾಗಿದೆ, ಖರೀದಿದಾರನ ಹೆಂಡತಿ ಜಿ.ಪಿ.ಎ ಹೊಂದಿದ್ದಾರೆ, ಕ್ರಯದ ಮೊತ್ತ ನಗದಾಗಿ ವರ್ಗವಾಗಿದೆ, ಕ್ರಯಪತ್ರ 15 ವರ್ಷದ ನಂತರ ಆಗಿದ್ದರೂ ಕೇಸಿನ ಫಲಿತಾಂಶದಲ್ಲಿ ಬದಲಿಲ್ಲ. – 15 ವರ್ಷದ ನಂತರವೂ ಅನುಮತಿ ಕಡ್ಡಾಯ.[2]

(31). ವಿಳಂಬವಾದ ಮತ್ತು ಹಳೆಯದಾದ ಕ್ಲೇಮುಗಳನ್ನು ನ್ಯಾಯಾಲಯ ವಿಚಾರಣೆಗೆ ತೆಗೆದುಕೊಳ್ಳದಿರಬಹುದಾದದ್ದು ಕಾನೂನಿನ ನಿಯಮವಲ್ಲ ಆದರೆ ಅದು ಸ್ವಸ್ಥ ಮತ್ತು ವಿವೇಚನೆಯ ಪ್ರಯೋಗದ ಆಚರಣೆಯ ನಿಯಮವಾಗಿದೆ. ಪ್ರತಿಯೊಂದು ಕೇಸು ಅದರಲ್ಲಿನ ವಾಸ್ತವಿಕತೆಯ ಮೇಲೆ

---

[1] ಸೀತು ಸಾಹು ವಿ. ಜಾರ್ಖಂಡ್ ರಾಜ್ಯ – 2004 (8) ಎಸ್.ಸಿ.ಸಿ 340

[2] ಸತ್ಯನ್ ವಿ. ಜಿಲ್ಲಾಧಿಕಾರಿ – 2019 (7) ಸ್ಕೇಲ್ 270

ಅವಲಂಬಿತವಾಗಿದೆ. ಕರ್ತವ್ಯ ಲೋಪ ಅಥವಾ ವಿಳಂಬದ ಆಧಾರದ ಮೇಲೆ ಪಾರ್ಟಿಗೆ ಪರಿಹಾರವು ನಿರಾಕರಿಸಲ್ಪಡುವುದು ತತ್ವವಾಗಿದೆ ಆದರೆ ಅರ್ಜಿಯನ್ನು ಸಲ್ಲಿಸುವಲ್ಲಿ ವಿಳಂಬದ ಕಾರಣದಿಂದಾಗಿ ತರ್ಕಬದ್ಧವಾದ ವಿವರಣೆಯಿಲ್ಲದಿದ್ದಲ್ಲಿ ಇತರರಿಗೆ ಸಂಬಂದಿಸಿದ ಹಕ್ಕುಗಳ ತೊಂದರೆಗೊಳಗಾಗಲು ಬಿಡಬಾರದು, ಇದು ಯಾವ ಮೂಲಭೂತ ಹಕ್ಕುಗಳ ಉಲ್ಲಂಘನೆಯಾಗಿದೆ ಮತ್ತು ಪರಿಹಾರ ಕೋರಿರುವುದು ಮತ್ತು ಎಷ್ಟು ವಿಳಂಬ ಆಗಿದೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ. ನಡವಳಿಕೆಯನ್ನು ಸಮರ್ಥಿಸುವ ಸಂದರ್ಭಗಳಲ್ಲಿ, ಸ್ವಷ್ಟ ಅಕ್ರಮತೆಯು ಕರ್ತವ್ಯ ಲೋಪದ ಏಕೈಕ ತಳಹದಿಯ ಮೇಲೆ ನಿರಂತರವಾಗಿ ಉಳಿಯಲು ಸಾಧ್ಯವಿಲ್ಲ.[1]

(32). ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಹೊಸ 2013 ರ ಭೂಸ್ವಾಧೀನ ಕಾಯ್ದೆ ಕಲಂ 24(2) ರ ಅಡಿಯಲ್ಲಿ ಕೊಟ್ಟಿರುವಂತೆ ಐದು ವರ್ಷಗಳ ಹಿಂದೆ ಹಳೆ ಕಾಯ್ದೆಯಲ್ಲಿ ಭೂಸ್ವಾಧೀನವಾಗಿದ್ದು ಅವಾರ್ಡ್ ಪ್ರಕಟವಾಗಿದ್ದು, ಅದರ ಭೌತಿಕ ಸ್ವಾಧೀನವನ್ನು ಪಡೆದಿಲ್ಲವಾದರೆ ಅಥವ ಪರಿಹಾರವನ್ನು ಪಾವತಿಸಿಲ್ಲವಾದರೆ ಅಂತಹ ಭೂಸ್ವಾಧೀನ ರದ್ದಾಗಿ ಹೋದಂತೆ ಪರಿಗಣಿಸಲಾಗುತ್ತದೆ, ಅಂತಹ ಸಮಯದಲ್ಲಿ ಸರ್ಕಾರ ಬಯಸಿದರೆ ಹೊಸದಾಗಿ ಹೊಸ ಕಾಯ್ದೆಯಲ್ಲಿ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಬಿಸಬೇಕಿರುತ್ತದೆ. ಇಂತಹ ಕಾನೂನಿನ ಅಡಿಯಲ್ಲಿ ಅನೇಕ ಅರ್ಜಿಗಳು ಹೈಕೋರ್ಟ್ ಮತ್ತು ಸುಪ್ರೀಮ್ ಕೋರ್ಟಿಗೆ ಹೋಗುತ್ತಲಿದ್ದು ಈ ಬಗ್ಗೆ ಸುಪ್ರೀಮ್ ಕೋರ್ಟಿನ ಮುಂದೆ ಪ್ರಕರಣವೊಂದು ಬರುತ್ತದೆ, – 100 ವರ್ಷದ ಹಿಂದೆ ಭೂಸ್ವಾಧೀನವಾಗಿ ಅರ್ಜಿದಾರರ ಪೂರ್ವಿಕರು ಪರಿಹಾರವನ್ನು ಪಡೆದಿರುವುದಿಲ್ಲ ಎಂಬ ಕಾರಣಕ್ಕೆ ಹೈಕೋರ್ಟಿನಲ್ಲಿ ರಿಟ್ ಸಲ್ಲಿಸಿ ಅವರ ಪೂರ್ವಿಕರ 100 ಎಕರೆ ಭೂಸ್ವಾಧೀನವಾಗಿ ಅವಾರ್ಡ್

---

[1] ಡೆಶ್ರಿ ರೋಹ್ಟಾಸ್ ವಿ. ಡಿಸ್ಟ್ರಿಕ್ಟ್ ಬೋರ್ಡ್ – 1992 (2) ಎಸ್.ಸಿ.ಸಿ 598

ಪಾಸಾಗಿ ಆದರೆ ಅರ್ಜಿದಾರರ ಪೂರ್ವಿಕರು ಪರಿಹಾರ ಪಡೆದಿಲ್ಲ. ಅರ್ಜಿದಾರರು ಅನೇಕ ಕಡೆ ತಮ್ಮ ಹಕ್ಕಿಗಾಗಿ ತಿರುಗಿದ್ದಾರೆ ಆದರೆ ಫಲವಾಗಿಲ್ಲ. ಈಗ ಹೊಸಕಾಯ್ದೆ ಅನ್ವಯ ಭೂಸ್ವಾಧೀನ ರದ್ದಾಗಿದೆ, ಸ್ವಾಧೀನ ಪಡೆದು ಸರ್ಕಾರಿ ಕಚೇರಿಗಳಿಗೆ ಮತ್ತು ಖಾಸಗಿ ವ್ಯಕ್ತಿಗಳಿಗೆ ನೀಡಲಾಗಿದೆ, ಸರ್ಕಾರ ಮೂರನೇ ವ್ಯಕ್ತಿಗಳಿಗೆ ಭೂಮಿ ಹಂಚಿಕೆ ಮಾಡಬಹುದು, ಆದ್ದರಿಂದ ಭರಿಸಲಾಗದ ನಷ್ಟ ಮತ್ತು ದಕ್ಕೆ ಆಗುತ್ತದೆ, ಸರ್ಕಾರ ಮೂರನೇ ಪಾರ್ಟಿ ಹಿತಾಸಕ್ತಿ ಮಾಡದಂತೆ ನಿಲ್ಲಿಸಬೇಕು, ಕೆಲವು ಸ್ವಾಧೀನದಾರರು ಕಟ್ಟಡ ನಿರ್ಮಾಣಮಾಡುತ್ತಿರುವುದು ತಡೆಯಬೇಕು, ಯತಾಸ್ಥಿತಿ ನಿರ್ವಹಿಸಬೇಕು ಇತ್ಯಾದಿ ಕೋರಿ ಅರ್ಜಿ ಸಲ್ಲಿಸುತ್ತಾರೆ. ಈ ಬಗ್ಗೆ ಹೈಕೋರ್ಟ್ ಮತ್ತು ಸುಪ್ರೀಮ್ ಕೋರ್ಟ್ ಹೀಗೆಂದಿದೆ, ಅವಾರ್ಡ್ ನೋಟೀಸ್ ನೀಡಲಾಗಿದ್ದರೂ ಅದನ್ನು ಉದ್ದೇಶಪೂರ್ವಕವಾಗಿ ಮಾಲೀಕರು ಪಡೆದಿರುವುದಿಲ್ಲ – ಸರ್ಕಾರಿ ನಿರ್ದೇಶನದಂತೆ ಟ್ರೆಷರಿಯಲ್ಲಿ ಡಿಪಾಸಿಟ್ ಮಾಡಲಾಗಿದೆ – ಕಲಂ 31 ರಲ್ಲಿ ನೀಡಿರುವಂತೆ ಕೋರ್ಟನಲ್ಲಿ ಡಿಪಾಸಿಟ್ ಮಾಡದೆ ಹೋದಲ್ಲಿ ಕಲಂ 34 ರಲ್ಲಿ ಹೆಚ್ಚುವರಿ ಬಡ್ಡಿ ನೀಡಬೇಕಾದ ಪ್ರಮೇಯ ಅಷ್ಟೆ ಇರುತ್ತದೆ – ಭೂಸ್ವಾಧೀನ ರದ್ದಾಗಿಲ್ಲ – ಉದ್ದೇಶಪೂರ್ವಕವಾಗಿ ಮಾಲೀಕರು ಪರಿಹಾರವನ್ನು ಪಡೆಯದೇ ಇರುವುದು ಹೊಸಾ ಕಾಯ್ದೆ ಕಲಂ 24(2) ರಲ್ಲಿ ಬರುವುದಿಲ್ಲ – ಅರ್ಜಿದಾರರಾಗಲೀ ಅವರ ಹಿಂದಿನ ಮೂರು ತಲೆಮಾರಾಗಲೀ ಅಧಿಕಾರಿಗಳನ್ನ ಬರಹದ ಮೂಲಕ ಪರಿಹಾರವನ್ನು ಕೋರಿ ಸಂಪರ್ಕಿಸಿಲ್ಲ – ಅಂತಹ ದಾಖಲೆ ತೋರಿಸಿಲ್ಲ – ವಿಳಂಬ ಮತ್ತು ಕರ್ತವ್ಯಲೋಪದಿಂದ ಅಂತಹ ಕ್ಲೇಮುಗಳನ್ನು ಪರಿಗಣಿಸಲು ಬರುವುದಿಲ್ಲ, ಅವುಗಳು ಸಂಶಯಾಸ್ಪದ, ಹಳೆಯದಾದ ಮತ್ತು ನಶಿಸಿದ ಕ್ಲೇಮುಗಳಾಗಿರುತ್ತವೆ. – ಸಕಾರಣಬದ್ದ ಕಾಲಾವದಿ ಮೀರಿದ ಮೇಲೆ ಅಂತಹ ಕ್ಲೇಮುಗಳ ಬಗ್ಗೆ ವಿಚಾರಣೆ ಮಾಡಲು ಬರುವುದಿಲ್ಲ – ಅರ್ಜಿದಾರರ ಪೂರ್ವಿಕರು ಹೇಗೆ

ಪರಿಹಾರ ಪಡೆದಿಲ್ಲ ಎಂಬುದನ್ನು ಅರ್ಜಿಯಲ್ಲಿ ತಿಳಿಸಿಲ್ಲ ಅದಕ್ಕೆ ಯಾವುದೇ ದಾಖಲೆ ಹಾಜರುಪಡಿಸಿಲ್ಲ – ಅಂತಹ ಹಳೆಯದಾದ ಪ್ರಕರಣ ಪುರಸ್ಕರಿಸಿದರೆ ಕಾಲ ವಿಳಂಬದಿಂದ ಕಡತ ತಿದ್ದಿರಬಹುದಾದ ಸಾದ್ಯತೆ ಇರುತ್ತದೆ ಅಥವ ಹಳೆಯ ದಾಖಲೆ ಅಲಭ್ಯ ಪರಿಸ್ಥಿತಿ ಇರುತ್ತದೆ – ಈ ನಿಯಮವು ಕಾಲಮಿತಿಯಿಂದ ರದ್ದಾದ ಕ್ಲೇಮುಗಳನ್ನು ಪುನರ್ ಸ್ಥಾಪಿಸುವುದಿಲ್ಲ, ವಂಚನೆಯ ಕ್ಲೇಮುಗಳನ್ನು ಪುರಸ್ಕರಿಸಲು ಬರುವುದಿಲ್ಲ – ಇಂತಹ ಕ್ಲೇಮು ಕಾನೂನಿನ ದುರುಪಯೋಗವಾಗಿದೆ ಎಂದು ತೀರ್ಪಿತ್ತಿದೆ.[1]

(33). ಪಿ.ಟಿ.ಸಿ.ಎಲ್ ಕೇಸಿನಲ್ಲಿ 1966 ರಲ್ಲಿ ಗ್ರಾಂಟಾಗಿದೆ, 1975 ರಲ್ಲಿ ಮೊದಲನೇ ಕ್ರಯ ಆಗಿದೆ. 2009–10 ರಲ್ಲಿ ಭೂ ವಾಪಸಾತಿಗೆ ಗ್ರಾಂಟಿ ಮಗ ಅರ್ಜಿ ಸಲ್ಲಿಸುತ್ತಾನೆ. ಇಂತಹ 35 ವರ್ಷ ವಿಳಂಬವಾದ, ಸಕಾರಣಬದ್ಧವಲ್ಲದ ಕಾಲಮಿತಿಯೊಳಗೆ ಸಲ್ಲಿಸದ ಅರ್ಜಿಯನ್ನು ವಜಾಕರಿಸಲಾಗಿದೆ.[2]

(34). ವಂಚನೆ ವಿಚಾರದಲ್ಲಿ ಕಾಲಮಿತಿಯ ಬಗ್ಗೆ 1963 ರ ಮಿತಿ ಕಾಯ್ದೆ ಅಡಿ ಸೆಕ್ಷನ್ 17 ನೋಡಬೇಕಿರುತ್ತದೆ. ಇದರಲ್ಲಿ ವಂಚನೆ ಅಥವಾ ತಪ್ಪುಗಳ ಪರಿಣಾಮವನ್ನು ವಿವರಿಸಲಾಗಿದೆ. (1) ಎಲ್ಲಿ, ಈ ಕಾಯ್ದೆಯಿಂದ ಮಿತಿಯ ಅವಧಿಯನ್ನು ನಿಗದಿಪಡಿಸಿದ ಯಾವುದೇ ದಾವೆ ಅಥವಾ ಅರ್ಜಿಯ ಸಂದರ್ಭದಲ್ಲಿ, (ಎ). ದಾವೆ ಅಥವಾ ಅರ್ಜಿಯು ಪ್ರತಿವಾದಿಯ ಅಥವಾ ಅವರ ಏಜೆಂಟರ ವಂಚನೆಯನ್ನು ಆಧರಿಸಿದೆ; ಅಥವಾ (ಬಿ). ಹಕ್ಕು ಅಥವಾ ಶೀರ್ಷಿಕೆಗಳ ಜ್ಞಾನದ ಆಧಾರದಲ್ಲಿ ದಾವೆ ಅಥವಾ ಅರ್ಜಿಯನ್ನು ಸ್ಥಾಪಿಸಿರುವುದು ಅಂತಹ ಯಾವುದೇ ವ್ಯಕ್ತಿಯ ವಂಚನೆಯಿಂದ ಮರೆಯಾಗಿದ್ದರೆ; ಅಥವಾ (ಸಿ) ದೋಷದ ಪರಿಣಾಮಗಳಿಂದ

---

[1] ಮಹಾವೀರ್ ವಿ. ಯೂನಿಯನ್ ಆಫ್ ಇಂಡಿಯಾ – 2018 (3) ಎಸ್.ಸಿ.ಸಿ 588

[2] ಸೈಯದ್ ನಿಸಾರ್ ಅಹಮದ್ ವಿ. ಜಿಲ್ಲಾಧಿಕಾರಿ – ಮನು/ ಕೆ.ಎ/ 0757/ 2019

ಪರಿಹಾರಕ್ಕಾಗಿ ಅರ್ಜಿ ಅಥವಾ ದಾವೆ ಮಾಡುವುದು; ಅಥವಾ (ಡಿ) ವಾದಿಯ ಅಥವಾ ಅರ್ಜಿದಾರರ ಹಕ್ಕನ್ನು ಸ್ಥಾಪಿಸಲು ಅಗತ್ಯವಾದ ಯಾವುದೇ ದಾಖಲೆ ಮೋಸದಿಂದ ಅವನಿಂದ ಅಡಗಿಸಲ್ಪಟ್ಟಿದ್ದರೆ, ಅರ್ಜಿದಾರನು ವಂಚನೆ ಅಥವಾ ತಪ್ಪನ್ನು ಪತ್ತೆಹಚ್ಚುವವರೆಗೂ ಕಾಲಮಿತಿ ಪ್ರಾರಂಬವಾಗುವುದಿಲ್ಲ ಅಥವ ಅವರು ಸಮಂಜಸವಾದ ಶ್ರಮದೊಂದಿಗೆ, ಅದನ್ನು ಕಂಡುಹಿಡಿಯ ಬಹುದಾಗಿದ್ದರೆ; ಅಥವಾ ಮರೆಮಾಚಿರುವ ದಾಖಲೆಯ ಸಂದರ್ಭದಲ್ಲಿ, ವಾದಿ ಅಥವಾ ಅರ್ಜಿದಾರರು ಮೊದಲು ಮರೆಮಾಚಲಾದ ದಾಖಲೆಯನ್ನು ಹಾಜರುಪಡಿಸುವ ಅಥವಾ ಅದರ ಹಾಜರುಪಡಿಸುವಿಕೆಯನ್ನು ಒತ್ತಾಯಿಸುವ ವಿಧಾನವನ್ನು ಹೊಂದಿರುವಾಗ: ಉಪಬಂದಿಸಿದಂತೆ, ಈ ಸೆಕ್ಷನ್ ನಲ್ಲಿ ಯಾವುದೇ ಯಾವುದೇ ಮೊಕದ್ದಮೆಯನ್ನು ಸ್ಥಾಪಿಸಲು ಅಥವಾ ಯಾವುದೇ ಹೊಣೆಯನ್ನು ಜಾರಿಮಾಡಲು ಅಥವಾ ಅರ್ಜಿಯನ್ನು ಹಾಕಿ ವಸೂಲಿಮಾಡಲು ಅಥವಾ ಯಾವುದೇ ವ್ಯವಹಾರ ಅನೂರ್ಜಿತಗೊಳಿಸಿ ಆಸ್ತಿಯ ಮೇಲೆ ಪರಿಣಾಮ ಬೀರಲು ಈ ಕೆಳಕಂಡ ಸಂಧರ್ಬಗಳಲ್ಲಿ ಬರುವುದಿಲ್ಲ, ಯಾವ (ಎ) ವಂಚನೆ ಪ್ರಕರಣದಲ್ಲಿ, ಮೋಸಕ್ಕೆ ಖರೀದಿದಾರನು ಪಾರ್ಟಿಯಲ್ಲ ಮತ್ತು ಖರೀದಿ ಸಮಯದಲ್ಲಿ ಆತನಿಗೆ ತಿಳಿದಿಲ್ಲ ಅಥವಾ ಯಾವುದೇ ವಂಚನೆ ನಡೆದಿರುವುದು ನಂಬಲು ಕಾರಣಗಳು ಇಲ್ಲದೆ ಮೌಲ್ಯಯುತವಾದ ಪರಿಗಣನೆಗೆ ಖರೀದಿಸಲಾಗಿದ್ದರೆ, ಅಥವಾ (ಬಿ) ತಪ್ಪಾಗಿರುವ ಸಂದರ್ಭದಲ್ಲಿ, ತಪ್ಪಾಗಿ ಮಾಡಲ್ಪಟ್ಟ ವ್ಯವಹಾರದ ನಂತರ ಮೌಲ್ಯಯುತವಾದ ಪರಿಗಣನೆಗಾಗಿ ತಿಳಿದಿಲ್ಲದ ವ್ಯಕ್ತಿಯಿಂದ ಖರೀದಿಸಲ್ಪಟ್ಟಿದ್ದರೆ, ಅಥವಾ ತಪ್ಪಾಗಿ ಮಾಡಲಾಗಿದೆ ಎಂಬುದರ ನಂಬಿಕೆಗೆ ಕಾರಣಗಳು ಇಲ್ಲವಾದಲ್ಲಿ, ಅಥವಾ (ಸಿ) ಮರೆಮಾಚಲಾದ ದಾಖಲೆಗೆ ಸಂಬಂಧಿಸಿದಂತೆ, ಮರೆಮಾಚುವಿಕೆಗೆ ಅವರು ಪಾರ್ಟಿಯಲ್ಲ ಮತ್ತು ಅವರಿಗೆ ಖರೀದಿಯ ಸಮಯದಲ್ಲಿ ತಿಳಿದಿಲ್ಲ, ಅಥವಾ

ಮರೆಮಾಚಿರುವುದು ಎಂದು ನಂಬಿಕೆಗೆ ಕಾರಣಗಳು ಇಲ್ಲದೆ ವ್ಯಕ್ತಿಯಿಂದ ಮೌಲ್ಯಯುತವಾದ ಪರಿಗಣನೆಗೆ ಖರೀದಿಸಲಾಗಿದ್ದರೆ.

(2) ತೀರ್ಪಿನ ಋಣಿಯು (ಜಡ್ಜಮೆಂಟ್ ಡೆಬ್ಟರ್) ವಂಚನೆ ಅಥವಾ ಶಕ್ತಿಯಿಂದ, ತೀರ್ಪು ಅಥವಾ ಆದೇಶದ ಅಮುಲ್ಜಾರಿಯನ್ನು ಕಾಲಮಿತಿಯ ಅವಧಿಯೊಳಗೆ ತಡೆಗಟ್ಟಿರುವಲ್ಲಿ, ನ್ಯಾಯಾಲಯವು, ಅವಧಿಯ ಮುಕ್ತಾಯದ ನಂತರ ತೀರ್ಪು ಹೊಂದಿದವನ ಅರ್ಜಿಯ ಮೇರೆಗೆ ಈ ತೀರ್ಪು ಅಥವಾ ಆದೇಶದ ಅಮುಲ್ಜಾರಿಯ ಅವದಿಯನ್ನು ವಿಸ್ತರಿಸಬಹುದು: ಉಪಬಂದಿಸಿದಂತೆ, ಅಂತಹ ಅರ್ಜಿಯು ವಂಚನೆಯ ಆವಿಷ್ಕಾರದ ದಿನಾಂಕದಿಂದ ಅಥವಾ ಶಕ್ತಿಯ ನಿಲುಗಡೆಗೆ ಸಂಬಂಧಿಸಿದಂತೆ ಅಲ್ಲಿಂದ ಒಂದು ವರ್ಷದೊಳಗೆ ಮಾಡಲ್ಪಟ್ಟಿದೆ ಎಂದು ಒದಗಿಸಿದರೆ, ಆ ಸಂದರ್ಭದಲ್ಲಿ ಅದು ಪರಿಗಣಿಸಬಹುದು ~~ಸಂಭವಿಸಬಹುದು~~.

(35). ಗುಜರಾತಿನ ಬಾಂಬೆ ಭೂ ಕಂದಾಯ ಕೋಡ್ನಲ್ಲಿ ಭೂ ಪರಿವರ್ತನೆ ವಿಚಾರದಲ್ಲಿ ಆ ಆದೇಶವನ್ನು ರದ್ದು ಮಾಡುವ ವಿಚಾರಕ್ಕೆ ಬಂದ ವಿವಾದದಲ್ಲಿ ಸದರಿ ಭೂ ಪರಿವರ್ತನೆ ಅರ್ಜಿಯನ್ನು ಮೂರು ತಿಂಗಳಲ್ಲಿ ಪರಿಗಣಿಸಬೇಕು ಎಂಬ ಕಾಲಮಿತಿಯನ್ನು ಉಲ್ಲೇಖಿಸಿ ಅಂತಹ ಆದೇಶವನ್ನು ರದ್ದು ಪಡಿಸಲು ಕಾಲಮಿತಿ ನಿಗದಿ ಮಾಡದೆ ಇದ್ದರೂ ಅದನ್ನು ಒಂದು ವರ್ಷದ ನಂತರ ರದ್ದು ಪಡಿಸಿದ್ದನ್ನು ಕಾಲಮಿತಿ ಮೀರಲಾಗಿದೆ ಎಂಬ ತೀರ್ಪು ಸುಪ್ರೀಮ್ ಕೋರ್ಟ್ ನೀಡಿದೆ.[1]

(36). ಸ್ವಯಂ ಪುನರ್ ಪರಿಶೀಲನಾ ವಿಚಾರದಲ್ಲಿ ಯಾವುದೇ ಕಾನೂನು ಮಿತಿಯನ್ನು ಕಾಯ್ದೆ ನೀಡಿಲ್ಲವಾದರೂ ಅದನ್ನು ಸಕಾರಣಬದ್ದವಾದ ಕಾಲಮಿತಿಯಲ್ಲಿ ಪ್ರಯೋಗಿಸಬೇಕು, ಸುಪ್ರೀಮ್ ಕೋರ್ಟ್ ಮುಂದಿನ ಈ

---

[1] ಗುಜರಾತ್ ರಾಜ್ಯ ವಿ. ಪಟೇಲ್ ರಾಘವ ನಾಥ್ – ಎ.ಐ.ಆರ್ 1969 ಎಸ್.ಸಿ 1297

ವಿಷಯದ ಕೇಸಿನಲ್ಲಿ ಒಂದು ವರ್ಷ ಮೀರಿ ಪ್ರಯೋಗಿಸಲಾಗಿರುವುದನ್ನು ಸಕಾರಣಬದ್ಧವಲ್ಲವೆಂದು ತೀರ್ಪುನೀಡಿದೆ.[1]

(37). ಕಂದಾಯ ದಾಖಲಾತಿಗಳಲ್ಲಿನ ನಮೂದು ಬದಲಿಸಲು ಐದು ದಶಕದ ನಂತರ ಪ್ರಯತ್ನಿಸಿರುವ ಸ್ವಯಂ ಪುನರ್ ಪರಿಶೀಲನಾ ಅಧಿಕಾರ ಪ್ರಯೋಗಿಸುವಿಕೆ ವಿಚಾರದಲ್ಲಿ – ಕೇವಲ ಮೋಸದಿಂದ ನಡೆದಿದೆ ಎಂಬ ಕಾರಣ ಒಡ್ಡಿ ಸಕಾರಣಬದ್ದ ಕಾಲಮಿತಿಯನ್ನು ವಿಸ್ತರಿಸಲಾಗದು ಎನ್ನುತ್ತದೆ ಸುಪ್ರೀಮ್ ಕೋರ್ಟ್.[2]

**ಅರ್ಜಿಯ ವಿಳಂಬಕ್ಕೆ ಸಮರ್ಥ ಕಾರಣಗಳು – ಕಾಲಮಿತಿ**

1. ವಿಳಂಬವನ್ನು ಕ್ಷಮಿಸುವುದು ಕೋರ್ಟ್ನ ವಿವೇಚನೆಯ ವಿಷಯವಾಗಿದ್ದು, ಮಿತಿ ಕಾಯಿದೆಯಡಿ ಸೆಕ್ಷನ್ 5, ರಲ್ಲಿ ವಿಳಂಬವನ್ನು ಒಂದು ನಿರ್ದಿಷ್ಟ ಮಿತಿಯೊಳಗೆ ಮಾತ್ರವೇ ಇಂಥ ವಿವೇಚನೆಯನ್ನು ಚಲಾಯಿಸಲಾಗುತ್ತದೆ ಎಂದು ಹೇಳಲಾಗುವುದಿಲ್ಲ. ವಿಳಂಬದ ಉದ್ದವು ಯಾವುದೇ ವಿಷಯವಲ್ಲ, ವಿವರಣೆಯ ಸ್ವೀಕಾರಾರ್ಹತೆಯು ಮಾತ್ರ ಮಾನದಂಡವಾಗಿದೆ. ಕೆಲವೊಮ್ಮೆ ಕಡಿಮೆ ವ್ಯಾಪ್ತಿಯ ವಿಳಂಬವು ಸ್ವೀಕಾರಾರ್ಹ ವಿವರಣೆಯ ಅಗತ್ಯತೆಯ ಕಾರಣದಿಂದಾಗಿ ಮನ್ನಿಸಲಾಗದೆ ಇರಬುದು, ಆದರೆ ಕೆಲವು ಇತರ ಸಂದರ್ಭಗಳಲ್ಲಿ ಬಹಳ ವ್ಯಾಪ್ತಿಯ ವಿಳಂಬವನ್ನು ಅಲ್ಲಿ ವಿವರಣೆಯು ತೃಪ್ತಿದಾಯಕವಾಗಿದ್ದರೆ ಮನ್ನಣೆಗೆ ಒಳಪಡಿಸಬಹುದು. ನ್ಯಾಯಾಲಯ ವಿವರಣೆಯನ್ನು ಒಪ್ಪಿಕೊಂಡ ನಂತರ ಅದು ವಿವೇಚನೆಯ ಸಕಾರಾತ್ಮಕ ಬಳಕೆಯ ಪರಿಣಾಮವಾಗಿದೆ ಮತ್ತು ಸಾಮಾನ್ಯವಾಗಿ ಉನ್ನತ ನ್ಯಾಯಾಲಯವು ಅಂತಹ ಕಂಡುಹಿಡಿಯುವಿಕೆಯನ್ನು ಕದಡಬಾರದು, ಪುನರ್ ಪರಿಶೀಲನಾ ಅಧಿಕಾರ ವ್ಯಾಪ್ತಿಯಲ್ಲೂ ಕೂಡ, ವಿವೇಚನೆಗೆ ಒಳಪಡುವ ಪ್ರಯೋಗವು

---

[1] ಮೊಹಮ್ಮದ್ ಕವಿ ವಿ. ಫಾತ್ಮಾಬೈ – 1997 (6) ಎಸ್.ಸಿ.ಸಿ 71

[2] ಜಂಟಿ ಕಲೆಕ್ಟರ್ ವಿ. ನರಸಿಂಗ ರಾವ್ – 2015 (3) ಎಸ್.ಸಿ.ಸಿ 695

ಸಂಪೂರ್ಣ ಅಸಮಂಜಸವಾದ ಆಧಾರದ ಮೇಲೆ ಅಥವಾ ಅನಿಯಂತ್ರಿತ ಅಥವಾ ವ್ಯತಿರಿಕ್ತವಾಗಿದ್ದಲ್ಲಿ ಉನ್ನತ ನ್ಯಾಯಾಲಯ ಮಧ್ಯ ಪ್ರವೇಶಿಸಬಹುದು. ಆದರೆ ವಿಳಂಬವನ್ನು ಕ್ಷಮಿಸಲು ಮೊದಲ ನ್ಯಾಯಾಲಯ ನಿರಾಕರಿಸಿರುವಾಗ ಅದು ಬೇರೆ ವಿಷಯವಾಗಿದೆ. ಅಂತಹ ಸಂದರ್ಭಗಳಲ್ಲಿ, ಉನ್ನತ ನ್ಯಾಯಾಲಯವು ವಿಳಂಬವನ್ನು ತೋರಿಸಿದ ಕಾರಣವನ್ನು ಹೊಸದಾಗಿ ಪರಿಗಣಿಸಲು ಮುಕ್ತವಾಗಿರುತ್ತದೆ ಮತ್ತು ಕೆಳಮಟ್ಟದ ನ್ಯಾಯಾಲಯದ ತೀರ್ಮಾನಕ್ಕೆ ಅಭಾದಿತವಾಗಿ ತನ್ನದೇ ಆದ ಕಂಡುಕೊಳ್ಳುವಿಕೆಗೆ ಬರಲು ಉನ್ನತ ನ್ಯಾಯಾಲಯಕ್ಕೆ ಮುಕ್ತವಾಗಿದೆ.[1]

2. ಸೂಕ್ತವಾದ ನ್ಯಾಯಾಂಗ ಆಡಳಿತದ ಹಿತಾಸಕ್ತಿಗಾಗಿ ಪ್ರಕರಣಗಳನ್ನು ತ್ವರಿತವಾಗಿ ವಿಲೇವಾರಿ ಮಾಡಲು ಉತ್ತರಾಧಿಕಾರಿಗಳನ್ನು ದಾಖಲೆಯಲ್ಲಿ ದಾಖಲಿಸುವ ನಿಟ್ಟಿನಲ್ಲಿ ನಿರ್ದಿಷ್ಟ ಸಮಯವನ್ನು ನಿಗದಿಪಡಿಸುವ ನಿಬಂಧನೆ ಅಥವಾ ಯಾವುದೇ ಅರ್ಜಿಯನ್ನು ಸಮಯಕ್ಕೆ ಒಳಪಡಿಸದಿದ್ದಲ್ಲಿ ದಾವೆ ಅಥವ ಮೇಲ್ಮನವಿ ಅಂತ್ಯಗೊಳ್ಳುತ್ತದೆ. ಇತರ ಪಾರ್ಟಿಗಳಿಗೆ ಬಹಳ ಮೌಲ್ಯಯುತವಾದ ಹಕ್ಕು ಒದಗಿರುತ್ತದೆ ಮತ್ತು ಪಾರ್ಟಿಗೆ ಗಣನೀಯ ನ್ಯಾಯವನ್ನು ನೀಡುವ ಹೆಸರಿನಲ್ಲಿ ಇದನ್ನು ಲಘುವಾಗಿ ನಿರ್ಲಕ್ಷಿಸಬಾರದು ಅಥವಾ ಹಸ್ತಕ್ಷೇಪ ಮಾಡಬಾರದು ಎಂದು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಮತ್ತಷ್ಟು, ಒಳ್ಳೆಯ ಆಧಾರದ ಅನುಪಸ್ಥಿತಿಯಲ್ಲಿ ಪಾರ್ಟಿಗಳ ನ್ಯಾಯದ ಆಡಳಿತದ ಪರಿಣಾಮವಾಗಿ ಆಸಕ್ತಿಯಲ್ಲಿ ರಚಿಸಲಾದ ನ್ಯಾಯಸಮ್ಮತ ಹಕ್ಕಿನಿಂದ ಪಾರ್ಟಿಯನ್ನು ವಂಚಿತಗೊಳಿಸುತ್ತದೆ.[2]

3. ನ್ಯಾಯಾಲಯದ ಮುಂದೆ ತೋರಿರುವ ವಿಳಂಬಕ್ಕೆ ಕಾರಣಗಳು ಸಕಾರಣಬದ್ದವಾಗಿವೆ ಮತ್ತು ತೃಪ್ತಿಯಾಗಿದೆ ಎಂದು

---

[1] ಬಾಲಕೃಷ್ಣನ್ ವಿ. ಕೃಷ್ಣಮೂರ್ತಿ – ಎ.ಐ.ಆರ್ 1998 ಎಸ್.ಸಿ 3222

[2] ಭಗವಾನ್ ಸ್ವರೂಪ್ ವಿ. ಮೂಲ್ ಚಂದ್ – ಎ.ಐ.ಆರ್ 1983 ಎಸ್.ಸಿ 355

ನ್ಯಾಯಾಲಯ ತನ್ನ ಆದೇಶದಲ್ಲಿ ದಾಖಲಿಸಬೇಕು. ... ನ್ಯಾಯಸಮ್ಮತೆಯಿಂದ ಕಾಲಮಿತಿಯನ್ನು ವಿಸ್ತರಿಸಲು ಬರುವುದಿಲ್ಲ..... ಕೇಸಿನ ವಾಸ್ತವಾಂಶಗಳ ಮತ್ತು ಸಂಧರ್ಬಗಳಲ್ಲಿ ಕೊಟ್ಟಿರುವ ಕಾರಣಗಳು ಸಕಾರಣಬದ್ದವಾಗಿರಬೇಕು ಮತ್ತು ತೃಪ್ತಿಯಾಗಿರಬೇಕು.[1]

4. ಉತ್ತರಾಧಿಕಾರಿಗಳನ್ನು ರೆಕಾರ್ಡ್ ಮೇಲೆ ತರಲು ವಿಳಂಬವಾದಾಗ ತಾನಾಗೇ ದಾವೆ ವಜಾ ಗೊಳ್ಳುತ್ತದೆ. ಅದಕ್ಕೆ ಕೋರ್ಟ್ ಪ್ರತ್ಯೇಕ ಆದೇಶ ಬರೆಯಬೇಕೆಂದಿಲ್ಲ. ಇಂತಹ ಕೇಸುಗಳಲ್ಲಿ ಉತ್ತರಾಧಿಕಾರಿಗಳನ್ನು ತರಲು ಅರ್ಜಿ ಸಲ್ಲಿಸಿ ವಿಳಂಬಕ್ಕೆ ಕಾರಣ ನೀಡಿರುವಾಗ ಅಂತಹ ಪ್ರಕರಣಗಳಲ್ಲಿ ತುಂಬಾ ತಾಂತ್ರಿಕ ಮತ್ತು ನಿಯಮ ನಿಷ್ಠುರತೆ ಹೊಂದಿರಬಾರದು.[2]

5. ಕಾಲಮಿತಿಯಲ್ಲಿ ಅರ್ಜಿಯನ್ನು ಹಾಕಲಾಗಿಲ್ಲ ಎಂಬ ಸಮರ್ಥ ಕಾರಣಗಳನ್ನು ನೀಡಿರುವುದನ್ನು ಸಮಂಜಸವಾಗಿ, ಪ್ರಾಯೋಗಿಕವಾಗಿ, ಲೌಕಿಕವಾಗಿ ಮತ್ತು ಉದಾರವಾದ ರೀತಿಯಲ್ಲಿ ಅರ್ಥಮಾಡಿಕೊಂಡು ಅನ್ವಯಿಸಬೇಕು, ಅದು ಕೇಸಿನ ವಾಸ್ತವಿಕತೆ ಮತ್ತು ಸಂಧರ್ಬಗಳು ಮತ್ತು ಕೇಸಿನ ರೀತಿಯನ್ನು ಅವಲಂಬಿಸಿರುತ್ತದೆ. ಸಮರ್ಥ ಕಾರಣಗಳು ಎಂಬ ಕಲಂ 5 ರಲ್ಲಿನ ಪದವನ್ನು ಉದಾರವಾಗಿ ಸತ್ವಶಾಲಿಯಾದ ನ್ಯಾಯವನ್ನು ಮಾಡಲು ನಿರ್ಮಿಸಬೇಕು. ವಿಳಂಬವು ಕಾಲಹರಣ ತಂತ್ರಗಳಾಗಿರಬಾರದು, ಸದ್ಭಾವನೆಯಿಲ್ಲದ್ದಾಗಿರಬಾರದು, ಉದ್ದೇಶಪೂರ್ವಕ ನಿಷ್ಕ್ರಿಯತೆಯಾಗಿರಬಾರದು ಅಥವ ಅಪೀಲುದಾರನ ಅಜಾಗರೂಕತೆಯಾಗಿರಬಾರದು.[3]

---

[1] ರಾಮಚಂದ್ರನ್ ವಿ. ಕೇರಳ ರಾಜ್ಯ – 1997 (7) ಎಸ್.ಸಿ.ಸಿ 556

[2] ಮಿತ್ಯೆಲಾಲ್ ವಿ. ಅಣ್ಣಾಬಾಯ್ – 2003 (10) ಎಸ್.ಸಿ.ಸಿ 691

[3] ಪೆರುಮೊನ್ ವಿ. ಭಾರ್ಗವಿ – 2008 (8) ಎಸ್.ಸಿ.ಸಿ 321

6. ಸಮರ್ಥ ಕಾರಣಗಳು ಪದಗಳಲ್ಲಿ ಮೂಲಭೂತವಾಗಿ ವಿಸ್ತರಿಸಬಹುದಾದ ಮತ್ತು ಸರಿಯಾದ ದೃಷ್ಟಿಕೋನದಲ್ಲಿ ಅನ್ವಯಿಸಿ ವಾಸ್ತವಿಕತೆಯನ್ನು ಪಡೆಯಬೇಕು, ಇದನ್ನು ಸರಿಯಾದ ಸ್ಫೂರ್ತಿಯಲ್ಲಿ, ತತ್ವಜ್ಞಾನದ ಉದ್ದೇಶದಲ್ಲಿ ತಿಳಿದುಕೊಳ್ಳಬೇಕು. ... ಸತ್ವಶಾಲಿಯಾದ ನ್ಯಾಯಪ್ರಧಾನವು ಪ್ರಮುಖ ಮತ್ತು ಪ್ರಾಧಾನ್ಯತೆಯಾಗಬೇಕು, ತಾಂತ್ರಿಕ ಪರಿಗಣನೆಗಳಿಗೆ ಅನಪೇಕ್ಷಿತ ಮತ್ತು ಅಹ್ವಾನವಿಲ್ಲದ ಮಹತ್ವವನ್ನು ಕೊಡಬಾರದು. ..... ಅದರ ನಿಷ್ಕ್ರಿಯತೆ ಅಥವಾ ಉದಾಸೀನತೆಗೆ ಸಂಬಂಧಿಸಿದ ಪಾರ್ಟಿಯ ವರ್ತನೆ, ನಡವಳಿಕೆ ಮತ್ತು ಮನೋಭಾವಗಳು ಪರಿಗಣನೆಗೆ ತೆಗೆದುಕೊಳ್ಳಬೇಕಾದ ಅಂಶಗಳಾಗಿವೆ. ಮೂಲಭೂತ ತತ್ತ್ವವೆಂದರೆ ನ್ಯಾಯಾಲಯಗಳು ಎರಡೂ ಪಾರ್ಟಿಗಳ ವಿಷಯದಲ್ಲಿ ನ್ಯಾಯದ ಸಮತೋಲನವನ್ನು ಅಳೆಯುವ ಅವಶ್ಯಕತೆ ಇದೆ ಮತ್ತು ತತ್ವವನ್ನು ಸಾರ್ವತ್ರಿಕವಾಗಿ ಉದಾರತೆ ವಿಧಾನದ ಹೆಸರಿನಲ್ಲಿ ನೀಡಲಾಗುವುದಿಲ್ಲ. ... ಅರ್ಜಿಯಲ್ಲಿ ನೀಡಲಾದ ವಿವರಣೆಯು ಕಟ್ಟುಕತೆಯಾಗಿದ್ದರೆ ಅಥವಾ ಅರ್ಜಿಯಲ್ಲಿ ಆಗ್ರಹಿಸಿದ ಆಧಾರಗಳು ಕಾಲ್ಪನಿಕವಾದುದಾದರೆ, ಅಂತಹ ದಾವೆಗಳನ್ನು ಎದುರಿಸಲು ವಿನಾಕಾರಣ ಎದುರುದಾರರನ್ನು ಒಡ್ಡದಂತೆ ನ್ಯಾಯಾಲಯಗಳು ಜಾಗರೂಕರಾಗಿರಬೇಕು. ಮಿತಿಯ ಕಾನೂನಿನ ತಾಂತ್ರಿಕತೆಯ ಅವಲಂಬನೆಯನ್ನು ತೆಗೆದುಕೊಳ್ಳುವ ಮೂಲಕ ವಂಚನೆ, ತಪ್ಪು ನಿರೂಪಣೆ ಅಥವಾ ವಿಷಯವಾಗಿ ತಪ್ಪು ಅಭಿಪ್ರಾಯ ಉಂಟುಮಾಡಲಿಕ್ಕಾಗಿ ಯಾರನ್ನೂ ಬಿಡದಂತೆ ಜಾಗ್ರತೆವಹಿಸಬೇಕು. ... ರಾಜ್ಯ ಅಥವ ಸಾರ್ವಜನಿಕ ಸಂಸ್ಥೆಯು ಸಮಗ್ರ ಕಾರಣಗಳನ್ನು ಪ್ರತಿನಿದಿಸುವಿಕೆಯನ್ನು ಸ್ವಲ್ಪ ಸ್ವೀಕಾರಾರ್ಹ ಔದಾರ್ಯತೆಯನ್ನು ತೋರಬೇಕು.'.. ವಿಳಂಬವನ್ನು

ಗಂಭೀರ ವಿಷಯವಲ್ಲ ಎಂದು ಹೆಚ್ಚಾಗಿ ಗ್ರಹಿಸುತ್ತಿರುವ ಪ್ರವೃತ್ತಿಯನ್ನು ಕಾನೂನು ಮಾನದಂಡಗಳೊಳಗೆ ಮೊಟುಕುಗೊಳಿಸಬೇಕು.[1]

7. ಸರ್ಕಾರಿ ವಕೀಲರ ಕೊರತೆ, ಅನರ್ಹತೆ ಮತ್ತು ಉದಾಸೀನತೆಯಿಂದ ಆಗಿರುವ ವಿಳಂಬವನ್ನು ಆಂದ್ರ ಹೈ ಕೋರ್ಟ್ ವಿವರಿಸಿ ಸಾಮಾನ್ಯವಾಗಿ ಅಂತಹ ಅರ್ಜಿಗಳನ್ನು ವಜಾಮಾಡುತ್ತೇವೆ ಎಂದು ಹೇಳಿ ವಿಳಂಬವನ್ನು ಮನ್ನಿಸುತ್ತದೆ, ಸುಪ್ರೀಮ್ ಕೋರ್ಟ್, "ಕೋಪವು ಮಾನವನಿಗೆ ಕಾರಣ ನೀಡುವ ಸಾಮರ್ಥ್ಯವನ್ನ ಕುಗ್ಗಿಸುತ್ತದೆ, ಅದು ನ್ಯಾಯಾಧೀಶರಿಗೂ ಬಿಟ್ಟಿಲ್ಲ. ನ್ಯಾಯಾಧೀಶರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ ನ್ಯಾಯ ಮಾಡುವ ಪರಿಗಣನೆ ಮಾತ್ರ ಮಾರ್ಗದರ್ಶನವಾಗಿರಬೇಕು." ಎನ್ನುತ್ತ ಒಮ್ಮೆ ವಿಳಂಬಕ್ಕೆ ಕಾರಣ ತೃಪ್ತಿಯಾಗಿಲ್ಲ ಎಂದು ವ್ಯಕ್ತಪಡಿಸುವ ಕೋರ್ಟ್ ವಿಳಂಬವನ್ನು ಮನ್ನಿಸಿರುವುದು ಸರಿಯಲ್ಲ. ಕೇಸು ವಜಾ ಮಾಡಬೇಕಿತ್ತು ಎಂದು ಹೈಕೋರ್ಟ್ ತೀರ್ಪು ವಜಾ ಮಾಡುತ್ತದೆ.[2]

8. ಇನ್ನೊಂದು ಪ್ರಕರಣದಲ್ಲಿ ಕೋರ್ಟ್ ಪರಿಹಾರವನ್ನು ಕೊಟ್ಟಿದ್ದನ್ನು ಕಾರಣವಾಗಿ ನೀಡಿ ವಿಳಂಬವಾಗಿ ಆ ಕಾರಣವನ್ನು ನೀಡಿ ಸಲ್ಲಿಸಿರುವ ಅರ್ಜಿ ಸುಪ್ರೀಮ್ ಕೋರ್ಟ್ ತಿರಸ್ಕರಿಸಿದೆ.[3] ಅದೇ ರೀತಿಯಲ್ಲಿ ಕಾನೂನು ಅನೂರ್ಜಿತ ಗೊಳಿಸಿದ ನಂತರ ವಿಳಂಬವಾಗಿ ತೀರ್ಮಾನವಾದ ಕೇಸಿನ ಬಗ್ಗೆ ಹೊಸ ತೀರ್ಪಿನಂತೆ ಪರಿಹಾರ ಪಡೆಯಲು ಸಲ್ಲಿಸಿದ ಅರ್ಜಿ ವಜಾಗೊಳಿಸಿದೆ.[4]

---

[1] ಈಶಭಟ್ಟಾಚರ್ಜಿ ವಿ. ಮ್ಯಾನೇಜಿಂಗ್ ಕಮಿಟಿ – 2013 (12) ಎಸ್.ಸಿ.ಸಿ 649

[2] ಲಂಕವೆಂಕಟೇಶ್ವರುಲು ವಿ. ಆಂಧ್ರ ರಾಜ್ಯ – 2011 (4) ಎಸ್.ಸಿ.ಸಿ 363

[3] ಕರ್ನಾಟಕ ರಾಜ್ಯ ವಿ. ಕೊಟ್ರಾಯ್ಯ – 1996 (6) ಎಸ್.ಸಿ.ಸಿ 267

[4] ರೂಪ್ ಡೈಮೆಂಡ್ ವಿ. ಯೂನಿಯನ್ ಆಫ್ ಇಂಡಿಯಾ – ಎ.ಐ.ಆರ್ 1989 ಎಸ್.ಸಿ 674

## ವಿಭಾಗ ಮತ್ತು ಕಾಲಮಿತಿ

ಕೆಲವರ ವಾದದ ಪ್ರಕಾರ ವ್ಯಕ್ತಿ ಸತ್ತ 12 ವರ್ಷದೊಳಗೆ ಆತನ/ಆಕೆಯ ವಾರಸ್ಸು ವಿಭಾಗ ದಾವೆ ಹಾಕಬೇಕು ಎನ್ನುವುದು ಸುಪ್ರೀಮ್ ಕೋರ್ಟ್[1] ಒಪ್ಪಿರುವುದಿಲ್ಲ. 12 ವರ್ಷದ ಕಾಲಮಿತಿ ವ್ಯಕ್ತಿಯ ಸಾವಿನ ದಿನಾಂಕದಿಂದ ಪ್ರಾರಂಬವಾಗುವುದಿಲ್ಲ, ವ್ಯತಿರಿಕ್ತ ಸ್ವಾಧೀನದ ದಿನಾಂಕದಿಂದ ಪ್ರಾರಂಬವಾಗುತ್ತದೆ.

ನೊಂದಾಯಿತ ಪತ್ರಗಳು ಸಕ್ರಮವಾಗಿ ಕಾರ್ಯಗತ ಗೊಳಿಸಲಾಗಿದೆ ಎಂಬ ಕಾನೂನು ಪರಿಭಾವನೆ ಇರುತ್ತದೆ. ಇಂತಹ ದಾಖಲೆಯನ್ನು ಪ್ರಶ್ನಿಸುವ ದಾಖಲೆ ಸಹಿ ಮಾಡಿರುವ ವಾದಿಯು ಮೈನರ್ ಆಗಿದ್ದಲ್ಲಿ ಮೆಜಾರಿಟಿಗೆ ಬಂದ ತಾರೀಖಿನಿಂದ 3 ವರ್ಷದಲ್ಲಿ ಅಥವ ದಾಖಲೆ ನೊಂದಾವಣಿ ತಾರೀಖಿನಿಂದ 12 ವರ್ಷದಲ್ಲಿ ಪ್ರಶ್ನಿಸಬೇಕು. ಇಲ್ಲವಾದಲ್ಲಿ ಸದರಿ ದಾವೆ ನಿಲ್ಲತಕ್ಕದ್ದಲ್ಲ.[2]

ಮೋಸ ಅಥವ ವಂಚನೆಯಿಂದ ನಡೆದಿದೆ ಎಂದು ಆರೋಪಿಸಲಾದ ದಾಖಲೆಯನ್ನು ಪ್ರಶ್ನಿಸುವುದು ಕಾಲಮಿತಿ ಕಾಯ್ದೆ ವಿಧಿ 91 ರಂತೆ 3 ವರ್ಷದಲ್ಲಿ ಪ್ರಶ್ನಿಸಬೇಕಿರುತ್ತದೆ. ಅಂತಹ ಮೋಸ ತಿಳಿದು ಬಂದ ತಾರೀಖಿನಿಂದ ಮೂರು ವರ್ಷದಲ್ಲಿ.[3]

ನ್ಯಾಯಾಲಯಕ್ಕೆ ವ್ಯಾಪ್ತಿಯಿಲ್ಲದೆ ಆದೇಶವನ್ನು ಮಾಡಿದೆ ಎಂಬ ವಿಚಾರವನ್ನು ಯಾವ ಹಂತದಲ್ಲಾದರೂ ಪ್ರಶ್ನಿಸಬಹುದು.[4]

---

[1] ಎ.ಐ.ಆರ್ 2017 ಎಸ್.ಸಿ 2491 – ಬಾಪುಸಾಹೇಬ್... ವಿ. ಮಹೇಶ್

[2] ಪ್ರೇಮ್ ಸಿಂಗ್ ವಿ. ಬಿರ್ಬಲ್ – 2006 (5) ಎಸ್.ಸಿ.ಸಿ 353

[3] ನಿಂಗವ್ವ ವಿ. ಬೈರಪ್ಪ – 1968 (2) ಎಸ್.ಸಿ.ಆರ್ 797

[4] ಬಲವಂತ್ ವಿ ಯಾದವ್ – ಎ.ಐ.ಆರ್ 2004 ಎಸ್.ಸಿ 4377

ವಿಭಾಗಕ್ಕಾಗಿ ಒಂದು ಮೊಕದ್ದಮೆಗೆ ಮಿತಿಯ ಆರಂಭಿಕ ಹಂತವು – ಮೊಕದ್ದಮೆ ಹಾಕುವ ಹಕ್ಕನ್ನು ಹೊಂದಿದಾಗ, ಆ ವಾದಿಯು ತನ್ನ ಅರ್ಹತೆಯ ನಿರಾಕರಣೆಯ ಬಗ್ಗೆ ಗಮನಹರಿಸಿದಾಗ.[1]

ದೆಹಲಿ ಹೈ ಕೋರ್ಟ್ ಕೇಸೊಂದರ ಸಂಧರ್ಬದಲ್ಲಿ ಹೆತ್ತವರು ಸತ್ತ 19 ವರ್ಷಗಳ ನಂತರ ವಿಭಾಗಕ್ಕಾಗಿ ಸಲ್ಲಿಸಿದ ದಾವೆ 12 ವರ್ಷದಲ್ಲಿ ವಿಧಿ 110 ಕಾಲಮಿತಿ ಕಾಯ್ದೆಯಲ್ಲಿ ಸಲ್ಲಿಸಲಾಗಿಲ್ಲ ಅಂತ ವಜಾ ಮಾಡಿದೆ. ಸದರಿ ಕೇಸಿನಲ್ಲಿ ದಾವೆಯ ವಾದಿ ಅರ್ಜಿಯಲ್ಲೇ ಆಕೆಯ ತಂದೆ ಸತ್ತ ನಂತರ ಆಕೆಯನ್ನು ದಾವ ಸ್ವತ್ತುಗಳಿಂದ ಹೊರಗಿಡಲಾಗಿದೆ ಎಂಬ ಅಂಶ ಇದೆ. ದಾವೆಯು ಯಾವುದೇ ದಾಖಲೆಯನ್ನು ಅವಲಂಬಿಸಿಲ್ಲ. ಎರಡು ವರ್ಷವಾದರೂ ದಾಖಲೆಗಳ ಪಟ್ಟಿಯನ್ನು ಹಾಕಿರುವುದಿಲ್ಲ. ಅರ್ಜಿಯಲ್ಲಿ ವಾದಿ ಎಂದು ಬಾಗಾಂಶ ಕೋರಿದಳು ಎಂದು ಬಾಗಾಂಶ ಕೊಡಲು ಅಲ್ಲಗಳೆಯಲಾಯಿತು ಎಂಬ ಬಗ್ಗೆ ಉಲ್ಲೇಕವಿಲ್ಲ. ಮೌಕಿಕವಾಗಿ ಬಾಗ ಕೇಳಿದ್ದೇನೆ ಎಂಬ ಬಗ್ಗೆ ಉಲ್ಲೇಕವಿದೆ. ಲಾಯರ್ ನೋಟೀಸಾಗಲೀ ಆಕೆಯ ನೋಟೀಸಿನ ಡಿಮ್ಯಾಂಡಾಗಲೀ ಇಲ್ಲ. ಆಕೆಯೇ ಹೇಳಿರುವಂತೆ 1988 ರಲ್ಲಿ ಉತ್ತಮವಾಗಿ 1993 ರಲ್ಲಿ ದಾವ ವ್ಯಾಜ್ಯ ಕಾರಣ ಪ್ರಾರಂಬವಾಗಿದೆ, 2006 ರ ಒಳಗೆ ದಾವ ಹಾಕಬೇಕಿತ್ತು, 2007 ರಲ್ಲಿ ದಾವೆ ಹಾಕಿರುವುದು ಕಾಲಮಿತಿಯಲ್ಲಿ ಇಲ್ಲ.[2]

ದಾವ ವಾದಿಯ ಅರ್ಜಿಯಲ್ಲಿ ಬರೆದಿರುವ ಹೇಳಿಕೆಗಳಿಂದ ದಾವೆಯು ಕಾಲಮಿತಿ ಕಾನೂನು ಸೇರಿ ಕಾನೂನು ರೀತ್ಯ ನಿರ್ಬಂದವಿದ್ದರೆ, ಅಂತಹ ವಾದ ಪತ್ರವನ್ನು ವಜಾ ಮಾಡಬಹುದಾಗಿರುತ್ತದೆ.[3]

---

[1] ಕೃಷ್ಣಪಿಳ್ಳೈ ವಿ. ಪದ್ಮನಾಭ ಪಿಳ್ಳೈ – 2004 (12) ಎಸ್.ಸಿ.ಸಿ 754

[2] ಅಮೃತ್ ಕೌರ್ ವಿ. ಸರಬ್ಜೀತ್ ಸಿಂಗ್ – (2008) 153 ಡಿ.ಎಲ್.ಟಿ 92

[3] ಹರ್ದೇಶ್ ಓರ್ಸ್ ವಿ ಹೆಡ್ಜ್ – 2007 (5) ಎಸ್.ಸಿ.ಸಿ 614

ದಾವ ವಾದ ಪತ್ರವನ್ನು ಅತೀ ಚಾಣಾಕ್ಷತನದಿಂದ ತಯಾರಿಸಿ ಕಲ್ಪನೆಯ ವ್ಯಾಜ್ಯ ಕಾರಣವನ್ನು ತಾಯಾರಿಸಿರುವ ದಾವೆಗಳನ್ನು ಮೊಳಕೆಯಲ್ಲೇ ತೊಡೆದುಹಾಕಬೇಕು, ಬೋಗಸ್ ವ್ಯಾಜ್ಯಗಳನ್ನು ಪ್ರಾರ್ಥಮಿಕ ಹಂತದಲ್ಲೇ ತೊಡೆದುಹಾಕಬಹುದು.[1]

ವಿಭಾಗ ದಾವೆಗಳಲ್ಲಿ ಪ್ರಾರ್ಥಮಿಕ ಡಿಕ್ರಿ ಘೋಷಣೆಯಾದ ಮೇಲೆ ಅಂತಿಮ ಡಿಕ್ರಿಗಾಗಿ ಅರ್ಜಿಯನ್ನು 12 ವರ್ಷದ ಒಳಗೆ ಸಲ್ಲಿಸಬೇಕು ಎಂಬ ನಿಯಮವಿಲ್ಲ. ಅಂತಿಮ ಡಿಕ್ರಿಯನ್ನು ಆದೇಶಿಸಿ ಸ್ಟಾಂಪ್ ಪೇಪರ್ ಮೇಲೆ ಮುದ್ರಿಸಿ ಪಾರ್ಟಿಗಳಿಗೆ ಕೊಡುವವರೆಗೆ ಅಮುಲ್ಜಾರಿಗೆ ಡಿಕ್ರಿ ಎನ್ನಿಸುವುದಿಲ್ಲ.[2]

ವಾದಿಗೆ ದಾವ ಹಾಕುವ ಹಕ್ಕು ಪ್ರಾಪ್ತವಾಗುವುದು ಸ್ವಷ್ಟವಾಗಿ ಪ್ರತಿವಾದಿಯಿಂದ ವಾದಿಯ ಹಕ್ಕುಗಳನ್ನು ಒಪ್ಪಿಕೊಳ್ಳದೆ, ತನ್ನ ಹಕ್ಕು ಬಂಗಮಾಡುವ ಬೆದರಿಕೆ ಇದ್ದಾಗ.[3]

ವಿಭಾಗ ದಾವೆಯಲ್ಲಿ ಪರಿಹಾರ ಕೊಡುವ ಮುಂಚೆ ಕ್ರಯ ಪತ್ರಗಳನ್ನು ರದ್ದು ಮಾಡುವ ಸ್ತಿತಿ ಇದ್ದರೆ, ಅಂತಹ ಸಂಧರ್ಬದಲ್ಲಿ ಪ್ರತಿವಾದಿ ತಕರಾರು ಸಲ್ಲಿಸಿರಲಿ ಬಿಡಲಿ ಕಲಂ 3 ಪರಿಮಿತಿ ಕಾಯ್ದೆಯಡಿಯಲ್ಲಿ ಕೋರಿರುವ ಪರಿಹಾರ ಕಾಲಮಿತಿಯಲ್ಲಿ ಇದೆಯೇ ಎಂಬ ಬಗ್ಗೆ ವಾಸ್ತವಾಂಶಗಳನ್ನು ಕಂಡುಹಿಡಿದು ತೀರ್ಪಿನಲ್ಲಿ ತೋರಬೇಕಿರುತ್ತದೆ.[4]

ಕಾಲಮಿತಿಯ ನಿಯಮಗಳು ಪಾರ್ಟಿಗಳ ಹಕ್ಕುಗಳನ್ನು ನಾಶಮಾಡುತ್ತವೆ ಎಂಬ ಅರ್ಥ ಇಲ್ಲ. ಅವು ಪಾರ್ಟಿಗಳು ತಡ

---

[1] ಅರವಿಂದನಮ್ ವಿ ಸತ್ಯಪಾಲ್ – 1977 (4) ಎಸ್.ಸಿ.ಸಿ 467

[2] ಕೊಟ್ಟೂರು ಬಸಪ್ಪ ವಿ. ವೀರಪ್ಪ – ಐ.ಎಲ್.ಆರ್ 2004 ಕರ್ನಾಟಕ 655

[3] ದಯಾಸಿಂಗ್ ವಿ. ಗುರುದೇವ್ ಸಿಂಗ್ – ಎ.ಐ.ಆರ್ 2010 ಎಸ್.ಸಿ.ಡಬ್ಲು 689

[4] ದೊಮೆಗುಂಟ ವಿ. ಗೌರಮ್ಮ – ಮನು/ ಕೆ.ಎ/ 0231/ 2019

ತಂತ್ರಗಳನ್ನು ಅವಲಂಬಿಸದಂತೆ ನೋಡುತ್ತವೆ, ಆದರೆ ಪ್ರಾಮಾಣಿಕವಾಗಿ ತಮ್ಮ ಪರಿಹಾರ ಪಡೆಯಲು ನೀಡುತ್ತವೆ. ಕಾನೂನು ಪರಿಹಾರ ಒದಗಿಸುವ ಉದ್ದೇಶ ಕಾನೂನು ಗಾಯದ ಕಾರಣಕ್ಕಾಗಿ ಆಗಿರುವ ಹಾನಿಯನ್ನು ಸರಿಪಡನೆ ಮಾಡುವುದು. ಕಾಲಮಿತಿ ಕಾನೂನು ಒಂದು ಜೀವಿತಾವಧಿಯನ್ನು ಕಾನೂನು ಗಾಯಕ್ಕೆ ಕಾನೂನು ಪರಿಹಾರ ಪಡೆಯಲು ನಿಗದಿಗೊಳಿಸಿದೆ. ಕಾಲ ಅಮೂಲ್ಯ ಮತ್ತು ಕಾಲಹರಣವಾದುದ್ದು ಪುನಃ ಎಂದಿಗೂ ಬರುವುದಿಲ್ಲ. ಸಮಯ ಕಳೆದುಹೋದ ಸಮಯದಲ್ಲಿ, ಹೊಸ ವ್ಯಾಜ್ಯಗಳು ಚಿಗುರಿ ನ್ಯಾಯಾಲಯಗಳನ್ನು ಸಮೀಪಿಸಿ ಹೊಸ ವ್ಯಕ್ತಿಗಳು ಕಾನೂನು ಪರಿಹಾರ ಹುಡುಕುವುದು ಅವಶ್ಯವಾಗುತ್ತದೆ. ಆದ್ದರಿಂದ ಪ್ರತಿ ಪರಿಹಾರಕ್ಕೂ ಒಂದು ಜೀವಿತಾವಧಿ ಸ್ಥಿರ ಮಾಡಬೇಕು. ಪರಿಹಾರಕ್ಕಾಗಿ ಪ್ರಾರಂಭಿಸುವಿಕೆ ಕೊನೆಯಿರದಿದ್ದರೆ ಅನಿಶ್ಚಿತತೆ ಮತ್ತು ಸಾಂದರ್ಭಿಕ ಅರಾಜಕತೆಗೆ ಕಾರಣವಾಗಬಹುದು. ಕಾನೂನಿನ ಮಿತಿಯನ್ನು ಹೀಗೆ ಸಾರ್ವಜನಿಕ ನೀತಿ ಗುರುತಿಸಲ್ಪಟ್ಟಿದೆ. ಇದು ದಾವೆಗೆ ಕಾಲ ನಿಗದಿ ಮಾಡುವುದು ಸಾಮಾನ್ಯ ಕಲ್ಯಾಣ ಆಗಿದೆ. ...... ಪ್ರತಿಯೊಂದು ಕಾನೂನು ಪರಿಹಾರ ಸಮಯದ ಒಂದು ಶಾಸನಬದ್ದವಾಗಿ ನಿಗದಿತ ಅವಧಿಗೆ ಜೀವಂತ ಇಟ್ಟುಕೊಳ್ಳುವುದನ್ನು ಮಾಡಬೇಕು ಎಂಬುದೇ ಆಲೋಚನೆ.[1]

ದಾವೆಯಲ್ಲಿ ಪ್ರತಿವಾದಿಯ ಲಿಖಿತ ತಕರಾರಿನ ಹೇಳಿಕೆಯಲ್ಲಿ ಕಾಲಮಿತಿ ಬಗ್ಗೆ ನಿರ್ದಿಷ್ಟ ಆಕ್ಷೇಪಣೆ ಇದ್ದಾಗ ನ್ಯಾಯಾಲಯ ವಿವಾದಾಂಶವನ್ನು ರಚಿಸಬೇಕು ಅದನ್ನು ದಾವ ತೀರ್ಮಾನದ ಸಮಯದಲ್ಲಿ ನಿರ್ಣಯಿಸಬೇಕು.[2]

---

[1] ಬಾಲಕೃಷ್ಣನ್ ವಿ. ಕೃಷ್ಣಮೂರ್ತಿ – ಎ.ಐ.ಆರ್ 1998 ಎಸ್.ಸಿ 3222

[2] ರಘು ಚಂದು ವಿ. ಲಕ್ಷ್ಮಿ ಮರಕತ್ತಿ – ಮನು/ ಕೆ.ಎ/ 1935/ 2019

ದಾವೆಯಲ್ಲಿ ವಾದಿಯ ಲಿಖಿತ ವಾದಪತ್ರ ಪರಿಗಣಿಸಿದಾಗ, ದಾವೆಯು ಕಲಮಿತಿ ಕಾನೂನು ಉಲ್ಲಂಘಿಸಿರುವುದು ಕಂಡು ಬಂದರೆ ಸಿವಿಲ್ ಪ್ರಕ್ರಿಯಾ ಸಂಹಿತೆ ಆದೇಶ 7 ನಿಯಮ 11(ಡಿ) ಅಡಿಯಲ್ಲಿ ಯಾವುದೇ ವಿಚಾರಣೆ ಇಲ್ಲದೆ ವಾದ ಪತ್ರವನ್ನು ತಿರಸ್ಕರಿಸಬಹುದು.[1]

ವಿಭಾಗ ದಾವೆಯು ಪುನರಾವರ್ತಿತ ವ್ಯಾಜ್ಯಕಾರಣವನ್ನು ಹೊಂದಿರುವ ಕಾರಣಕ್ಕೆ ಹಿಂದಿನ ದಾವೆ ಗೈರು ಹಾಜರಾತಿಗೆ ವಜಾ ಅಗಿದ್ದರೂ, ಇನ್ನೊಂದು ದಾವೆ ಸಲ್ಲಿಸಬಹುದು. – ಪ್ರಾರ್ಥಮಿಕ ತೀರ್ಪು ನೀಡುವಾಗ ಖರೀದಿದಾರರ ಹಾಜರಾತಿ ಅನವಶ್ಯ ಇಲ್ಲಿ ಕೋರ್ಟ್ ಕಂಡುಹಿಡಿಯುವುದು, ದಾವ ಆಸ್ತಿ ಕೋಪಾರ್ಸನರಿ ಸ್ವತ್ತೆ ಅಥವ ಒಟ್ಟು ಕುಟುಂಬದ ಸ್ವತ್ತೆ ಎಂದು, ಹೌದಾದಲ್ಲಿ ಕುಟುಂಬದ ಸದಸ್ಯರು ಯಾವ ಬಾಗಾಂಶಕ್ಕೆ ಅರ್ಹರು ಎಂಬುದು – ಬಾಗಾಂಶಗಳನ್ನು ಘೋಷಿಸಿ ಆಸ್ತಿಗಳನ್ನು ವಿಭಾಗಿಸಿ ಸ್ವಾಧೀನ ಹಸ್ತಾಂತರಿಸುವಾಗ ಮಾತ್ರ ಖರೀದಿದಾರರ ವರ್ಗಾವಣೆಗಳ ಸ್ವಭಾವತೆ, ಪಾತ್ರ ಮತ್ತು ಸಿಂದುತ್ವದ ಬಗ್ಗೆ ಗಮನಹರಿಸಲಾಗುತ್ತದೆ. ಈ ಸಮಯದಲ್ಲಿ ಅವರ ಪ್ರತಿಪಾದನೆಗಳನ್ನು ಕೇಳಬೇಕಿರುತ್ತದೆ ಮತ್ತು ಕ್ರಯಪತ್ರಗಳನ್ನು ಅನೂರ್ಜಿತಗೊಳಿಸಬೇಕಿರುತ್ತದೆ – ವಿಭಾಗ ದಾವೆಯಲ್ಲಿ ಸಹ ಸಮಾನಾಧಿಕಾರಿಗಳ ವಿರುದ್ದ ಆದೇಶ ಪಡೆದ ನಂತರ ಖರೀದಿದಾರರಿಂದ ಸ್ವಾಧೀನ ವಾಪಸ್ ಪಡೆಯುವ ಹಕ್ಕು ಪ್ರಾರಂಬವಾಗುತ್ತದೆ, ಖರೀದಿದಾರರ ವಿಚಾರದಲ್ಲಿ ಕಾಲಮಿತಿ ಇರುವುದಿಲ್ಲವಾದ್ದರಿಂದ ಖರೀದಿದಾರರ ವಿಚಾರದಲ್ಲಿ ಕಾಲಮಿತಿ ಅನ್ವಯಿಸುವುದಿಲ್ಲ.[2]

ಎರಡು ಅಥವಾ ಹೆಚ್ಚಿನ ಪರಿಹಾರಗಳನ್ನು ಮೊಕದ್ದಮೆಯಲ್ಲಿ ಕೇಳಿರುವಾಗ, ಪರಿಣಾಮಕಾರಿ ಪರಿಹಾರವು ದಾವೆಯ ಮಿತಿಯ

---

[1] ರಾಘವೇಂದ್ರ ಶರಣ್ ವಿ. ರಾಮ್ ಪ್ರಸನ್ನ – ಎ.ಐ.ಆರ್ 2019 ಎಸ್.ಸಿ 1430

[2] ಲಕ್ಷ್ಮೀನರಸಪ್ಪ ವಿ. ರುದ್ರಯ್ಯ – ಐ.ಎಲ್.ಆರ್ 2012 ಕರ್ನಾಟಕ 4129

ಅವಧಿಯನ್ನು ನಿರ್ಧರಿಸುತ್ತದೆ. ಉದಾಹರಣೆಗೆ, ಒಬ್ಬ ವಾದಿಯು ಒಂದು ಸ್ಥಿರ ಆಸ್ತಿಯ ಬಗ್ಗೆ ಅವನು ಪ್ರತಿವಾದಿಗೆ ಬರೆದುಕೊಟ್ಟಿರುವ ಕ್ರಯ ಪತ್ರವನ್ನು ರದ್ದುಗೊಳಿಸಿ ಮತ್ತು ಆಸ್ತಿಯ ಸ್ವಾಧೀನಕ್ಕೆ ಕೇಳಿದ್ದರೆ, ಕಾಲಮಿತಿ ಅವಧಿಯು ಮಿತಿ ಕಾಯಿದೆಯಲ್ಲಿನ ವಿಧಿ 59 ರ ಪ್ರಕಾರ ಮೂರು ವರ್ಷಗಳು. ಇಲ್ಲಿ ಪರಿಣಾಮಕಾರಿ ಅಥವಾ ಮುಖ್ಯ ಪರಿಹಾರವೆಂದರೆ ಕ್ರಯ ಪತ್ರದ ರದ್ದು ಮಾಡುವುದು, ಆಸ್ತಿ ವರ್ಗಾವಣೆ ಕಾಯ್ದೆಯ ಸೆಕ್ಷನ್ 5 ರ ಅರ್ಥದಲ್ಲಿ ಅದು ವರ್ಗಾವಣೆ ಆಗಿರುತ್ತದೆ. ಕ್ರಯ ಪತ್ರವು ವ್ಯಕ್ತಿಯ ವಿರುದ್ಧ ಅನೂರ್ಜಿತಗೊಳಿಸಬಹುದಾದ ಅಥವಾ ನಿರರ್ಥಕವಾಗಿದ್ದರೂ, ಅದು ಬಾಕಿ ಉಳಿದಿರುವಾಗ, ಅದು ವಾದಿಗೆ ಗಂಭೀರವಾದ ಗಾಯವನ್ನು ಉಂಟುಮಾಡಬಹುದು ಮತ್ತು ಆದ್ದರಿಂದ ಅವನು ಅದನ್ನು ನ್ಯಾಯನಿರ್ಣಯದಿಂದ ಅನೂರ್ಜಿತಗೊಳಿಸಲು ಅಥವಾ ನಿರರ್ಥಕಗೊಳಿಸಲು ಪ್ರಯತ್ನಿಸಬೇಕು, ಮತ್ತು ಕೋರ್ಟ್ ಅಂತಹ ಪರಿಸ್ಥಿತಿಯಲ್ಲಿ ಪತ್ರವನ್ನು ರದ್ದುಗೊಳಿಸುತ್ತದೆ. ಅದನ್ನು ರದ್ದುಗೊಳಿಸದಿದ್ದಲ್ಲಿ, ವಾದಿಯು ಸ್ವಾಧೀನ ಪಡೆಯಲು ಯಾವುದೇ ಹಕ್ಕನ್ನು ಪಡೆಯುವುದಿಲ್ಲ. ಆದ್ದರಿಂದ, ಬಹುಪಯೋಗಿ ದಾವೆಯಲ್ಲಿ, ಪರಿಣಾಮಕಾರಿ ಮುಖ್ಯ ಪರಿಹಾರಕ್ಕೆ ಸಂಬಂಧಿಸಿದಂತೆ ಮಿತಿ ಸಮಸ್ಯೆಯನ್ನು ನಿರ್ಧರಿಸಬೇಕು.[1]

ಕಾಲಮಿತಿ ಅಂಶಕ್ಕೆ ಸಂಬಂಧಪಟ್ಟಂತೆ, ವಿಲ್ ಅನ್ನು 1980 ರಲ್ಲಿ ನೋಂದಾಯಿಸಲಾಗಿದೆ ಮತ್ತು 1992 ರಲ್ಲಿ ಮಲ್ಲಪ್ಪ ಮೃತಪಟ್ಟರು. 1980 ರಲ್ಲಿ ಸ್ವತಃ ಪ್ರತಿವಾದಿ ನಂ. 1 ರ ಪರವಾಗಿ ನೋಂದಾಯಿತವಾದ ಮುಟೇಷನ್ ನಮೂದುಗಳ ಬಗ್ಗೆ ವಾದಿ ತಿಳಿದುಕೊಂಡಿರುವದು ಆಕೆಯ ವಿಷಯವಾಗಿದೆ. ಆ ಸಂದರ್ಭದಲ್ಲಿ, ಪ್ರತಿವಾದಿಯ ಸಂಖ್ಯೆ 1 ರ ಕಲಿತ ವಕೀಲರ ಪ್ರಕಾರ, ಒಂದು ಮೊಕದ್ದಮೆ ಹೂಡಲು ಅದು ಆರಂಭದ

---

[1] ನಾಗೇಂದ್ರ ವಿ. ಚೌಡಮ್ಮ – ಮನು/ ಕೆ.ಎ/ 2243/ 2017

ಹಂತವಾಗಿರುತ್ತದೆ. ಪರಿಮಿತಿ ಕಾಯ್ದೆಯ ವಿಧಿ 110 ರ ಪ್ರಕಾರ 12 ವರ್ಷಗಳಲ್ಲಿ ದಾವೆ ಸಲ್ಲಿಸಬೇಕು. ಆದ್ದರಿಂದ, ವಾದಿ 12 ವರ್ಷಗಳಲ್ಲಿ ಈ ಮೊಕದ್ದಮೆ ಹೂಡಬಹುದು. ಆದರೆ, ಈ ದಾವೆಯನ್ನು 1998 ರಲ್ಲಿ ಸ್ಥಾಪಿಸಲಾಯಿತು. ಅಂತಹ ಸಂದರ್ಭದಲ್ಲಿ, ನಿರ್ದಿಷ್ಟ ವೈರುದ್ಯ ಸಾಕ್ಷಿಗಳ ಅನುಪಸ್ಥಿತಿಯಲ್ಲಿ, ನ್ಯಾಯಾಲಯವು ಆ ಮೊಕದ್ದಮೆಯನ್ನು ಕಾಲಮಿತಿಯಲ್ಲಿ ಪ್ರತಿಬಂದಿಸುವ ಮೂಲಕ ಸರಿಯಾಗಿ ವಿಚಾರಣೆ ನಡೆಸಿತು.[1] (ಸಾವವ್ವ ವಿ. ಈಶ್ವರಪ್ಪ – 20–08–2014 ಕರ್ನಾಟಕ ಹೈಕೋರ್ಟ್)

ವಾದಿಯ ತಾತ ತಾನು ಸ್ವಯಾರ್ಜಿತವಾಗಿ ದಾವ ಸ್ವತ್ತು ಕೊಂಡಿದ್ದನು, ಅದು ಈರ್ವರಲ್ಲೂ ನಿರ್ವಿವಾದಿತ ಅಂಶವಾಗಿತ್ತು. ವಾದಿಯ ತಾತ ಮತ್ತು ಆತನ ಇಬ್ಬರು ಮಕ್ಕಳು 1982 ರಲ್ಲಿ ಪ್ರತಿವಾದಿ 9 ರವರಿಗೆ ಕ್ರಯಕ್ಕೆ ಕೊಟ್ಟಿದ್ದರು. ಕಂದಾಯ ದಾಖಲಾತಿಗಳಲ್ಲಿ ಆತನ ಹೆಸರು ಮುಟೇಷನ್ ಆಗಿತ್ತು. ನಿಯಮವನ್ನು ಪಾಲಿಸಿ ಲೇಔಟ್ ನಿರ್ಮಾಣಮಾಡಿ ಪ್ರತಿವಾದಿ 8 ಮತ್ತು ಇತರರಿಗೆ ಮಾರಿದ್ದರು. ವಾದಿಯು ಇಂತಹ ಅಂಶಗಳನ್ನು ಮುಚ್ಚಿಟ್ಟು ದಾವೆ ಹೂಡಿದ್ದರು. 1982 ರಲ್ಲಿ ಮಾರಾಟವಾದ ಕ್ರಯಪತ್ರಗಳನ್ನು ವಾದಿಯು ಪ್ರಶ್ನಿಸಿರಲಿಲ್ಲ. ಬರೀ ವಿಭಾಗಕ್ಕಾಗಿ ಮತ್ತು ಸ್ವಾಧೀನಕ್ಕಾಗಿ ದಾವೆ ಹಾಕಿರುವುದು ದಾವ ಆಸ್ತಿ ಪ್ರತಿವಾದಿ–9 ರವರ ಹೆಸರಿನಲ್ಲಿ ಇರುವಾಗೆಯೂ ಕೂಡ ಸರಿಯಲ್ಲ. ಕ್ರಯಪತ್ರಗಳನ್ನು ಪ್ರಶ್ನಿಸದೆ ವಾಜ್ಯಕಾರಣ ಇರುವುದಿಲ್ಲ.... ವಾದಿ ದಾವೆಯನ್ನು 1982 ರಿಂದ ಮೂರು ವರ್ಷದ ಕಾಲಮಿತಿಯಲ್ಲಿ ಸಲ್ಲಿಸಬೇಕಿತ್ತು.[2] (ಆರ್. ಸತೀಶ್ ಕುಮಾರ್ ಸಿಂಗ್ ವಿ. ಶ್ರೀರಾಮ್ ಸಿಂಗ್ – ಕರ್ನಾಟಕ ಹೈಕೋರ್ಟ್ 07–08–2014)

---

[1] https://indiankanoon.org/doc/136678341/

[2] https://indiankanoon.org/doc/187871580/

